ಮುದ್ರಕರು
ಎಸ್. ವಾಯ್. ಪವಾರ
ಧಾರವಾಡ ಪ್ರಿಂಟಿಂಗ ಪ್ರೆಸ್
ಧಾರವಾಡ



ಮೊದಲು ಮುದ್ರಣ : ನವಂಬರ ೧೯೫೯

ಬೆಲೆ : ಮೂರು ರೂಪಾಯಿ ಐವತ್ತು ನಯೆ ಪೈಸೆ



ಪ್ರಕಾಶಕರು
ರಾಮಣ್ಣ ಈಶ್ವರಪ್ಪ ಆಕಳವಾಡಿ
ಆಕಳವಾಡಿ ಬುಕ್ ಡಿಪೋ
ವಿಜಯಾ ರೋಡ
ಧಾರವಾಡ

# ಪ್ರಕಾಶಕರ ಮಾತು.

ಕನ್ನಡದಲ್ಲಿ ಕಾಯಿದೆ ಪುಸ್ತಕಗಳನ್ನು ನಾವು ಪ್ರಕಟಿಸುವ ಯೋಜನೆಮಾಡಿ ಈಗಾಗಲೇ ಅನೇಕ ಕಾಯಿದೆ ಪುಸ್ತಕಗಳನ್ನು ಪ್ರಕಟಿಸಿದ್ದೇವೆ. ನಮ್ಮ ಪ್ರಕಟನೆಗಳು ಜನಪ್ರಿಯವಾಗಿವೆ ಯೆಂಬದನ್ನು ಗ್ರಾಹಕರ ಪ್ರೋತ್ಸಾಹವೇ ಹೇಳುವುದು. ಇದು ನಮಗೆ ಸಂತೋಷವುಂಟುಮಾಡಿದೆ. ಈ ಪ್ರೋತ್ಸಾಹನೆಗಾಗಿ ನಾವು ಗ್ರಾಹಕರಿಗೆ ಕೃತಜ್ಞರಾಗಿದ್ದೇವೆ.

ಮೈಸೂರ ಕಾಯಿದೆಗಳಲ್ಲಿ ನಾವು ಗ್ರಾಮಪಂಚಾಯತ-ಲೋಕಲ್ ಬೋರ್ಡ ಕಾಯಿದೆ– ೧೯೫೪ ಇದನ್ನು ವಿವೇಚನೆ ಸಹಿತವಾಗಿ ಸಪ್ಟಂಬರದಲ್ಲಿ ಪ್ರಕಟಿಸಿದ್ದೇವೆ. ಅದು ತುಂಬಾ ಆದರದಿಂದ ಸ್ವೀಕೃತವಾಗಿದೆ. ಗುಣಗ್ರಾಹಿಗಳಾದ ಗ್ರಾಹಕರು ನಮ್ಮ ಬೆಂಬಲಿದ್ದಾರೆಂಬುದೇ ನಮಗೆ ಧೈರ್ಯತಂದುಕೊಟ್ಟಿದೆ. ಪಂಚಾಯತ—ಲೋಕಲ್ ಬೋರ್ಡಕಾಯಿದೆ ೧೯೫೪ರ ನಿಯಮಗಳನ್ನು ಶೀಘ್ರದಲ್ಲಿ ಪ್ರಕಟಿಸುತ್ತೇವೆ.

ಮೈಸೂರ ಸರಕಾರಿ ಸಂಘಗಳ ಕಾಯಿದೆ-೧೯೫೪ ಇದನ್ನು ಸಾದರಪಡಿಸಲು ನಮಗೆ ಸಂತೋಷವಾಗುತ್ತದೆ. ಇದರ ನಿಯಮಗಳನ್ನು ಕೂಡ ಇನ್ನು ಸ್ವಲ್ಪ ಸಮಯದಲ್ಲಿಯೇ ಪ್ರಕಟಿಸುವೆವು. ನಿಯಮಗಳ ಪ್ರತಿಗಳು ಬೇಕಾದವರು ನೋಂದಾಯಿಸಿಕೊಳ್ಳಬೇಕು.

ಈ ಪುಸ್ತಕವನ್ನು ಬರೆದುಕೊಟ್ಟ ಶ್ರೀ ನೆಗಳೂರ ರಂಗನಾಥ ಎಂ. ಎ. ಎಲ್. ಎಲ್. ಬಿ. ಅಡ್ವೊಕೇಟ, ಧಾರವಾಡ ಇವರಿಗೆ ನಾವು ಕೃತಜ್ಞರಾಗಿದ್ದೇವೆ. ಅಂದವಾಗಿ ಅಲ್ಪಕಾಲದಲ್ಲಿ ಮುದ್ರಿಸಿಕೊಟ್ಟ ಧಾರವಾಡ ಪ್ರಿಟಿಂಗ ಪ್ರೆಸ್ಸಿನವರಿಗೆ ನಾವು ಋಣಿಯಾಗಿದ್ದೇವೆ.

೨೦-೧೧-೧೯೫೪
ಧಾರವಾಡ

**ರಾಮಣ್ಣ ಈಶ್ವರಪ್ಪ ಅಕಳವಾಡಿ**
ಅಕಳವಾಡಿ ಬುಕ್ ಡಿಪೋ, ಧಾರವಾಡ

# ಬರೆದವನು ಹೇಳಿದ ಮಾತು

ಪುನರ್ಘಟಿತ ಮೈಸೂರ ರಾಜ್ಯಕ್ಕೆ ಅನ್ವಯಿಸಿರುವ ಈ ಮೈಸೂರ ಸಹಕಾರಿ ಸಂಘಗಳ ಕಾಯಿದೆ ೧೯೫೯- ಇದನ್ನು ಓದುಗರಿಗೆ ಸಾದರಪಡಿಸಲು ಸಂತೋಷವಾಗುತ್ತದೆ.

ಅಧಿಕೃತ ಭಾಷೆ ಇಂಗ್ಲಿಶು ಆಗಿದ್ದರೂ ಕಾಯಿದೆಗಳು ಜನರಿಗಾಗಿ ಇರುವುದರಿಂದ ಜನತೆಗೆ ತಿಳಿಯುವ ಭಾಷೆಯಲ್ಲಿ ಕಾಯಿದೆಗಳು ಆಗುವುದು ಯೋಗ್ಯ. ಆ ಕಾಲ ಬರುವ ತನಕ ಕಾಯಿದೆಗಳನ್ನು ಕನ್ನಡದಲ್ಲಿ ಭಾಷಾಂತರಿಸಿ ಹೇಳಬೇಕಾಗುತ್ತಿದೆ. ಇಲ್ಲಿ ಕಲಮುಗಳ ಭಾಷಾಂತರದ ಜತೆಗೆ, ಅವುಗಳಲ್ಲಿ ಅಡಕವಾದ ಅರ್ಥವನ್ನು ವಿವೇಚಿಸಲಾಗಿದೆ. ಇದರಿಂದ ಕಾಯಿದೆಯ ಅರ್ಥವು ಸ್ಪಷ್ಟವಾಗುತ್ತದೆ.

ಕನ್ನಡದಲ್ಲಿ ನಿಶ್ಚಿತಾರ್ಥಕೊಡುವ ಶಬ್ದಗಳನ್ನು ಇಂಗ್ಲಿಶ್ ಶಬ್ದಗಳಿಗೆ ಪ್ರತಿ-ಶಬ್ದಗಳನ್ನು ಕೊಡಲಾಗಿದೆ. ಮೂಲಕಾಯಿದೆಯು ಇಂಗ್ಲಿಶಿನಲ್ಲಿ ಇರುವುದರಿಂದ ಅದರ ಅರ್ಥವನ್ನು ಕನ್ನಡದಲ್ಲಿ ಹೇಗೆ ಮಾಡಲಾಗಿದೆ ಎಂಬುದು ತಿಳಿವುದಲ್ಲದೆ; ಕಾಯಿದೆಗೆ ಅನುಕೂಲವಾದ ವಿಶಿಷ್ಟಾರ್ಥದ ಕನ್ನಡ ಶಬ್ದಗಳ ಪ್ರಯೋಗವೂ ಬಳಕೆಯಲ್ಲಿ ಬರಲು ಅನುಕೂಲವಾಗುವುದು.

ಈ ಪುಸ್ತಕವನ್ನು ಬರೆಯಲು ಅನುಕೂಲ ಮಾಡಿಕೊಟ್ಟು ಅದರ ಮುಖಾಂತರ ಜನತೆಯ ಸಂಬಂಧವನ್ನು ಕಲ್ಪಿಸಿಕೊಟ್ಟದ್ದಕ್ಕಾಗಿ ಪ್ರಕಾಶಕರಿಗೆ ನಾನು ಕೃತಜ್ಞನಾಗಿದ್ದೇನೆ.

ಂತಿರಂಗ, ಸಾಧನಕೇರಿ,
ಧಾರವಾಡ.
೨೦—೧೧—೫೯

ನೆಗಳೂರ ರಂಗನಾಥ

# ಮೈಸೂರ ಸಹಕಾರಿ ಸಂಘಗಳ ಕಾಯಿದೆ ೧೯೫೯

---

## ಪರಿವಿಡಿ

# ಶಬ್ದಕೋಶ

## ಪುಸ್ತಕದಲ್ಲಿ ಬಂದ ಕ್ರಮದಲ್ಲಿ ಕೊಡಲಾಗಿದೆ

Cooperative ಸಹಕಾರಿ
Cooperation ಸಹಕಾರ
Societies ಸಂಘಗಳು
Consolidate ಏಕೀಕರಿಸು
Bye-Laws ಪ್ರೋಟನಿಯಮಗಳು
Limited ನಿಯಮಿತ
Unlimited ಅನಿಯಮಿತ
Liability ಹೊಣೆಗಾರಿಕೆ
Wind up ದುಂಡುಸುತ್ತು
Respectively ಕ್ರಮವಾಗಿ
Jointly ಸಾಮೂಹಿಕವಾಗಿ
Severally ವೈಯುಕ್ತಿಕವಾಗಿ
Nominal ನಾಮಮಾತ್ರ
Treasurer ಕೋಶಾಧ್ಯಕ್ಷ
Administrator ಆಡಳತೆಗಾರ
Prescribed ಗೊತ್ತುಮಾಡಿದ
Reference ಸಂಬಂಧಸೂಚನೆ
Corresponding ತತ್ಸಮಾನವಾದ
Promotion ಪುರಸ್ಕಾರ
Operation ಕಾರ್ಯಾಚರಣೆ
Facilitate ಸುಲಭಗೊಳಿಸು
Necessaries of life ಜೀವನಾವಶ್ಯಕ
Luxury ಐಷಾರಾಮು
Creditor ಧನಕೋ
Amendment ತಿದ್ದುಪಡೆ
Cancellation ರದ್ದತಿ
Dissolve ಮುರಗಡೆ ಮಾಡು

Compctent ಸಮರ್ಥ
Ware house ಸರಕಿನ ಮನೆ
Insolvent ನಾದಾರಿ
Associate-member ಸಾಹಾಯಕ ಸದಸ್ಯ
Vote by Proxy ಪರೋಕ್ಷ ಮತ
Vote ಮತಹಾಕು; ಮತದಾನ ಮಾಡು
Nominate ನಾಮಕರಣ ಮಾಡು
Interest ಹಿತಾಸಕ್ತಿ; ಹಿತಸಂಬಂಧ
Nominee ನಾಮಕರಣ ಮಾಡಲ್ಪಟ್ಟವನು
Heir ವಾರಸದಾರ
Legal Representative ಕಾಯಿದೇಶೀರ ಪ್ರತಿನಿಧಿ
Succession certificate ವಾರಸಾ ಸರ್ಟಿಫಿಕೇಟು
Indemmity Bond ಅಭಯ ಪತ್ರ
Management ಸಂಚಾಲನ
General Body ಸಾಮಾನ್ಯ ಸಭೆ
Records ದಾಖಲೆ ಪತ್ರ
Possession ಸ್ವಾಧೀನತೆ; ಕಬಜಾ
Privilege ಬಾಧ್ಯತೆಗಳು

Exemption ವಿನಾಯಿತಿ
Tax ಕರ
Duty ತೆರಿಗೆ
Fee ಫೀ
Set off ಸರಿಪಡಿಸುವಿಕೆ
Consider ಸಮಾಲೋಚನೆ ಮಾಡು
Despose off ವಿಲೆವಾಟ ಮಾಡು
Requisition ಬೇಡಿಕೆ
Jurisdiction ಅಧಿಕಾರ ಕ್ಷೇತ್ರ
Assets ಸೊತ್ತು
Charge ಅಧಿಕಾರ ಭಾರ
Entry ದಾಖಲೆ
Dividend ಲಾಭ್ಯಾಂಶ
Order ಹುಕುಮು
Decree ಹುಕುಮುನಾಮೆ
Compulsory ಸಕ್ತಿ
Endorsement ಹಸ್ತಾಂತರ ಬರೆಹ
Extinguish ನಷ್ಟಮಾಡು
Direct ಪ್ರತ್ಯಕ್ಷ
Indirect ಅಪ್ರತ್ಯಕ್ಷ
Partnership ಪಾಲುಗಾರಿಕೆ
Apex Society ಶಿಖರ ಸಂಘ
Disposal ವಿಲೇವಾಟ
Subsidy ಸಹಾಯಧನ
Over-ride ಮೇಲ್ವಾಯು
Security ಭದ್ರತಾ ಠೇವು

Contribution ವಂತಿಗೆ
Audit ಲೆಕ್ಕ ತಪಾಸಣೆ
Inquiry ವಿಚಾರಣೆ
Inspection ಪರಿಶೀಲನೆ
Over Due ಅತೀತ ಕಾಲಬಾಕಿ
Eliminate ಇಲ್ಲದಾಗಿಸು
Efface ರೂಪುಗೆಡಿಸು
Manipulate ಕೈಚಳಕಮಾಡು
Dispute ತಂಟೆ
Nominee ನಾಮಕರಣ ವ್ಯಕ್ತಿ
Disposal ನಿಕಾಲೆ
Inter Locutory ಮಧ್ಯಂತರ
Arbitrator ಮಧ್ಯಸ್ಥಗಾರ
Expedient ಪ್ರಸಂಗೋಚಿತ
Effect ಪಾರಿಣಾಮಿಕ ಹಕ್ಕುಗಳು
Actionable claim ಕ್ರಮ-ಯೋಗ್ಯ ಮಾಗಣೆ
Liquidator ಋಣ ವಿಮೋಚಕ
Claimant ಮಾಗಣೆದಾರ
Trustee ಧರ್ಮದರ್ಶಿ
Mortgage ಒತ್ತಿ
Redemption ವಿಮೋಚನೆ
Consult ಆಲೋಚನೆ ಮಾಡು
Surety ಜಾಮೀನದಾರ
Defaulter ತಪ್ಪಿತಸ್ಥ
Regulation ಕ್ರಮನಿಯಮ
Precautionery ಮುಂಜಾಗ್ರತೆಯ
Weeding ಕಳೆತೆಗೆಯುವುದು

Harvesting ಒಕ್ಕುವುದು
Step-in-aid ಸಹಾಯಕ್ರಮ
Revision ಪರಾಮರ್ಶೆ
Review ಪುನವಿಮರ್ಶೆ
Annul ರದ್ದುಮಾಡು
Propriety ಔಚಿತತ್ಯ
Consent ಸಮ್ಮತಿ
Connivance ಸಂಗನ ಮತ
Good faith ಸದ್ಭಾವನೆ
List ಯಾದಿ
Prima facie ಪ್ರಥಮ ದರ್ಶನೀ
Proof ಸಾಬೀತು
Entry ನಮೂದಾದ ಸಂಗತಿ
Copy ನಕಲು
Cash Credit ನಗದು ಪತ್ತು
Returns ವಿವರ ಪತ್ರಿಕೆ
Modification ಮಾರ್ಪಾಟು
Legeslative Assembly ಶಾಸನ ಸಭೆ
Legeslative Council ಶಾಸನ ಪರಿಷತ್ತು

## ಮೈಸೂರ ಸಹಕಾರಿ ಸಂಘಗಳ ಕಾಯಿದೆ

## ೧೯೫೯

# ಪ್ರಸ್ತಾವನೆ

ಹನಿ ಕೂಡಿದರೆ ಹಳ್ಳ; ತೆನಿ ಕೂಡಿದರೆ ರಾಶಿ; ಎಂಬ ಮಾತುಗಳನ್ನು ನಮ್ಮ ನಾಡಿನಲ್ಲಿ ಎಲ್ಲರ ಬಾಯಲ್ಲಿಯೂ ಕೇಳುತ್ತೇವೆ. "ಕೈ ಕೂಡಿದರೆ ಕಾಮಧೇನು" ಎಂಬುದನ್ನು ಮನಸ್ಸಿನಲ್ಲಿ ಮೂಡುವಂತೆ ಮಾಡುವುದೇ ಸಹಕಾರ. ಹನಿಗಳು ಎಷ್ಟು ಬಿದ್ದರೂ ಅವು ಬೇರೆಯಾಗಿಯೆ ಉಳಿದರೆ ಆರಿ ಹೋಗುವುವು. ತೆನಿಗಳು ಕೂಡದಿದ್ದರೆ, ರಾಶಿಯಾಗುವುದೆಂತು ? ಈ ವಿಷಯವನ್ನು ಬಾಯಿಂದ ಆಡಿದರೂ ಕೈಯಿಂದಮಾಡುವ ಪ್ರಸಂಗ ಬಂದಾಗ ಆ ಮಾತುಗಳು ಮರೆತುಹೋಗಿಬಿಡುತ್ತವೆ. ಆದ್ದರಿಂದ ಕಾಮಧೇನುವನ್ನು ಪಡೆದಿದ್ದರೂ ಬರಿಗೈಯಿಂದ ಕುಳಿತವರಾಗಿದ್ದೇವೆ. ಕೈಗಳು ಕೂಡಬೇಕು; ಕೈಗೆ ಕೈ ಕೂಡಬೇಕು. ಅದೇ ಬೆಳವಣಿಗೆಯ ಸಂಕೇತ. ಕೈಕೂಡಿದರೆ ಬೇಡಿದ್ದೆಲ್ಲ ಬರುವುದು; ಅದೇ ಕಾಮಧೇನು. ಬಾಳು ಬದುಕು ಆದ ಲಕ್ಷಣವು ಅದು. ಅದನ್ನು ಮರೆತರೆ ಬದುಕು ಬಾಳುವುದಿಲ್ಲ; ಬಾಳು ಹಾಳಾಗುವುದು.

ಒಂದೊಂದಾಗಿ ಇದ್ದಾಗ ಆ ವಸ್ತುವಿಗೆ-ವ್ಯಕ್ತಿಗೆ-ಅಷ್ಟೇ ಬೆಲೆ. ಎರಡು ಕೂಡಿದಾಗ, ಕೂಡಿ ಕೆಲಸ ಮಾಡಿದಾಗ ಒಂದೊಂದು ಇದ್ದು ಕೂಡಿದುದರ ಬೆಲೆಯಕಿಂತ ಹೆಚ್ಚಾಗುವುದು. ಒಂದು ಒಂದು ಕೂಡಿದರೆ ಎರಡು ಅಷ್ಟೇ ಆಗುವುದಿಲ್ಲ. ಒಂದು ಒಂದು ಕೂಡಿದರೆ ಮೂರು. ಈ ಬೆಲೆಯು ಸಹಕಾರದಿಂದ ಬರುವುದು. ಇದನ್ನು ತಿಳಿಯಬೇಕು; ತಿಳಿದು ಬಾಳಬೇಕು. ಅಂದಾಗ ಬಾಳು ಎಂಬುದು ಸಹಜೀವನವಾಗುವುದು; ಸುಖಜೀವನವಾಗುವುದು.

ಬಾಳಗೊಟ್ಟು ಬಾಳುವುದೇ ಸಹಜೀವನ. ಬೇರೆ ಬೇರೆಯಾಗಿ ಇದ್ದವು ಪ್ರತ್ಯೇಕವಾಗಿ ಬಾಳಲು ಯೋಗ್ಯವಾದವುಗಳೇ ಆಗಿವೆಯೆಂಬುದು ಮೂಲ ಮಾತು. ಆದರೆ ಅವು ಒಂದಕ್ಕೊಂದು ಪೋಷಕವಾದರೆ, ಎರಡೂ ಬಾಳುವುವು; ಬದುಕುವುವು; ಬೆಳೆಯುವುವು. ಒಂದು ಮತ್ತೊಂದನ್ನು ಶೋಷಿಸುವ ಪ್ರವೃತ್ತಿ ತಳೆದಾಗ ಒಂದು ಮತ್ತೊಂದನ್ನು ನುಂಗಲು ಪ್ರಯತ್ನ ಮಾಡುವುದು; ಇದರಿಂದ ಎರಡೂ ಹಾಳಾಗುವ ಸಂಭವ ಹೆಚ್ಚಾಗಿರುತ್ತದೆ. ತಾನೇ ಹಾಳಾಗುವ ಹಾಗೆ

ಉಪದ್ರವಿಯಾಗಿ ಬಾಳುವುದು ಜಾಣತನದ ಲಕ್ಷಣವಲ್ಲ. ತಾನು ಬೆಳೆಯಬೇಕೆಂಬ ಸ್ವಾರ್ಥದಲ್ಲಿಯೂ ಇತರರನ್ನು ಪೋಷಣೆ ಮಾಡುವ ಪರಾರ್ಥವು ಇದೆಯೆಂದು ತಿಳಿಸುವುದೇ ಸಹಕಾರ. ಸಹಕಾರವೆಂದರೆ ಸ್ವಾರ್ಥತ್ಯಾಗವಲ್ಲ. ತನ್ನ ಸ್ವಾರ್ಥಕ್ಕಾಗಿ ಪರರಪೋಷಣೆ ಮಾಡುವುದು ಸಹಕಾರ. ಸ್ವಾರ್ಥತ್ಯಾಗದಿಂದ ಆತ್ಮೋದ್ಧಾರವಾದೀತೆ ಹೊರತು ಪರೋಪಕಾರವಾಗದು. ಪರೋಪಕಾರವನ್ನು ಸ್ವಾರ್ಥದ ಉದ್ದೇಶವಿಟ್ಟುಕೊಂಡು ಮಾಡಿದರೂ ಅದರಿಂದ ಜೀವನ ವಿಕಾಸವಾಗುವುದು. ಪರಿಣಾಮವು ಒಳ್ಳೆಯದಾಗುವುದರಿಂದ ಕಾರಣವು ಅಷ್ಟು ಮಹತ್ವವಾಗಿ ಉಳಿವುದಿಲ್ಲ. ಪರಿಣಾಮ ಕೆಟ್ಟಾಗುವಾಗ ಕಾರಣವು ಒಳ್ಳೆಯದಿದ್ದರೂ ಬೆಲೆ ಬರುವುದಿಲ್ಲ. ಈ ಪ್ರಪಂಚದಲ್ಲಿ ಪರಿಣಾಮ ಫಲದಿಂದಲೇ ಕಾರಣಗಳ ಗುಣ-ಗಣ್ಯತೆಯನ್ನು ಅಳೆಯುವುದು ರೂಢಿಯಾಗಿದೆ.

ಸಮಾಜದಲ್ಲಿ ವೃತ್ತಿಗಳು ಅನೇಕ; ಪ್ರವೃತ್ತಿಗಳ ತಕ್ಕಂತೆ ವೃತ್ತಿಗಳು ಆಗಿರಬೇಕು. ಆದರೆ ಒಮ್ಮೊಮ್ಮೆ ಅದು ಸಾಧ್ಯವಾಗದೆ ಆರ್ಥಿಕ ವ್ಯವಸ್ಥೆಯಲ್ಲಿ ಒಂದೊಂದು ವೃತ್ತಿಯು ಅವಶ್ಯವಾದಾಗ ಅಲ್ಲಿ ಪ್ರವೃತ್ತಿಯು ಮುಖ್ಯವಾಗಿ ಉಳಿಯದು. ಸಮಾಜ ವ್ಯವಸ್ಥೆಯು ಮುಖ್ಯವಾಗುವುದು. ವ್ಯಕ್ತಿಯು ತನ್ನ ಪ್ರವೃತ್ತಿಗನುಸಾರವಾಗಿ ವೃತ್ತಿಯನ್ನು ಅವಲಂಬಿಸುವುದರ ಬದಲು ಸಮಾಜದ ವ್ಯವಸ್ಥೆಯಲ್ಲಿ ಒಂದು ಭಾಗವಾಗಿ ಬೆಳೆಯಬೇಕಾಗುವುದು. ವ್ಯಕ್ತಿ ಹಾಗೂ ಸಮಾಜದಲ್ಲಿಯ ವ್ಯವಸ್ಥಾತ್ಮಕ ಸಂಬಂಧದಿಂದ ಯಾವಾಗಲೂ ಸಮಾಜವು ವ್ಯಕ್ತಿಯನ್ನು ತನ್ನ ಅಂಕಿತದಲ್ಲಿ ಇಟ್ಟುಕೊಳ್ಳಲು ಬಯಸುತ್ತದೆ. ಆದರೆ ವ್ಯಕ್ತಿಯು ಸಮಾಜದ ಸಾಮರ್ಥ್ಯವನ್ನು ಅರಿತು ತನ್ನ ಪ್ರಭಾವವನ್ನು ಅದರ ಮೇಲೆ ಬೀರುವ ಸಾಮರ್ಥ್ಯಗಳಿಸಿಕೊಂಡರೆ, ಸಮಾಜವು ವ್ಯಕ್ತಿಯನ್ನು ಹಿಂಬಾಲಿಸುತ್ತದೆ. ಈ ವ್ಯಕ್ತಿ–ಹಾಗೂ ಸಮಾಜಗಳ ಏರಾಟ ನಡೆದಾಗ ವ್ಯಕ್ತಿಯ ವಿಕಾಸವೂ ಪೂರ್ತಿಯಾಗದು. ಸಮಾಜದ ವಿಕಾಸವೂ ಪೂರ್ತಿಯಾಗದು. ಏರಾಟದಲ್ಲಿ ಹೋರಾಟದ ಪ್ರವೃತ್ತಿ ಕಂಡು ಬಂದು ಗೆದ್ದವನೂ ಸೋತಿರುತ್ತಾನೆ. ಸೋತವನು ಸತ್ತಿರುತ್ತಾನೆ.

ಆದರೆ, ವ್ಯಕ್ತಿಯನ್ನು ಪೋಷಿಸುವ ಪ್ರವೃತ್ತಿಯುಳ್ಳ ಸಮಾಜವಿದ್ದರೆ ಸಮಾಜವನ್ನು ಬೆಳೆಸುವ ವ್ಯಕ್ತಿಯಿದ್ದರೆ-ಎರಡೂ ಬೆಳೆಯುವುವು. ಹೀಗೆ ಅಭಿವೃದ್ಧಿಯಾಗಬೇಕಾದರೆ ಪೋಷಕ ಪ್ರವೃತ್ತಿ ಬೆಳೆಯಬೇಕು. ಅದು ಬರುವುದು ಸಹಕಾರದಿಂದ. ಸಹಕಾರದಲ್ಲಿ ಸಮಭಾವವು ಅಡಕವಾಗಿರುವುದು. ತಾನು ಮೇಲು ಇನ್ನೊಂದು ಕೀಳು ಎಂಬ ವೈಷಮ್ಯಭಾವನೆಯಲ್ಲಿ ಸಹಕಾರ ಹುಟ್ಟದು. ತಾವೆಲ್ಲ ಸಮನಾಗಿದ್ದು ಸ್ವತಂತ್ರವಾಗಿದ್ದು ಸಮಾಜದ ಪೋಷಣೆಗೆ ಆಗತ್ಯ ಹಾಗೂ

ಅನಿವಾರ್ಯ ಘಟಕಗಳಾಗಿದ್ದು ಬೆಳೆಯಬೇಕೆಂಬ ಬಯಕೆಯಿದ್ದರೆ ಆಗ ಸಹಕಾರವೊಂದೇ ತಾರಕಮಂತ್ರ. ಇದು ವ್ಯಕ್ತಿ ವ್ಯಕ್ತಿಗೂ ಅನ್ವಯಿಸುವುದು; ವ್ಯಕ್ತಿ-ಸಮಾಜಕ್ಕೂ ಅನ್ವಯಿಸುವುದು; ಸಮಾಜದ ವಿದಧಅಂಗಗಳಿಗೂ ಅನ್ವಯಿಸುವುದು.

ನಾವೀಗ ವಿಚಾರಿಸಬೇಕಾದ ಭಾಗವು ಸಮಾಜದ ವಿವಿಧ ಅಂಗಗಳಲ್ಲಿ ಉಂಟಾಗಬೇಕಾಗಿದ್ದ ಸಹಕಾರದ ಬಗ್ಗೆ. ಈ ಸಂಬಂಧದಲ್ಲಿಯೇ ಆಧುನಿಕ ಜೀವನದಲ್ಲಿ ಸಹಕಾರದ ತತ್ವವು ತಲೆದೋರಿತು. ಐತಿಹಾಸಿಕ ಘಟನೆಗಳ ಮೂಲಕ ಸಮಾಜವು ವ್ಯವಸ್ಥಿತವಾಗಿ ಬೆಳೆಯದೆ, ಆಘಾತಗಳ ಮೂಲಕ ಅವುಗಳನ್ನು ದಕ್ಕಿಸಿಕೊಂಡೋ ಅರಗಿಸಿಕೊಂಡೋ ಆವುಗಳಿಗೆ ಬಲಿಯಾಗಿ ಚೀತರಿಸಿಕೊಂಡೋ, ರೂಪುಕಳೆದುಕೊಂಡು, ರೂಪುಗೆಟ್ಟು ಹೊಸ ರೂಪು ಪಡೆಯುತ್ತ ಹೋಯಿತು. ಹೀಗಾಗಿ ಭಾರತೀಯ ಸಮಾಜದಲ್ಲಿ ಭಾರತಿಯತ್ವವು ಉಳಿಯದೆ ಹೋಯಿತು. ಆದ್ದರಿಂದ ನಮ್ಮದೆಂಬ ಮಾತು, ದಾರಿ, ಇವು ದಿಕ್ಕು ಕಾಣದೆ ಹೋದುವು. ಪರಕೀಯರ ಆಡಳಿತದ ಮೂಲಕ ಪರಸಂಸ್ಕೃತಿಯ ಪ್ರಭಾವದ ಮೂಲಕ ಪರವಿದ್ಯಾ ಪ್ರಸಾರದ ಮೂಲಕ, ಹೆರವರ ಸೊಂಡಿಯಿಂದ ನಮ್ಮ ಹೊಟ್ಟೆತುಂಬುವಂತೆ ಮಾಡಿಕೊಳ್ಳುವ ಹವ್ಯಾಸಕ್ಕೆ ಬೀಳಬೇಕಾಯಿತು. ಇದು ಪರಕೀಯವಾಗಿದೆಯೋ ಸ್ವಕೀಯವಾಗಿದೆಯೋ ಎಂಬ ವಿಚಾರಶಕ್ತಿಕೂಡ ಮಂಕಾಗಿ ಹೋಗಿಬಿಟ್ಟಿತ್ತು. ಏನೇ ಆದರೂ ಎಚ್ಚರಿಕೆ ಬಂದಾಗ ಅರಿವು ಮೂಡತೊಡಗಿತ್ತು. ಆ ಅರಿವು ಭಾರತದ ಸ್ವಾತಂತ್ರ್ಯದ ಪ್ರಾಪ್ತಿಯ ಹಸಿವನ್ನು ಹುಟ್ಟಿಸಿತ್ತು.

ನಮ್ಮ ದೇಶದಲ್ಲಿಯ ಒಟ್ಟು ಕುಟುಂಬವು-ಅವಿಭಕ್ತ ಕುಟುಂಬವು ಸಹಕಾರದ ಉತ್ತಮ ಮಾದರಿ. ಕುಟುಂಬದ ಎಲ್ಲ ಸದಸ್ಯರೂ ಕುಟುಂಬದ ಏಳಿಗೆಗಾಗಿ, ಉತ್ಕರ್ಷಕ್ಕಾಗಿ ದುಡಿಯತಕ್ಕದ್ದು. ಕುಟುಂಬದ ಉತ್ಕರ್ಷದಲ್ಲಿ ತನ್ನ ಸ್ವಂತದ ಉನ್ನತಿಯನ್ನು ಮಾಡಿಕೊಳ್ಳತಕ್ಕದ್ದು. ಪ್ರತಿಯೊಬ್ಬನೂ ತನ್ನ ಯೋಗ್ಯತೆಯಂತೆ ದುಡಿದು ತನ್ನ ಆವಶ್ಯಕತೆಯಷ್ಟು ಪಡೆದುಕೊಳ್ಳಬೇಕು. ಈ ಸಮತಾವಾದಕ್ಕೆ ಅಲ್ಲಿಯ ಅಂತಃಸತ್ವವಾಗಿದ್ದ ಸಹಕಾರವೇ ತಾಯಿಬೇರು. ನಮ್ಮ ದೇಶದಲ್ಲಿ ಯಾವ ಸ್ಥಿತ್ಯಂತರವಾಗಿದ್ದರೂ ಅವಿಭಕ್ತಕುಟುಂಬದ ಪದ್ಧತಿಯು ಸಡಿಲಾಗಿದ್ದಿಲ್ಲ. ಅದರಲ್ಲಿ ಅಡಗಿದ ಶಕ್ತಿ-ಸಾಮರ್ಥವನ್ನೂ ಅಡಕವಾದ ಸಹಕಾರ ತತ್ವವನ್ನೂ ತಿಳಿಯದೇ ಹೋಗಿ ದಾಯಾದಿತನ—ಭಾಗಾದಿತನಗಳನ್ನೇ ಬಯಲಿಗೆ ತಂದು ಒಟ್ಟು ಕುಟುಂಬ ಒಡೆದು ಹೋಗಿ ಒಂಟಿ ಕುಟುಂಬಗಳಾಗಿ ರೂಪಿಸಲು ಕಾರಣರಾದೆವು. ಪರದೇಶಗಳಲ್ಲಿ ಬೆಳೆದು ರೂಪು ತಾಳಿದ ಸಹಕಾರ ತತ್ವವನ್ನು ನಮ್ಮ ದೇಶಕ್ಕೆ ಅನ್ವಯಿಸಬೇಕೆಂದು ಚಳವಳ ಪ್ರಾರಂಭವಾಗುವ ಸಮಯಕ್ಕೇನೆ, ಅವಿಭಕ್ತ ಕುಟುಂಬವು ಹೆಸರು ಕೆಡಿಸಿಕೊಳ್ಳಲು ಪ್ರಾರಂಭವಾಯಿತೆನ್ನುವುದು ಐತಿಹಾಸಿಕ ಪರಂಪರೆಯಲ್ಲಿ ಒಂದು ಮೋಜಿನ ಘಟನೆಯಾಗಿದೆ.

"ಮನೆಯ ಮಡದಿ ಮುದ್ದಲ್ಲ; ಹಿತ್ತಲ ಗಿಡ ಮದ್ದಲ್ಲ" ಎಂಬಂತೆ ಆಗಿ, ಭಾರತದ ಸಂಸ್ಕೃತಿಯ ಲಕ್ಷಣವಾಗಿದ್ದ ಅವಿಭಕ್ತ ಕುಟುಂಬವು ನಮಗೆ ಸಹಕಾರ ತತ್ವನ್ನು ತಿಳಿಸಿದೆ ಹೋಯಿತು. ಪರದೇಶಗಳಲ್ಲಿ ಅಲ್ಲಿಯ ನಾಗರಿಕತಾ ವಿಕಾಸ ಕ್ರಮದಲ್ಲಿ ಮೊನ್ನೆ ಮೊನ್ನೆ ರೂಪುತಾಳಿದ ಸಹಕಾರತತ್ವವು ಆ ಸ್ವರೂಪದಲ್ಲಿ ನಮಗೆ ಆಪ್ಯಾಯಮಾನವಾಗಿ ಬಂದಿತು. "ಒಳ್ಳೆಯದು ಎಲ್ಲಿ ಇದ್ದರೂ ಒಳ್ಳೆಯದು" ಎಂಬ ಮಾತು ಕೇವಲ ಪರಭಾಷೆ, ಪರಸಂಸ್ಕೃತಿ ಇವುಗಳಿಗೆ ಮಾತ್ರ ಅನ್ವಯಿಸದೆ, ಸ್ವಭಾಷೆ-ಸ್ವಸಂಸ್ಕೃತಿಯಲ್ಲಿ ಒಳ್ಳೆಯದಿದ್ದರೂ ಅದನ್ನು ಮನ್ನಿಸಬಾರದೆ? "ಗುಣಾಃ ಪೂಜಾಸ್ಥಾನಂ" ಎಂದು ಸಾರಿದವರು ತಮ್ಮಲ್ಲಿಯ ಗುಣಗಳನ್ನು ಮರೆತುದು ಗೌಣವಿಲ್ಲವೆ? "ಯಾವ ಗುಡಿಯಲ್ಲಾದರೇನು ನಿದ್ರೆ ಬಂದರೆ ತೀರಿತು" ಎಂಬ ಮನೋಭಾವವು ಬೈರಾಗಿಯ ಮನೋಭಾವ. ಮನೆಯಿದ್ದವನು ಮೊದಲು ಗುಡಿಯನ್ನು ಆಶ್ರಯಿಸುವುದು ತಪ್ಪು. ಮನೆಯಲ್ಲಿಯೇ ನೆಮ್ಮದಿಯುನ್ನುಂಟಾಗುವ ಹಾಗೆ ಮಾಡಿದರೆ, ಮನೆಯೂ ಉಳಿಯುವುದು; ನೆಮ್ಮದಿಯೂ ಬರುವುದು. ವಾತಾವರಣವೂ ಮೈಗೂಡುವುದು; ಕೇವಲ ನೆಮ್ಮದಿಗಾಗಿ ಹೊರಗಿನಿಂದ ತತ್ವಗಳನ್ನು ಹಿಡಿದುತಂದು ಮನೆ ಹೊಗ್ಗಿಸಿದರೆ, ತತ್ವವು ಉಳಿವುದು; ಆದರೆ ಮನೆ ಹಾಳಾಗುವುದು. ಮನೆ ಹಾಳಾದ ಮೇಲೆ ಯಾವ ತತ್ವವನ್ನು ತೆಗೆದುಕೊಂಡು ಮಾಡುವದಾದರೂ ಏನು?

ಎರವಲಾಗಿ ತಂದದ್ದು ಶಾಶ್ವತವಾಗಿ ಉಳಿಯುವುದಿಲ್ಲ. ನೆಲದಲ್ಲಿಯೇ ಬೆಳೆದದ್ದು ನೆಲೆ ನಿಲ್ಲುವುದು. ಅದಕ್ಕಾಗಿ ಈ ಎಲ್ಲ ಮಾತುಗಳನ್ನು ಹೇಳಬೇಕಾಗುವುದು. ಸಹಕಾರವು ನಮ್ಮ ದೇಶಕ್ಕೆ, ನಮ್ಮ ನೆಲಕ್ಕೆ ಹೊಸದಲ್ಲ. ನಮ್ಮಲ್ಲಿಯ ಸಹಕಾರ ತತ್ವವು ಬಾಳು, ಬಾಳಗೊಡು ಎಂಬ ಸಹಜೀವನವನ್ನು ಬೀಜ ಮಂತ್ರವನ್ನಾಗಿ ಮಾಡಿಕೊಂಡಿದೆ. ಒಂದು ಉತ್ತಮ ಒಟ್ಟು ಕುಟುಂಬವು ಈ ಸಹಕಾರದ ಉತ್ತಮ ಮಾದರಿಯಾಗಿದೆ. ನಮಗೆ ಎಲ್ಲಿ ಸಹಕಾರವು ಅಗತ್ಯವಾಗಿರುವುದೋ ಅಲ್ಲಿ ಈ ಪೋಷಕ ಪ್ರವೃತ್ತಿಯು ಅಗತ್ಯತೆ ಕಂಡುಬಂದಿದೆ. ಅದು ನಮ್ಮ ಸಮಾಜ ವ್ಯವಸ್ಥೆಯಲ್ಲಿಯ ತಾರಕ ಶಕ್ತಿಯಾಗಿ ಬೆಳೆಯಬೇಕಾಗಿದೆ. ಆದ್ದರಿಂದ ನಮ್ಮ ಸಮಾಜ ವ್ಯವಸ್ಥೆಯು ರೂಪುಗೊಂಡ ಕಾರಣಗಳನ್ನು ತಿಳಿಯಬೇಕಾಗಿದೆ. ಅದನ್ನು ತಿಳಿದು ಅಲ್ಲಿ ಹೊಸದಾಗಿ ಚಿಗುರಿದ ಶೋಷಕ ಪ್ರವೃತ್ತಿಯು ಇಲ್ಲದಂತೆ ಮಾಡಲು ಪ್ರಯತ್ನಗಳನ್ನು ಮಾಡಬೇಕು. ಆಗ ನಮ್ಮದೇ ನೆಲದಲ್ಲಿ ಬೆಳೆದ ನಮ್ಮ ಜೀವನಕ್ಕೆ ಸುಸಂಗತವಾದ ನಮ್ಮ ಸಂಸ್ಕೃತಿ ಪೋಷಿತವಾದ ಸಹಕಾರವು ಬೆಳೆದು ಸಮಾಜವು ಭಾರತೀಯ ಸಾಂಪ್ರದಾಯ ಪರಂಪರೆಗಳನ್ನು ಲಕ್ಷಿಸಿ, ಅದರಿಂದ ವಿಕಾಸ ಹೊಂದುವುದು. ಆಗ ಸ್ವ-ಭಾವವು ಬೆಳೆಯುವುದು; ಸ್ವ-ತಂತ್ರವಾದ ಲಕ್ಷಣವು ಕಾಣುವುದು.

ಭಾರತದಲ್ಲಿ ಸಹಕಾರ ಚಳವಳವು ಪ್ರಾರಂಭವಾಗಿ ಈಗ ೫೫ ವರುಷಗಳು ಸರಿದು ಹೋಗಿವೆ. ಅಂದರೆ ಈಗ ನಾವು ತಿಳಿದಿರುವ ಸಹಕಾರ ಚಳವಳವು ಈ ಶತಕದಲ್ಲಿ ಹುಟ್ಟಿ ಬಂದದ್ದು. ೧೯೦೪ ರಲ್ಲಿ ಭಾರತ ಸರಕಾರವು ಸಹಕಾರೀ ಪತ್ತಿನ ಸಂಘಗಳ ಕಾಯಿದೆ (Co-operative Credit Societies Act. 1904 ) ಯನ್ನು ಮಾಡಿ ಈ ಚಳವಳವನ್ನು ಪ್ರಾರಂಭಿಸಿದರೆಂದು ಹೇಳಬಹುದು. ಈ ಕಾಯಿದೆ ರೂಪುಗೊಳ್ಳಲು ಕಾರಣಗಳು ಇದ್ದವು.

ಭಾರತವು ಕೃಷಿ ಪ್ರಧಾನವಾದ ದೇಶ. ಒಕ್ಕಲುತನವೇ ಇಲ್ಲಿಯ ಮೂಲ ಉದ್ಯೋಗ. ಅದೇ ದೇಶದ ಆಧಾರ. ಅದೇ ದೇಶದ ಸಂಪತ್ತು. ಒಕ್ಕಲುತನ ಜೀವನದ ಲಕ್ಷಣವೇ ಹಳ್ಳಿ. ಹಳ್ಳಿಗಳೇ ಭಾರತದಲ್ಲಿ ವಾಸ್ತವ್ಯದ ಹೆಗ್ಗುರುತು. ಭಾರತವು ಹಳ್ಳಿಗಳ-ಹಳ್ಳಿಗರ-ನಾಡು. ಭಾರತದ ಸಂಸ್ಕೃತಿಯು ಇಂದಿಗೂ ಹಳ್ಳಿಗಳಲ್ಲಿಯೇ ಇದೆ. ಭಾರತದಲ್ಲಿಯ ಜೀವನ ವ್ಯವಸ್ಥೆಯು-ಸಮಾಜ ವ್ಯವಸ್ಥೆಯು ಘಟಕವಾದ ಒಟ್ಟು ಕುಟುಂಬವು ಇರುವುದು ಕೃಷಿ ಪ್ರಾಧಾನ್ಯದ ಮೂಲಕವೇ. ಹೀಗೆ ಲಾಕ್ಷಣಿಕವಾಗಿರುವ ಭಾರತದಲ್ಲಿಯ ಕೃಷಿಯು ಹಾಗೂ ಕೃಷಿಕರ ಪರಿಸ್ಥಿತಿಯು ಹದಗೆಡುತ್ತ ಹೋಯಿತು. ಈ ವಿಷಮ ಪರಿಸ್ಥಿತಿ ಉಂಟಾಗಲು ಹಲವಾರು ಕಾರಣಗಳಲ್ಲಿ ಪರದೇಶದವರ ಪ್ರವೇಶವೂ ಒಂದು; ಅದು ಮುಖ್ಯವಾದುದು. ಪರ ಸಂಸ್ಕೃತಿ ಪ್ರಭಾವ, ಪರ ರಾಜರ ಆಡಳಿತದ ಪ್ರಭಾವವು ಇವು ಬಹಿರಂಗ ಜೀವನದಲ್ಲಿ ಮಾರ್ಪಾಟು ಮಾಡಿದುವು. ಅಂತರಂಗದ ಜೀವನ ಹಾಗೆಯೆ ಉಳಿಯಿತು ಒಂದಕ್ಕೊಂದು ಹೊಂದದಾದವು. ಅಂತರಂಗದ ಜೀವನದಲ್ಲಿ ಬದಲಮಾಡಿಕೊಳ್ಳಲು ಧೈರ್ಯವಿಲ್ಲ. ಏಕೆಂದರೆ ಅದು ಶ್ರದ್ಧೆಯ- ಭಕ್ತಿಯ ವಿಶ್ವಾಸದ ವಿಷಯವಾಗಿದ್ದಿತು. ಬಹಿರಂಗ ಜೀವನವನ್ನು ಬಿಡಲು ಮನಸ್ಸು ಒಪ್ಪದಷ್ಟು ಅದರ ಆಕರ್ಷಣೆ ಇದ್ದಿತು. ಹೀಗಾಗಿ ಮೂಲ ಜೀವನ ವ್ಯವಸ್ಥೆಯು ಶಿಥಿಲವಾಗತೊಡಗಿ ಅದು ಆರ್ಥಿಕ ಅನವಸ್ಥೆಯಲ್ಲಿ ಪರಿಣಮಿಸಿತು. ಇದರಿಂದ ಪೆಟ್ಟುತಿಂದವ ಒಕ್ಕಲಿಗ, ಕೃಷಿಕ.

ಒಕ್ಕಲಿಗನು ಸಂಪತ್ತಿನ ಸಂಪಾದಕನಾಗಿದ್ದರೂ ಹೊಸ ಆರ್ಥಿಕ ಅನವಸ್ಥೆಯ ಮೂಲಕ ಸಾಲಗಾರನಾದ. ಸಮಾಜದ ಸಮ-ತೂಕವು ತಪ್ಪಿಹೋಯಿತು. ಒಕ್ಕಲಿಗ ನೆಲಕ್ಕೆ ಬಿದ್ದ-ನೆಲದಲ್ಲಿ ಕುಸಿಯತೊಡಗಿದ. ಅವನ ಋಣದಮೇಲೆ ನೆಣದಮೇಲೆ ಶೆಟ್ಟಿ ಸಾಹುಕಾರ ಮೊದಲಾದ ದಲಾಲಿಗಳು ಕೊಬ್ಬಿದರು. ನೆಲ ಬರಡಾಗತೊಡಗಿತು ಅದರಿಂದ ಒಕ್ಕಲುತನಕ್ಕೆ ಧಕ್ಕೆಯಾಗಿ, ಉತ್ಪತ್ತಿ ಕಡಿಮೆಯಾಗತೊಡಗಿತು. ಉತ್ಪತ್ತಿ ಕಡಿಮೆಯಾಗುತ್ತ ನಡೆದ ಹಾಗೆಲ್ಲ ಕೃಷಿಕನ ಸಾಲದಭಾರ ಹೆಚ್ಚಾಗುತ್ತ ನಡೆಯಿತು. ಈ ನಡುವಿನ ದಲಾಲರಾದ ಶೆಟ್ಟಿ ಸಾಹುಕಾರರಿಂದ, ಅವರ ಸಾಲ

ದಂತಹ ಸಾಲದ ನೆರವಿನಿಂದ ಒಕ್ಕಲಿಗನನ್ನು ಪಾರುಮಾಡಿ ಅವನಿಗೆ ಅವಶ್ಯಕವಾದ ಧನಸಹಾಯವನ್ನು ಕೊಡಲು ಪ್ರತ್ಯೇಕ ಸಂಸ್ಥೆಯ ಆಗತ್ಯತೆ ಉಂಟಾಯಿತು. ಈ ಹಿನ್ನಲೆಯಲ್ಲಿ ಬಂದಿತು ಕೋ-ಆಪರೇಟಿವ್ಹ ಕ್ರೆಡಿಟ್ ಸೊಸಾಯಿಟೀಜ ಆ್ಯಕ್ಟ ೧೯೦೪. ಅದು ಆಧುನಿಕ ಸಹಕಾರ ಚಳವಳದ ಬುನಾದಿ ಹಾಕಿತು. ಅದೇ ಚಳವಳದ ಪ್ರಾರಂಭವಾಯಿತು.

ಈ ಕಾಯದೆಯು " ಇಂಗ್ಲಿಶ್ ಫ್ರೇಂಡ್‌ಲೀ. ಸೊಸಾಯಿಟೀಜ ಆ್ಯಕ್ಟ ೧೮೯೬" ರ ಮಾದರಿಯ ಮೇಲೆ ರೂಪಿಸಲಾಗಿದ್ದಿತು. ಭಾರತದ ೧೯೦೪ ರ ಕಾಯಿದೆಯು ಸರಳವಾಗಿರಬೇಕೆಂದೂ ಹಾಗೂ ಪರಿಸ್ಥಿತಿಗೆ ಹೊಂದಿಕೊಳ್ಳುವಂತಹದಿರಬೇಕೆಂದೂ ಮಾಡಲಾಯಿತು. ಈ ಕಾಯಿದೆಯು ಕೇವಲ ಪತ್ತಿನ ಸಂಬಂಧವಾಗಿ ಮಿತವಾಗಿದ್ದಿತೆಂಬುದನ್ನು ಲಕ್ಷಿಸುವಂತಿದೆ. ಇದರಿಂದ ಮಿತವ್ಯಯ ಸ್ವಾವಲಂಬನ, ಮತ್ತು ಪರಸ್ಪರ ಸಹಕಾರ ಇವು ಬೆಳೆಯಬಹುದಾಗಿದೆಯೆಂದು ಆಶಿಸಲಾಯಿತು. ಗ್ರಾಮಾಂತರ ಪ್ರದೇಶಗಳಲ್ಲಿ ಅಗತ್ಯವಿದ್ದದ್ದೇ ಆರ್ಥಿಕ ನೆರವು. ಅದು ಆ ಜನರ ಸ್ವಂತದ ಪರಿಶ್ರಮದಿಂದ ಉಂಟಾದರೆ ಅದರಿಂದ ಪತ್ತು-ವಿಶ್ವಾಸ ಬೆಳೆಯುವುದು. ಇದರಿಂದ ಪ್ರಾರಂಭವಾದುದು ಮುಂದೆ ಎಲ್ಲ ಬಗೆಯ ಲಾಭಗಳನ್ನು ಒದಗಿಸುವುದಕ್ಕೆ ಸಹಕಾರೀ ಚಟುವಟಿಕೆಗಳನ್ನು ವಿಕಾಸಮಾಡಬೇಕೆಂದು ಬಯಸಲಾಗಿದ್ದಿತು. ಭಾರತದಲ್ಲಿ ಆ ಮೊದಲು ಸಹಕಾರೀ ಸಂಘಗಳೆಂದು ಇರಲಿಲ್ಲ. ಇಲ್ಲಿಯ ವಾತಾವರಣದಲ್ಲಿ ಬೆಳೆದ ಅನುಭವ ಇರಲಿಲ್ಲ. ಕೃಷಿಕರಿಗೆ ಅವಶ್ಯಕವಾದ ನೆರವನ್ನು ಕೊಡುವ ಉದ್ದೇಶವು ಆ ಕಾಯಿದೆಯದು. ಆಗಿದ್ದರೂ ಸಹಕಾರ ತತ್ವವನ್ನು ಕೇವಲ ಗ್ರಾಮಗಳಿಗೆ ಮೀಸಲಾಗಿರಿಸುವುದು ಹಿತಕರವಲ್ಲವೆಂದು ಅನ್ನಿಸಿದ್ದರಿಂದ ಗ್ರಾಮೀಣ ಹಾಗೂ ಪಟ್ಟಣ ಪ್ರದೇಶದ ಸಂಘಗಳೆಂದು ಎರಡು ಬಗೆಯಾಗಿ ಮಾಡಲಾಯಿತು.

೧೯೧೨ ರಲ್ಲಿ ಸಹಕಾರಿ ಸಂಘಗಳ ಕಾಯಿದೆಯು ಪಾಸಾಯಿತು : ಈ ದೇಶದಲ್ಲಿ ಸಹಕಾರೀ ಚಳವಳದಿಂದ ಬಂದ ಅನುಭವದ ಪರಿಣಾಮವಾಗಿ ಈ ೧೯೧೨ ರ ಕಾಯಿದೆಯು ಪಾಸಾಯಿತು. ಈ ಹೊಸ ಕಾಯಿದೆಯಿಂದ ಗ್ರಾಮದ—ಹಾಗೂ ಪಟ್ಟಣದ ಸಂಘಗಳೆಂಬ ಭೇದವು ಮಾಯವಾಗಿ ಸದಸ್ಯರ ಹೊಣೆಗಾರಿಕೆಯ ಮಿತಿಯ ಮೇಲೆ ವಿಭಾಗೀಕರಣವಾಯಿತು. ಅಲ್ಲದೆ, ಆರ್ಥಿಕ ನೆರವನ್ನಲ್ಲದೆ ಬೇರೆ ರೀತಿಯಲ್ಲಿಯೂ ಸಹಕಾರೀ ಸಂಘಗಳು ಏರ್ಪಾಡಾಗುವಂತೆ ಅನುಕೂಲತೆ ಒದಗಿಸಲಾಯಿತು. ಈ ಕಾಯಿದೆಯು ಭಾರತದ ಪ್ರದೇಶಕ್ಕೆ ಅನ್ವಯಿಸುವ ಕಾಯಿದೆಯು; ಬೇರೆ ಬೇರೆ ರಾಜ್ಯದಲ್ಲಿ ಸ್ಥಾನಿಕ ಕಾಯಿದೆಗಳು ಎಲ್ಲಿ ಆಗಿಲ್ಲವೋ ಅಲ್ಲಿ ಈ ಕಾಯಿದೆಯು ಇಂದಿಗೂ ಜಾರಿಯಲ್ಲಿದೆ.

೧೯೧೫ ರಲ್ಲಿ ಮೆಕ್‌ಲ್ಯಾಗನ್ ವರದಿಯು ಪ್ರಕಟವಾಯಿತು. ಈ ವರದಿಯು ಭಾರತದ ಪರಿಸ್ಥಿತಿಯಲ್ಲಿ ಸಹಕಾರೀ ತತ್ವವನ್ನು ಎಷ್ಟು ವ್ಯಾಪಕವಾಗಿ ಯಾವ ಯಾವ ಕ್ಷೇತ್ರದಲ್ಲಿ ಅನ್ವಯಿಸಬಹುದೆಂಬುವ ಬಗ್ಗೆ ವಿವರವನ್ನು ಒದಗಿಸಿತು. ೧೯೧೯ ರಲ್ಲಿ ಪ್ರಾಂತಿಕ ಸ್ವಾಯತ್ತತೆಯು ಬಂದದ್ದರಿಂದ ಚಳವಳಕ್ಕೆ ಸ್ಥಾನಿಕ ಮಹತ್ವವು ಪ್ರಾದೇಶಿಕ ಆತ್ಮೀಯತೆಯೂ ಬಂದಿತು. ಬೇರೆ ಬೇರೆ ಪ್ರಾಂತದವರು ತಮ್ಮಲ್ಲಿಯ ಸ್ಥಾನಿಕ ಪರಿಸ್ಥಿತಿಯ ವಿಚಾರಣೆಗಾಗಿ ಅನೇಕ ವಿಚಾರಣಾ ಸಮಿತಿಗಳನ್ನು ನೇಮಿಸಿದರು. ಭಾರತವು ಒಂದು ದೇಶವಾಗಿದ್ದರೂ ಪ್ರಾಂತ ಪ್ರಾಂತಗಳಲ್ಲಿ ಪರಿಸ್ಥಿತಿಯು ಬೇರೆಯಾಗಿದೆ. ಪರಿಸ್ಥಿತಿಗೆ ಹೊಂದಿಕೊಳ್ಳುವಂತೆ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾಗಿದೆ. ಪ್ರಾಂತಿಕ ಕಾಯಿದೆಗಳು ಜಾರಿಯಲ್ಲಿ ಬರುವುದು ಅಗತ್ಯವಾಯಿತು. ೧೯೧೯ ರ ಸುಧಾರಣೆಗಳ ಮೂಲಕ ಸಹಕಾರೀ ಚಳವಳದ ವಿಷಯವು ಪ್ರಾಂತಿಕ ವಿಷಯವಾಗಿದ್ದರಿಂದ ಪ್ರಾಂತದ ಕಾಯಿದೆಗಳು ರೂಪಗೊಳ್ಳಲು ಅನುಕೂಲವಾಯಿತು,

೧೯೨೫ ರಲ್ಲಿ ಮುಂಬಯಿಯ ಸಹಕಾರೀ ಸಂಘಗಳ ಕಾಯಿದೆಯು ಪಾಸಾಯಿತು. ಮತ್ತು ಆ ವರುಷದ ಡಿಸೆಂಬರದಲ್ಲಿ ಅದು ಜಾರಿಯಲ್ಲಿ ಬಂದಿತು. ಮುಂಬಯಿ ಕಾಯಿದೆಯು ವ್ಯಾಪ್ತಿಯಲ್ಲಿ ಬಹು ಹಿರಿದಾಗಿದ್ದಿತು. ಜೀವನದ ಯಾವುದೇ ಕ್ಷೇತ್ರದಲ್ಲಿಯವರು ಈ ಕಾಯಿದೆಯ ಲಾಭ ಪಡೆಯುವಂತೆ ಇದ್ದಿತು. ಈ ಕಾಯಿದೆಯು ಬರುವುದಕಿಂತ ಮೊದಲು ಯಾರು ಇಂಡಿಯನ್ ಕಂಪನೀಜ ಆ್ಯಕ್ಟ ೧೯೧೩ ರ ಶರತುಗಳಿಗೆ ಶರಣು ಹೋಗಲೇಬೇಕಾಗಿತ್ತೋ ಅವರು ಈ ಕಾಯಿದೆಯಿಂದ ಸುಲಭದಾರಿ ಪಡೆದುಕೊಂಡರು. ಕಂಪನಿ ಕಾಯಿದೆಯಲ್ಲದೆ ಬೇರೆ ರೀತಿಯಿಂದಲೂ ಸಂಘಗಳನ್ನು ರೂಪಿಸಲು ಅನುಕೂಲಮಾಡಿಕೊಟ್ಟಿತು.

೧೯೨೫ ರಿಂದ ೧೯೪೭ ರ ಅವಧಿಯು ಬ್ರಿಟಿಶ ಆಡಳಿತೆಯ ಕಾಲದ ಭಾಗವು, ೧೯೪೭ ರಿಂದ ೧೯೫೬ ನವಂಬರ ೧ ರ ವರೆಗೆ ಭಾರತದ ಸ್ವತಂತ್ರ ರಾಷ್ಟ್ರದಲ್ಲಿಯ ಇತಿಹಾಸ. ನಂತರ ರಾಜ್ಯಗಳ ಪುನರ್ಘಟನೆ ಯಾಯಿತು. ಮುಂಬಯಿ ಪ್ರಾಂತದ ಕಾಯಿದೆಯು ಮುಂಬೈಯ ವಿಭಾಗದ ಮೈಸೂರ ರಾಜ್ಯದ ಪ್ರದೇಶಕ್ಕೆ ಅನ್ವಯಿಸುತ್ತಿತ್ತು; ೧೯೩೨ ರ ಮದ್ರಾಸ ಸಹಕಾರೀ ಸಂಘಗಳ ಕಾಯಿದೆಯು ಮೈಸೂರ ರಾಜ್ಯದ ಮದ್ರಾಸ ವಿಭಾಗಕ್ಕೆ ಅನ್ವಯಿಸುತ್ತಿತ್ತು. ೧೯೩೬ ರ ಕೊಡಗಿನ ಸಹಕಾರೀ ಸಂಘಗಳ ಕಾಯಿದೆ ಕೊಡಗಿಗೆ—೧೯೪೮ ರ ಮೈಸೂರ ಸಹಕಾರಿ ಸಂಘಗಳ ಕಾಯಿದೆ ಹಳೆಯ ಮೈಸೂರಿಗೆ—೧೯೫೨ ರ ಹೈದರಾಬಾದ ಸಹಕಾರೀ ಸಂಘಗಳ ಕಾಯಿದೆಯು ಹೈದರಾಬಾದ ಕರ್ನಾಟಕಕ್ಕೆ ಅನ್ವಯಿಸುತ್ತಿತ್ತು. ಸಹಕಾರ

ತತ್ವವು ಒಂದೇ ಆದರೂ ಅವುಗಳಿಗೆ ಭಾರತದ ೧೯೧೨ ರ ಕಾಯಿದೆಯು ಬೆನ್ನೆ
ಬಾಗಿದ್ದರೂ ದೇಶದಲ್ಲಿಯ ಪ್ರಾದೇಶಿಕ ಪರಿಸ್ಥಿತಿಯಲ್ಲಿಯ ವ್ಯತ್ಯಾಸದ ಮೂಲ
ಬೇರೆ ಬೇರೆ ಪ್ರಾಂತಿಕ ಕಾಯಿದೆಗಳು ಆದವು. ಅದರಿಂದ ಹೊಸ ರಾಜ್ಯ
ಉದಯವಾದಂದಿನಿಂದ ಮೈಸೂರ ರಾಜ್ಯದಲ್ಲಿ ಬೇರೆ ಬೇರೆ ವಿಭಾಗಕ್ಕೆ ಬೇರೆ ಬೇ
ಕಾಯಿದೆಗಳು ಇದ್ದವು. ಈ ಎಲ್ಲ ಕಾಯಿದೆಗಳು ಇಂದು ಮೈಸೂರ ರಾಜ್ಯ
ಸಹಕಾರೀ ಸಂಘಗಳ ಕಾಯಿದೆ ೧೯೫೯ ರಿಂದ ರದ್ದುಗೊಳಿಸಲ್ಪಟ್ಟವು. ಇನ
ಮುಂದೆ ೧೯೫೯ರ ಮೈಸೂರ ಸಹಕಾರೀ ಸಂಘಗಳ ಕಾಯಿದೆಯು ಜಾರಿಯಲ್ಲಿ ಬಂ
ತಾರೀಖಿನಿಂದ ಇಡೀ ಮೈಸೂರ ರಾಜ್ಯಕ್ಕೆ ಈ ಹೊಸ ಕಾಯಿದೆಯೇ ಅನ್ವಯಿ
ವುದು. ಈ ಹೊಸ ಕಾಯಿದೆಯಲ್ಲಿ ಏನು ಹೇಳಿದೆಯೆಂಬುದನ್ನು ಮುಂ
ಕಲಮುವಾರ ನೋಡೋಣ.



# ಮೈಸೂರ ಸಹಕಾರಿ ಸಂಘಗಳ ಕಾಯಿದೆ--೧೯೫೯

೧೯೫೯ ರ ಆಗಸ್ಟ್ ೧೧ ಕ್ಕೆ ರಾಷ್ಟ್ರಪತಿಗಳ ಸಮ್ಮತಿ ದೊರೆತಿದೆ.

## ಪೀಠಿಕೆ

**ಮೈಸೂರ ರಾಜ್ಯದಲ್ಲಿ ಸಹಕಾರಿ ಸಂಘಗಳ ಸಂಬಂಧವಾಗಿದ್ದ ಕಾಯಿದೆಗಳನ್ನು ಏಕೀಕರಿಸುವುದಕ್ಕೆ ಮತ್ತು ತಿದ್ದುಪಡಿ ಮಾಡುವುದಕ್ಕೆ ಕಾಯಿದೆ.**

ಮೈಸೂರ ರಾಜ್ಯದಲ್ಲಿಯ ಸಹಕಾರಿ ಸಂಘಗಳ ಸಂಬಂಧವಾಗಿದ್ದ ಕಾಯಿದೆಗಳನ್ನು ಏಕೀಕರಿಸುವುದು ಹಾಗೂ ತಿದ್ದುಪಡಿ ಮಾಡುವುದು ಪ್ರಸಂಗೋಚಿತವಾಗಿರುವುದರಿಂದ :

ಭಾರತದ ಗಣರಾಜ್ಯದ ಈ ಹತ್ತನೆಯ ವರುಷದಲ್ಲಿ ಮೈಸೂರ ರಾಜ್ಯ ಶಾಸನ ಸಭೆಯಿಂದ ಈ ಕೆಳಗೆ ಕಂಡಂತೆ ಕಾಯಿದೆ ಮಾಡಲ್ಪಡಲಿ.

## ಪ್ರಕರಣ ೧ ಪ್ರಾರಂಭಿಕ

### ೧. ತಲೆಬರಹ, ವ್ಯಾಪ್ತಿ ಮತ್ತು ಪ್ರಾರಂಭ

(೧) ಈ ಕಾಯಿದೆಯನ್ನು ಮೈಸೂರ ಸಹಕಾರಿ ಸಂಘಗಳ ಕಾಯಿದೆ—೧೯೫೯, ಎಂದು ಕರೆಯಬೇಕು.

(೨) ಇದು ಇಡಿ ಮೈಸೂರ ರಾಜ್ಯಕ್ಕೆ ಅನ್ವಯಿಸುತ್ತದೆ.

(೩) ಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟಣೆಯಿಂದ ಗೊತ್ತು ಮಾಡುವಂತಹ ದಿನದಿಂದ ಇದು ಜಾರಿಯಲ್ಲಿ ಬರತಕ್ಕದ್ದು.

**ವಿವೇಚನೆ**

ಇದು ಮೈಸೂರ ಸಹಕಾರಿ ಸಂಘಗಳ ಕಾಯಿದೆ. ಇದು ರೂಪಗೊಳ್ಳುವ ಮೊದಲು ಈ ರಾಜ್ಯದಲ್ಲಿ ಬೇರೆ ಬೇರೆ ಕಾಯಿದೆಗಳು ಬೇರೆ ಬೇರೆ ಪ್ರದೇಶದಲ್ಲಿ ಜಾರಿಯಲ್ಲಿ ಇದ್ದುದರಿಂದ ಅವುಗಳ ಸಮನ್ವಯ, ಏಕೀಕರಣ, ಅವಶ್ಯವೆನ್ನಿಸಿದ್ದುದರಿಂದ ಈ ಕಾಯಿದೆಯು ರೂಪುಗೊಂಡಿತು. ಇದು ೧೯೫೬ ರ ನವ್ಹಂಬರ ೧ ಕ್ಕೆ ನಿರ್ಮಾಣವಾದ ಮೈಸೂರ ರಾಜ್ಯಕ್ಕೆ ಅನ್ವಯಿಸುವುದು. ಸರಕಾರವು ಗ್ಯಾಜೆಟಿನಲ್ಲಿ ಪ್ರಕಟನೆ ಹೊರಡಿಸಿ ಗೊತ್ತುಮಾಡುವ ದಿನದಿಂದ ಇದು ಜಾರಿಯಲ್ಲಿ ಬರುವುದು.

## ೨. ವ್ಯಾಖ್ಯೆಗಳು

ಈ ಕಾಯಿದೆಯಲ್ಲಿ ಸಂಬಂಧಾರ್ಥವು ಬೇರೆಯಾಗಿ ಹೇಳುವುದನ್ನು ಹೊರತು ಪಡಿಸಿ—

(ಅ) **'ಪೋಟನಿಯಮಗಳು'** ಎಂದರೆ, ಈ ಕಾಯಿದೆಯನ್ವಯವಾಗಿ ನೋಂದಾಯಿಸಿದ ಇಲ್ಲವೆ ನೋಂದಾಯಿಸಿದೆಯೆಂದು ಗಣಿಸಲಾದ ಮತ್ತು ಆ ಕಾಲದಲ್ಲಿ ಜಾರಿಯಲ್ಲಿದ್ದ ಪೋಟನಿಯಮಗಳು ಎಂದು ಅರ್ಥವಾಗುತ್ತದೆ ಮತ್ತು ಆ ಶಬ್ದವು ಪೋಟನಿಯಮಗಳ ನೋಂದಾಯಿಸಿದ ತಿದ್ದುಪಡಿಯನ್ನು ಒಳಗೊಳ್ಳುತ್ತದೆ;

(ಬ) **'ಕಮಿಟಿ'** ಅಂದರೆ, ಸಂಘದ ವ್ಯವಹಾರಗಳ ಸಂಚಾಲನವನ್ನು ಯಾವುದಕ್ಕೆ ಒಪ್ಪಿಸಿ ಕೊಡಲಾಗಿದೆಯೋ, ಅದಕ್ಕೆ ಯಾವುದೇ ಹೆಸರಿನಿಂದ ಕರೆದರೂ, ಅಂತಹ ಸಹಕಾರೀ ಸಂಘದ ಆಡಳಿತ ನಡೆಸುವ ಸಂಸ್ಥೆ, ಎಂದು ಅರ್ಥವಾಗುತ್ತದೆ;

(ಕ) **'ಸಹಕಾರಿ ಸಂಘ'** ಅಂದರೆ, ಈ ಕಾಯಿದೆಯನ್ವಯವಾಗಿ ನೋಂದಾಯಿಸಿದ ಇಲ್ಲವೆ ನೋಂದಾಯಿಸಿದೆಯೆಂದು ಗಣಿಸಲಾದ ಸಂಘವೆಂದು ಅರ್ಥವಾಗುತ್ತದೆ;

(ಡ) **'ನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘ'** ಎಂದರೆ, ಅದನ್ನು ದುಂಡು ಸುತ್ತುವ ಸಂದರ್ಭ ಉಂಟಾದಾಗ ಸಂಘದ ಸಾಲಗಳಿಗಾಗಿ ಯಾವ ಸದಸ್ಯರ ಹೊಣೆಗಾರಿಕೆಯು ಅದರ ಪೋಟ ನಿಯಮಗಳಿಂದ

(i) ಅವರು ಕ್ರಮವಾಗಿ ಧಾರಣ ಮಾಡಿದ ಶೇರುಗಳ ಸಂಬಂಧವಾಗಿ ಸಲ್ಲಿಸದೆ ಉಳಿದ ಹಣದ ಮಟ್ಟಿಗೆ, ಇಲ್ಲವೆ

(ii) ಅವರು ಕ್ರಮವಾಗಿ, ಸಂಘದ ಸೊತ್ತುಗಳಿಗೆ ವಂತಿಗೆ ಕೊಡಲು ಜವಾಬುದಾರಿ ವಹಿಸಬಹುದಾದಂತಹ ಹಣದ ಮಟ್ಟಿಗೆ,

ನಿಯಮಿತವಾಗಿರುವುದೋ ಅಂತಹ ಸದಸ್ಯರುಳ್ಳ ಸಹಕಾರಿ ಸಂಘವೆಂದು ಅರ್ಥವಾಗುತ್ತದೆ;

(ಇ) **'ಅನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘ'** ಎಂದರೆ, ಅದನ್ನು ದುಂಡು ಸುತ್ತುವ ಸಂದರ್ಭ ಉಂಟಾದರೆ, ಯಾವ ಸದಸ್ಯರು ಆ ಸಂಘದ ಎಲ್ಲ ಋಣಗಳ ಸಂಬಂಧವಾಗಿ ಸಾಮೂಹಿಕವಾಗಿ ಮತ್ತು ವೈಯಕ್ತಿಕವಾಗಿ ಹೊಣೆಗಾರರಾಗಿರುವರೋ ಮತ್ತು ಸಂಘದ ಸೊತ್ತಿಗಾಗಿ ಕೊರತೆಯಾಗುವುದರ ಬಗ್ಗೆ ವಂತಿಗೆ ಕೊಡಲು ಹೊಣೆಗಾರರಾಗಿರುವರೋ ಅಂತಹ ಸದಸ್ಯರುಳ್ಳ ಸಹಕಾರಿ ಸಂಘವೆಂದು ಅರ್ಥವಾಗುತ್ತದೆ;

(ಫ) **'ಸದಸ್ಯ'** ಎಂದರೆ, ಸಹಕಾರಿ ಸಂಘವನ್ನು ನೋಂದಾಯಿಸುವ ಬಗ್ಗೆ ಮಾಡಿದ ಅರ್ಜಿಯಲ್ಲಿ ಸಹಿ ಮಾಡಿದ ವ್ಯಕ್ತಿಯು, ಮತ್ತು ಇಂತಹ ನೋಂದಣಿಯಾದ ಮೇಲೆ ಈ ಕಾಯಿದೆಯು ನಿಯಮಗಳ ಮತ್ತು ಪೋಟ ನಿಯಮಗಳ ಅನುಸಾರವಾಗಿ ಸದಸ್ಯತ್ವಕ್ಕೆ ಪ್ರವೇಶ ಕೊಡಲ್ಪಟ್ಟ ವ್ಯಕ್ತಿಯು ಎಂದು ಅರ್ಥವಾಗುತ್ತದೆ. ಮತ್ತು ಈ ಶಬ್ದವು ನಾಮಮಾತ್ರ ಹಾಗೂ ಸಹಾಯ ಸದಸ್ಯನನ್ನು ಒಳಗೊಳ್ಳುತ್ತದೆ.

(ಗ) **' ಅಧಿಕಾರಿ '** ಎಂದರೆ, ಪ್ರೆಸಿಡೆಂಟ, ವಾಯಿಸ್ ಪ್ರೆಸಿಡೆಂಟ, ಚೇರಮನ್ನ, ಉಪಚೇರಮನ್ನ, ಸೆಕ್ರೆಟರಿ, ಮ್ಯಾನೇಜರ, ಟ್ರೇಜರರ (ಕೋಶಾಧ್ಯಕ್ಷ), ಲಿಕ್ವಿಡೇಟರ, ಆಡಳಿತಗಾರ ಎಂದು ಅರ್ಥವಾಗುತ್ತದೆ ಮತ್ತು ಈ ಶಬ್ದವು ಸಹಕಾರಿ ಸಂಘದ ವ್ಯವಹಾರದ ಸಂಬಂಧವಾಗಿ ಯಾವುದೇ ಕಾರ್ಯವನ್ನು ಮಾಡಲು ಇಲ್ಲವೆ ಯಾವುದೇ ಅಧಿಕಾರವನ್ನು ನಿರ್ವಹಿಸಲು ಅಧಿಕಾರ ಪಡೆದ ಕಮಿಟಿಯ ಸದಸ್ಯನನ್ನು ಇಲ್ಲವೆ ಸಹಕಾರಿ ಸಂಘದ ವ್ಯವಹಾರದ ಸಂಬಂಧವಾಗಿ ನಿಯಮಗಳ ಇಲ್ಲವೆ ಪೋಟ ನಿಯಮಗಳ ಅನ್ವಯವಾಗಿ ನಿರ್ದೇಶನ ಕೊಡಲು ಅಧಿಕಾರ ಪಡೆದ ಬೇರೆ ಯಾವುದೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(ಹ) **' ಗೊತ್ತು ಮಾಡಿದ '** ಅಂದರೆ, ಈ ಕಾಯಿದೆಯನ್ವಯವಾಗಿ ಮಾಡಿದ ನಿಯಮಗಳಿಂದ ಗೊತ್ತುಮಾಡಿದ, ಎಂದು ಅರ್ಥವಾಗುತ್ತದೆ;

(ಈ) **' ರಜಿಸ್ಟ್ರಾರ '** ಎಂದರೆ, ಈ ಕಾಯಿದೆಯನ್ವಯವಾಗಿ ಸಹಕಾರಿ ಸಂಘಗಳ ರಜಿಸ್ಟ್ರಾರನೆಂದು ಕಾರ್ಯ ಮಾಡಲು ನೇಮಕವಾದ ವ್ಯಕ್ತಿಯೆಂದು ಅರ್ಥವಾಗುತ್ತದೆ ಮತ್ತು ಈ ಶಬ್ದವು ರಜಿಸ್ಟ್ರಾರನ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳನ್ನು ನಿರ್ವಹಿಸುವಾಗ ರಜಿಸ್ಟ್ರಾರನಿಗೆ ಸಹಾಯ ಮಾಡಲು ನೇಮಕವಾದ ಯಾವುದೇ ವ್ಯಕ್ತಿಯನ್ನು ಒಳಗೊಳ್ಳುತ್ತದೆ;

(ಜ) **' ನಿಯಮಗಳು '** ಎಂದರೆ ಈ ಕಾಯಿದೆಯನ್ವಯವಾಗಿ ಮಾಡಿದ ನಿಯಮಗಳು ಎಂದು ಅರ್ಥವಾಗುತ್ತದೆ;

(ಕಾ) **' ಟ್ರಿಬ್ಯೂನಲ್ '** ಎಂದರೆ, ೧೯೫೭ ರ ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ್ ಕಾಯಿದೆಯನ್ವಯವಾಗಿ ರಚಿತವಾದ ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ್ ಎಂದು ಅರ್ಥವಾಗುತ್ತದೆ.

(ಲ) ಮೈಸೂರ ರಾಜ್ಯದ ಯಾವುದೇ ಪ್ರದೇಶದಲ್ಲಿ ಜಾರಿಯಲ್ಲಿ ಇರದೆ ಇದ್ದ ಯಾವುದೇ ಕಾಯಿದೆಗೆ ಇಲ್ಲವೆ ಕಾಯಿದೆಯ ಶರತಿಗೆ ಇರುವ ಸಂಬಂಧ

ಸೂಚನೆಯು ಆ ಪ್ರದೇಶದಲ್ಲಿ ಜಾರಿಯಲ್ಲಿ ಯಾವುದಾದರೂ ಇದ್ದ ತತ್ ಸಮಾನವಾದ ಕಾಯಿದೆಗೆ ಇಲ್ಲವೆ ಕಾಯಿದೆಯ ಶರತಿಗೆ ಸಂಬಂಧ ಸೂಚನೆಯೆಂದು ಅರ್ಥ ಮಾಡಲ್ಪಡತಕ್ಕದ್ದು.

**ವಿವೇಚನೆ**

ಇಲ್ಲಿಯ ವ್ಯಾಖ್ಯೆಗಳು ಸಾಮಾನ್ಯವಾಗಿ ಅರ್ಥವಾಗುವಂತಹವೇ ಇವೆ. ಆದರೆ ಕಾಯಿದೆಯಲ್ಲಿ ಸ್ಪಷ್ಟವಾದ ಅರ್ಥದ ಆವಶ್ಯಕತೆ ಇರುವುದರಿಂದ ವ್ಯಾಖ್ಯೆಯು ಬೇಕಾಗುತ್ತದೆ. ನಿಶ್ಚಿತಾರ್ಥದ ಜತೆಗೆ ಅವರ ವ್ಯಾಪಕಾರ್ಥವೂ ವ್ಯಾಖ್ಯೆಗಳಿಂದ ತಿಳಿದು ಬರುವುದು.

ಪೋಟ ನಿಯಮಗಳು, ಎಂದು ಅರ್ಥವಾಗಬೇಕಾದರೆ, ಅವು ಈ ಕಾಯಿದೆಯ ಅನುಸಾರವಾಗಿ ನೋಂದಾಯಿಸಲ್ಪಟ್ಟಿರಬೇಕು; ಅವು ಜಾರಿಯಲ್ಲಿ ಇರಬೇಕು. ಇವುಗಳಲ್ಲಿ ನೋಂದಾಯಿಸಿದ ತಿದ್ದುಪಡಿಗಳೂ ಬರುವುವು. ನೋಂದಾಯಿಸದೆ ಇದ್ದರೂ ಈ ಕಾಯಿದೆಯ ಪ್ರಕಾರ ನೋಂದಾಯಿಸಲಾಗಿವೆ ಎಂದು ಗಣಿಸಲ್ಪಡಬಹುದಾದಂತಹವೂ ಪೋಟ ನಿಯಮಗಳು ಎಂದು ಅರ್ಥ. ಮುಖ್ಯವೆಂದರೆ. ಪೋಟ ನಿಯಮಗಳು ಎಂದು ಬಂದಾಗ ಅವು ನೋಂದಾಯಿಸಿದ, ಇಲ್ಲವೆ ನೋಂದಾಯಿಸಲ್ಪಟ್ಟಿವೆ ಎಂದು ಗಣಿಸಲಾದ ಮತ್ತು ಜಾರಿಯಲ್ಲಿ ಇರುವ ಪೋಟ ನಿಯಮಗಳು ಎಂದು ಅರ್ಥ. ಹಿಂದೆ ಎಂದೋ ನೋಂದಾಯಿಸಿದ್ದು ಅವು ಇಂದು ಜಾರಿಯಲ್ಲಿ ಇರದೇ ಇದ್ದರೆ, ಪೋಟನಿಯಮಗಳು ಎಂಬ ಶಬ್ದದ ಅರ್ಥದಲ್ಲಿ ಬರುವುದಿಲ್ಲ. ಜಾರಿಯಲ್ಲಿರಬೇಕಾದುದೂ ನೋಂದಾಯಿಸಿದುದರಷ್ಟೇ ಮಹತ್ವವಾದುದು ಎಂಬುದನ್ನು ಅರಿಯಬೇಕು.

ಕಮಿಟಿ. ಈ ಶಬ್ದಕ್ಕೆ ಇಲ್ಲಿ ಒಂದು ದೃಷ್ಟಿಯಿಂದ ವಿಶಿಷ್ಟಾರ್ಥ ಕೊಡಲಾಗಿದೆ. ಸಹಕಾರಿ ಸಂಘದ ಆಡಳಿತ ನಡಸುವ ಸಂಚಾಲಕ ಸಮಿತಿ ಎಂದು ಅರ್ಥ ಹೇಳಿದೆ. ಸಾಮಾನ್ಯ ಕಮಿಟಿ ಎಂದು ಅಲ್ಲ. ಅದು ಸಹಕಾರಿ ಸಂಘದ ವ್ಯವಹಾರಗಳನ್ನು ನಡೆಸುವ, ಆಡಳಿತಕ್ಕೆ ಸಂಬಂಧವಾದ ಸಂಚಾಲನ ಮಾಡುವ ಸಂಸ್ಥೆಯಾಗಿರುವ ಸಮಿತಿ, ಎಂದು ಅರ್ಥ. ಅದಕ್ಕೆ ಬೇರೆ ಬೇರೆ ಹೆಸರು ಕೊಟ್ಟಿದ್ದರೂ ಅದು ಕಮಿಟಿ, ಎಂಬ ಶಬ್ದದಲ್ಲಿಯೇ ಬರುವುದು. ಅದಕ್ಕೆ ಮುಖ್ಯ ಲಕ್ಷಣಗಳು ಎರಡು. ಅದು ಸಹಕಾರಿ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟಿರಬೇಕು; ಆಡಳಿತ ನೋಡಿಕೊಳ್ಳುವ ಸಂಚಾಲಕ ಸಮಿತಿ ಆಗಿರಬೇಕು. ಆಗ ಅದು ಕಮಿಟಿ ಶಬ್ದದಲ್ಲಿ ಬರುತ್ತದೆ.

ಸಹಕಾರಿ ಸಂಘ, ಎಂದರೆ ಈ ಕಾಯಿದೆಯ ಪ್ರಕಾರ ನೋಂದಾಯಿಸಲಾದ ಸಹಕಾರಿ ಸಂಘವೆಂದೇ ಅರ್ಥ. ಬೇರೆ ಯಾವುದೇ ಕಾಯಿದೆ ಪ್ರಕಾರ ನೋಂದಾಯಿಸಲಾದ ಇಲ್ಲವೆ ನೋಂದಾಯಿಸದೇ ಇದ್ದ ಯಾವುದೇ ಸಹಕಾರಿ ಸಂಘವು

ಎಂದು ಈ ಕಾಯಿದೆಯಲ್ಲಿ ಅರ್ಥವಾಗುವುದಿಲ್ಲ. ನೋಂದಾಯಿಸದೇ ಇದ್ದರೂ ನೋಂದಾಯಿಸಲಾಗಿದೆಯೆಂದು ಈ ಕಾಯಿದೆಯಿಂದ ಗಣಿಸಲಾದ ಸಹಕಾರಿ ಸಂಘವು ಕೂಡ ಈ ಕಾಯಿದೆಯ ಅರ್ಥದಲ್ಲಿ ಸಹಕಾರಿ ಸಂಘವೆಂದು ಅರ್ಥ ವಾಗುತ್ತದೆ.

ನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘ, ಎಂದರೇನು? ಹೊಣೆ ಗಾರಿಕೆ ಯಾರದು? ಯಾತರಿಂದ ನಿಯಮಿತವಾದುದು? ಸಂಘದ ಅಸ್ತಿತ್ವವೇ ಸದಸ್ಯರಿಂದ; ಆದ್ದರಿಂದ ಹೊಣೆಗಾರಿಕೆಯು ಸದಸ್ಯರದು. ಈ ಹೊಣೆಗಾರಿಕೆಯು ಎಂತಹದು? ಸಂಘವು ನಡೆಸಿಕೊಂಡು ಹೋಗಲ್ಪಡುತ್ತಿದ್ದರೆ, ಈ ಹೊಣೆಗಾರಿ ಕೆಯ ಪ್ರಶ್ನೆಯೇ ಬರುವುದಿಲ್ಲ. ಸಂಘವು ನಡೆಯದಂತಾಗಿ ಅದರ ವ್ಯವಹಾರವನ್ನು ಮುಂಡು ಸುತ್ತುವ ಸಂದರ್ಭ ಬಂದಾಗ ಸಂಘದ ಹೊಣೆಗಾರಿಕೆಯ ಪ್ರಶ್ನೆ ಬರು ವುದು; ಆಗ ಸದಸ್ಯರ ಹೊಣೆಗಾರಿಕೆಯ ಪ್ರಶ್ನೆ ಬರುವುದು. ಅದಾದರೂ ಸಂಘದ ಸಾಲಗಳಿಗಾಗಿ. ಸಂಘಕ್ಕೆ ಸಾಲವೇ ಇರಲಿಲ್ಲವಾದರೆ ಸದಸ್ಯರ ಹೊಣೆಗಾರಿಕೆಯ ಪ್ರಶ್ನೆ ಬರುವುದಿಲ್ಲ. ಸಂಘವು ನಡೆಯದಂತಾಗಿರಬೇಕು; ಅದನ್ನು ದುಂಡು ಸುತ್ತುವ ಪ್ರಸಂಗ ಬಂದಿರಬೇಕು. ಸಂಘಕ್ಕೆ ಸಾಲಗಳು ಇರಬೇಕು; ಆಗ ಸಂಘದ ಹೊಣೆಗಾರಿಕೆ ಎಂದರೆ ಸದಸ್ಯರ ಹೊಣೆಗಾರಿಕೆ; ಇದು ಪೋಟನಿಯಮಗಳಲ್ಲಿ ಹೇಳಿದಂತೆ ನಿಯಮಿತವಾದುದು. ಸದಸ್ಯರು ಪಡೆದ ಶೇರುಗಳ ಹಣವು ಇನ್ನೂ ಪೂರ್ತಿ ಕೊಡಲ್ಪಡದೆ ಉಳಿದಿದ್ದರೆ, ಹಾಗೆ ಉಳಿದ ಹಣದ ಮಟ್ಟಿಗೆ, ಸದಸ್ಯರ ಹೊಣೆಗಾರಿಕೆಯು ನಿಯಮಿತ ಎಂದು; ಅಲ್ಲದೆ, ಸಂಘದ ಹೆಸರು ಕೆಡಬಾರದೆಂದು ಸದಸ್ಯರು ತಾವಾಗಿಯೆ ಸಂಘದ ಸೊತ್ತಿಗಾಗಿ ವಂತಿಗೆ ಕೊಡಲು ಮುಂದೆ ಬಂದಾಗ, ಎಷ್ಟು ಹಣ ಕೊಡುವುದಾಗಿ ಹೇಳಿರುವದೊ ಅಷ್ಟು ಹಣದ ಮಟ್ಟಿಗೆ ನಿಯಮಿತ ಹೊಣೆಗಾರಿಕೆ ಮಿತವಾಗಿರುವುದು. ಈ ರೀತಿಯಾಗಿರುವಾಗ ಇರು ವಂತಹ ಸದಸ್ಯರುಳ್ಳ ಸಂಘವು ನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘ ವೆಂದು ತಿಳಿಯಬೇಕು.

ಅನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘವೆಂದರೆ, ಎಂತಹದು? ಯಾವ ಸಂಘದ ಸದಸ್ಯರ ಹೊಣೆಗಾರಿಕೆಯು ಅನಿಯಮಿತವಾಗಿರುವುದೋ ಅದು ಎಂದು ಹೇಳಬಹುದು. ಅಂದರೆ, ಸಂಘವು ನಡೆಯದಂತಾಗಿ ವ್ಯವಹಾರವನ್ನು ದುಂಡು ಸುತ್ತುವ ಪ್ರಸಂಗ ಬಂದಾಗ ಸಂಘದ ಋಣವು ಎಷ್ಟಿರುವುದೋ ಅದನ್ನೆಲ್ಲವನ್ನು ಯಾವ ಸದಸ್ಯರು ಸಾಮೂಹಿಕವಾಗಿ ಮತ್ತು ವೈಯಕ್ತಿಕವಾಗಿ ಹೊಣೆ ಹೊತ್ತು ತೀರಿಸಬೇಕಾಗುವುದೋ ಅಂತಹ ಸದಸ್ಯರುಳ್ಳ ಸಹಕಾರಿ ಸಂಘವು—ಅನಿಯಮಿತ ಹೊಣೆಗಾರಿಕೆಯ ಸಹಕಾರಿ ಸಂಘವು ಎಂದು ತಿಳಿಯಲ್ಪಡಬೇಕು.

ಸದಸ್ಯರೆಂದರೆ ಯಾರು ? ಎಲ್ಲ ಜವಾಬದಾರಿಯು ಸದಸ್ಯರ ಮೇಲೆ ಅಂದ ಮೇಲೆ ಈ ಸದಸ್ಯರೆಂದರೆ ಯಾರು ? ಯಾರಿಗೆ ಸದಸ್ಯರೆಂದು ಅನ್ನಬೇಕು ? ಸಹಕಾರಿ ಸಂಘವನ್ನು ನೊಂದಾಯಿಸುವಾಗ ಮಾಡಿದ ಅರ್ಜಿಗೆ ಸಹಿ ಮಾಡಿದ ಪ್ರತಿಯೊಬ್ಬನೂ ಸದಸ್ಯನು. ಇವರಿಗೆ ಮೂಲ ಸದಸ್ಯರು ಎಂದು ಕರೆಯಬಹುದು. ಒಮ್ಮೆ ಸಂಘವು ರೂಪುಗೊಂಡು ನೋಂದಣಿಯಾದ ಮೇಲೆ, ಈ ಕಾಯಿದೆಯನು ಸಾರವಾಗಿ ಮತ್ತು ಅದರ ನಿಯಮ ಪೋಟನಿಯಮಗಳ ಅನುಸಾರವಾಗಿ ಯಾರನ್ನು ಸಂಘವು ತನ್ನ ಸದಸ್ಯತ್ವದಲ್ಲಿ ಪ್ರವೇಶಮಾಡಿಸಿಕೊಳ್ಳುವುದೋ ಆ ವ್ಯಕ್ತಿಗಳೂ ಸದಸ್ಯರು. ಈ ಎರಡು ವಿಧಾನವಲ್ಲದೆ, ಕೆಲವರು ಹೆಸರಿಗೆ ಮಾತ್ರ ಸದಸ್ಯರು ಇರುವರು; ಕೆಲವರು ಸಹಾಯಕ ಸದಸ್ಯರು ಇರುವರು. ಇವರೂ ಕೂಡ ಸದಸ್ಯ ನೆಂಬ ಪದದಲ್ಲಿ ಬರುವರು.

ಅಧಿಕಾರಿ, ಎಂದರೆ ಯಾರು ? ಸಂಘದ ಅಧ್ಯಕ್ಷನು, ಉಪಾಧ್ಯಕ್ಷನು, ಚೇರಮನ್ನನು, ಉಪಚೇರಮನ್ನನು, ಸೆಕ್ರೆಟರಿ, ಮಾನೇಜರ, ಕೋಶಾಧ್ಯಕ್ಷ, ಲಿಕ್ವಿಡೇಟರ, ಆಡಳಿತಗಾರ, ಎಂದು ಸಂಘದ ಸಂಬಂಧವಾಗಿ ಅಧಿಕಾರ ನಡೆಸಲು ಹೆಸರು–ಸ್ಥಾನ ಪಡೆದ ಪ್ರತಿಯೊಬ್ಬ ಅಧಿಕಾರಿ. ಅಲ್ಲದೆ ಸಂಘದ ವ್ಯವಹಾರಗಳ ಸಂಬಂಧವಾಗಿ ಕಾರ್ಯಮಾಡಲು ಅಧಿಕಾರವನ್ನು ಪಡೆದಂತಹ ಕಮಿಟಿಯ ಸದಸ್ಯ. ಕಮಿಟಿ, ಎಂಬುದರ ಅರ್ಥವನ್ನು ವ್ಯಾಪ್ತಿಯನ್ನು ಈ ಮೊದಲೇ ಹೇಳಿದೆ. ಅಂತಹ ಕಮಿಟಿಯ ಸದಸ್ಯನು ಸಂಘದ ವ್ಯವಹಾರ ನಡೆಸಲು ಅಧಿಕಾರ ಪಡೆದಾಗ ಅವನೂ ಅಧಿಕಾರಿಯು. ಸಂಘದ ವ್ಯವಹಾರಗಳ ಸಂಬಂಧವಾಗಿ ನಿಯಮಗಳಿಂದ ಇಲ್ಲವೆ ಪೋಟನಿಯಮಗಳಿಂದ ಅಧಿಕಾರ ಪಡೆದು, ನಿರ್ದೇಶನ ಮಾಡುವಂತಹ ಬೇರೆ ಯಾವುದೇ ವ್ಯಕ್ತಿ ಕೂಡ ಅಧಿಕಾರಿ. ಸಂಘದ ವ್ಯವಹಾರಕ್ಕೆ ಸಂಬಂಧವಾಗಿ ಯೋಗ್ಯ ಅಧಿಕಾರ ಪಡೆದ ವ್ಯಕ್ತಿಯು ಅಧಿಕಾರಿ ಎಂದು ಹೇಳಿದ ಹಾಗಾಯಿತು.

ಗೊತ್ತು ಮಾಡಿದ, ಎಂಬ ಪದವು ನಿಯಮಗಳಿಂದ ಗೊತ್ತುಮಾಡಿದ, ಎಂದು ಅರ್ಥವನ್ನು ಕೊಡುವುದು. ನಿಯಮಗಳು ಕೆಲವೊಂದು ವಿಷಯ–ವಿಧಾನಗಳನ್ನು ಗೊತ್ತುಮಾಡುವುವು. ಆಗ ಗೊತ್ತುಮಾಡಿದ, ಎಂಬದು ನಿಯಮಗಳಿಂದ ಎಂದು ಸ್ಪಷ್ಟ ಅರ್ಥವಾಗುವುದು.

ರಜಿಸ್ಟ್ರಾರ, ಎಂದು ಈ ಕಾಯಿದೆಯಲ್ಲಿ ಇಲ್ಲವೆ ಈ ಕಾಯಿದೆಯ ಸಂಬಂಧ ವಾಗಿ ಬಂದಾಗ ಸಹಕಾರಿ ಸಂಘಗಳ ರಜಿಸ್ಟ್ರಾರನೆಂದು ಕೆಲಸ ಮಾಡಲು ನೇಮಕ ವಾದ ವ್ಯಕ್ತಿಯು; ಆ ವ್ಯಕ್ತಿಗೆ ಬೇರೆ ಯಾವುದೇ ವ್ಯಕ್ತಿಯು ರಜಿಸ್ಟ್ರಾರನ ಕಾರ್ಯ ಮಾಡಲು ಅಧಿಕಾರ ಪಡೆದವನಿದ್ದು ಸಹಾಯ ಮಾಡುತ್ತಿದ್ದರೆ, ಅಂತಹ ಸಹಾಯಕ

ವ್ಯಕ್ತಿಯುಕೂಡ ಸಹಕಾರಿ ಸಂಘದ ರಜಿಸ್ಟ್ರಾರನ ಕಾರ್ಯ ಮಾಡಲು ನೇಮಕ ವಾದಂತೆ. ಆದ್ದರಿಂದ ಅವನೂ ರಜಿಸ್ಟ್ರಾರ ಎಂಬ ಶಬ್ದದಲ್ಲಿ ಬರುವನು. ಸಹಕಾರಿ ಸಂಘಗಳ ಸಲುವಾಗಿ ನೇಮಕವಾಗಿರಬೇಕು; ರಜಿಸ್ಟ್ರಾರನೆಂದು ಕೆಲಸ ಮಾಡುತ್ತಿರ ಬೇಕು. ಅಂದರೆ ಅವನು ಈ ಕಾಯಿದೆಯ ಅರ್ಥದಲ್ಲಿ ರಜಿಸ್ಟ್ರಾರ. ಬೇರೆ ಕಾಯಿದೆಗಳ ಪ್ರಕಾರ ರಜಿಸ್ಟ್ರಾರನೆಂಬುವ ಅಧಿಕಾರಿ ಇರುವುದರಿಂದ ಅವರಿಂದ ಪ್ರತ್ಯೇಕಿಸಲು ಈ ರೀತಿಯಾಗಿ ಹೇಳಲಾಗಿದೆ.

ನಿಯಮಗಳು, ಅಂದರೆ ಈ ಕಾಯಿದೆಯನ್ವಯವಾಗಿ ಮಾಡಲಾದ ನಿಯಮ ಗಳು ಎಂದೇ ಅರ್ಥ. ಬೇರೆ ನಿಯಮಗಳ ಉಲ್ಲೇಖ ಈ ಕಾಯಿದೆಗೆ ಸಂಬಂಧ ಪಟ್ಟಾಗ ಬರುವುದಿಲ್ಲ.

ಟ್ರಿಬ್ಯೂನಲ್, ಎಂಬುದು ನ್ಯಾಯಾಲಯ. ಅದು ಮೈಸೂರ ರೆವೆನ್ಯೂ ಅಪಲೇಟ ಟ್ರಿಬ್ಯೂನಲ್ ಆ್ಯಕ್ಟ ೧೯೫೭ ರನ್ವಯವಾಗಿ ರಚಿತವಾದ ನ್ಯಾಯಾಲಯ ಅದರ ಹೆಸರು ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ್. (ಇದರ ಮೂಲ ಕಾರ್ಯಕೇಂದ್ರವು ಬೆಂಗಳೂರಲ್ಲಿದ್ದು ಒಂದು ವಿಭಾಗವು ಬೆಳಗಾವಿಯಲ್ಲಿ ಅದೆ.) ಸಹಕಾರಿ ಸಂಘಗಳ ಸಂಬಂಧವಾಗಿ ಟ್ರಿಬ್ಯೂನಲ್ ವಿಚಾರಿಸುವ ಪ್ರಕರಣಗಳು ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ್ ವಿಚಾರಿಸುವುದು.

ಮೈಸೂರ ರಾಜ್ಯವು ೧೯೫೬ ನವ್ಹಂಬರ ೧ಕ್ಕೆ ರಾಜ್ಯಪುನರ್ಘಟನೆಯ ಪ್ರಕಾರ ರೂಪಿತವಾಯಿತು. ಐದು ಬೇರೆ ಬೇರೆ ಪ್ರದೇಶಗಳು ಒಂದೇ ರಾಜ್ಯದ ಆಡಳಿತದಲ್ಲಿ ಬಂದುವು. ಹಳೆಯ ಕಾಯಿದೆಗಳನ್ನು ಇಲ್ಲದಾಗಿಸಿ ಹೊಸ ಕಾಯಿದೆಗಳನ್ನು ರೂಪುಗೊಳಿಸಿ, ವ್ಯಾಪಕವಾಗಿ ಇಡೀ ರಾಜ್ಯಕ್ಕೆ ಅನ್ವಯಿಸುವ ಸಂಭವವಿರುವುದು. ಯಾವುದೊಂದು ಪ್ರದೇಶದಲ್ಲಿಯ ಇಂತಹ ಕಾಯಿದೆಯ ಪ್ರಕಾರ, ಎಂದು ಈ ಸಹಕಾರಿ ಸಂಘಗಳ ಕಾಯಿದೆಯು ಸಂಬಂಧ ಸೂಚಿಸಿದಾಗ ಆ ಪ್ರದೇಶದಲ್ಲಿ ಆ ಕಾಯಿದೆಯು ಜಾರಿಯಲ್ಲಿಯೆ ಉಳಿದಿದ್ದಿಲ್ಲವಾದರೆ, ಆ ಪ್ರದೇಶ ದಲ್ಲಿ ಇಲ್ಲದಂತಾದ ಇಲ್ಲವೆ ಜಾರಿಯಲ್ಲಿ ಉಳಿಯದೆ ಇರುವ ಕಾಯಿದೆಗೆ ಸಮಾನ ವಾದ ಹಾಗೂ ಜಾರಿಯಲ್ಲಿದ್ದ ಕಾಯಿದೆಗೆ ಆ ಸಂಬಂಧ ಸೂಚನೆ ಎಂದು ತಿಳಿಯ ಬೇಕು. ಅಂದರೆ, ಕೆಲಸವು ನಡೆಯಬೇಕೆಂಬುದಕ್ಕೆ ಇದೊಂದು ವ್ಯಾವಹಾರಿಕ ವಾದ, ಅರ್ಥ ವಿವರಣೆಯ ಮಾತು. ಬಟ್ಟು ಮಾಡಿ ತೋರಿದ ಕಾಯಿದೆಯು ಜಾರಿಯಲ್ಲಿ ಇರದಿದ್ದರೆ, ಜಾರಿಯಲ್ಲಿದ್ದ ಅದಕ್ಕೆ ಸಮಾನವಾಗಿರುವ ಕಾಯಿದೆಗೆ ಬಟ್ಟುಮಾಡಿ ತೋರಿಸಲಾಯಿತೆಂದು ತಿಳಿಯಬೇಕು.

## ಪ್ರಕರಣ : ೨ ಸಹಕಾರಿ ಸಂಘಗಳ ನೋಂದಣಿ

### ೩. ರಜಿಸ್ಟ್ರಾರ

(೧) ರಾಜ್ಯದಲ್ಲಿಯ ಸಹಕಾರಿ ಸಂಘಗಳ ಸಲುವಾಗಿ ರಜಿಸ್ಟ್ರಾರನೆಂದು ಒಬ್ಬ ವ್ಯಕ್ತಿಯನ್ನು ರಾಜ್ಯಸರಕಾರವು ನೇಮಕ ಮಾಡಬಹುದು ಮತ್ತು ಇತರ ವ್ಯಕ್ತಿಗಳನ್ನು ಅವನಿಗೆ ಸಹಾಯ ಮಾಡುವುದಕ್ಕಾಗಿ ನೇಮಿಸಬಹುದು.

(೨) ರಜಿಸ್ಟ್ರಾರನಿಗೆ ಸಹಾಯ ಮಾಡಲು ನೇಮಿಸಲ್ಪಟ್ಟ ಯಾವುದೇ ವ್ಯಕ್ತಿಗೆ ಈ ಕಾಯಿದೆಯನ್ವಯವಾಗಿರುವ ರಜಿಸ್ಟ್ರಾರನ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳನ್ನು ಸಾಮಾನ್ಯ ಇಲ್ಲವೆ ವಿಶೇಷ ಹುಕುಮಿನಿಂದ ರಾಜ್ಯಸರಕಾರವು ದಯಪಾಲಿಸಬಹುದು.

(೩) ರಜಿಸ್ಟ್ರಾರನಿಗೆ ಸಹಾಯ ಮಾಡಲು ನೇಮಕವಾದ ಪ್ರತಿಯೊಬ್ಬ ವ್ಯಕ್ತಿಯು ಉಪಕಲಮು (೨) ರನ್ವಯವಾಗಿ ದಯಪಾಲಿಸಲಾದ ಅಧಿಕಾರಗಳನ್ನು ರಜಿಸ್ಟ್ರಾರನ ಸಾಮಾನ್ಯ ಮೇಲ್ವಿಚಾರಣೆ ಹಾಗೂ ನಿಯಂತ್ರಣದಂಕಿತವಾಗಿ ನಿರ್ವಹಿಸತಕ್ಕದ್ದು.

(೪) ಈ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಪ್ರತಿಯೊಂದು ಸಹಕಾರಿ ಸಂಘದ ಲೆಕ್ಕ ಪತ್ರಗಳ ತಪಾಸಣೆಯ ಸಂಬಂಧವಾಗಿರುವ ವಿಷಯಗಳು ರಾಜ್ಯದ ಸಹಕಾರಿ ಸಂಘಗಳ ರಜಿಸ್ಟ್ರಾರನ ಮೇಲ್ವಿಚಾರಣೆ ಹಾಗೂ ನಿಯಂತ್ರಣದ ಅಂಕಿತವಾಗಿರತಕ್ಕದ್ದು.

### ವಿವೇಚನೆ

ಇಡಿ ರಾಜ್ಯಕ್ಕೆ ಸಹಕಾರಿ ಸಂಘಗಳ ಸಲುವಾಗಿ ಒಬ್ಬ ರಜಿಸ್ಟ್ರಾರನು ಇರತಕ್ಕದ್ದು. ಅವನಿಗೆ ಸಹಾಯ ಮಾಡಲು, ಅವನ ಅಧಿಕಾರಗಳನ್ನು ನಿರ್ವಹಿಸಲು ಅಧಿಕಾರ ಪಡೆದ ಇತರ ಅಧಿಕಾರಿಗಳನ್ನು ಸರಕಾರವು ನೇಮಕ ಮಾಡಬಹುದು. ಆದರೆ ರಜಿಸ್ಟ್ರಾರ, ಎಂಬುವವನು ಮಾತ್ರ ಒಬ್ಬನೆ. ಅವನು ಇಡಿ ರಾಜ್ಯದ ಸಹಕಾರಿ ಸಂಘಗಳ ಸಲುವಾಗಿ ಇರತಕ್ಕದ್ದು. ಸಹಾಯ ಮಾಡಲು ಅಧಿಕಾರ ಪಡೆದ ವ್ಯಕ್ತಿಗಳು ಈ ರಜಿಸ್ಟ್ರಾರನ ಮೇಲ್ವಿಚಾರಣೆ, ನಿಯಂತ್ರಣದ ಅಂಕಿತವಾಗಿಯೆ ಇರತಕ್ಕದ್ದು. ಅಂದರೆ ರಜಿಸ್ಟ್ರಾರನ ಅಧಿಕಾರ-ಪಡೆದರೂ ಅದು ಆಡಳಿತದ ಸಲುವಾಗಿ; ಕಾರ್ಯವು ತ್ವರಿತವಾಗಿ ನಡೆಯಬೇಕೆಂದು ಕಾರ್ಯದ ನಿರ್ವಹಣೆಯ ವಿಕೇಂದ್ರೀಕರಣವದು. ಆದರೆ, ಅಂತಹ ಸಹಾಯಕ ಅಧಿಕಾರಿಯ ಸ್ಥಾನಮಾನವು ರಜಿಸ್ಟ್ರಾರನ ಕೆಳಗೆ ಎಂದು ಸ್ಪಷ್ಟಗೊಳಿಸಲಾಗಿದೆ. ಅಧಿಕಾರಗಳನ್ನು ದಯಪಾಲಿಸಿದರೂ ದಯಪಾಲಿಸಲಾದ ಅಧಿಕಾರಗಳನ್ನು ರಜಿಸ್ಟ್ರಾರನ ಮೇಲ್ವಿಚಾರಣೆ

ನಿಯಂತ್ರಣದ ಅಂಕಿತವಾಗಿ ನಡೆಸಲ್ಪಡಬೇಕೆಂದು ಹೇಳಿ, ರಜಿಸ್ಟ್ರಾರನ ಸ್ಥಾನ-ಮಾನವು ಹೆಚ್ಚಿನದು ಎಂದು ಹೇಳಲಾಗಿದೆ. ಅದರಂತೆ, ಈ ಕಾಯಿದೆಯಲ್ಲಿ ಬೇರೆ ಕಡೆಗೆ ಏನೇ ಹೇಳಲಾಗಿದ್ದರೂ ಪ್ರತಿಯೊಂದು ಸಹಕಾರಿ ಸಂಘದ ಲೆಕ್ಕಪತ್ರದ ವಿಷಯವು ಮಾತ್ರ ರಜಿಸ್ಟ್ರಾರನ ಮೇಲ್ವಿಚಾರಣೆ-ನಿಯಂತ್ರಣದ ಅಂಕಿತವಾಗಿಯೇ ನಡೆಯತಕ್ಕದ್ದು ಎಂದು ಹೇಳಿ ಲೆಕ್ಕಪತ್ರದ ವಿಷಯದಲ್ಲಿ ಇತರ ಎಲ್ಲ ಅಧಿಕಾರಿಗಳ ಅಧಿಕಾರಗಳು ರಜಿಸ್ಟ್ರಾರನ ಮೇಲ್ವಿಚಾರಣೆ–ಹಾಗೂ ನಿಯಂತ್ರಣದ ಅಂಕಿತವಾಗಿವೆ ಎಂಬುದನ್ನು ಸ್ಪಷ್ಟಪಡಿಸಿ ರಜಿಸ್ಟ್ರಾರನ ಸ್ಥಾನಮಾನವನ್ನು ಸೂಚಿಸಲಾಗಿದೆ.

## ೪. ನೋಂದಣಿ ಮಾಡಿಸಬಹುದಾದ ಸಂಘಗಳು

ಸಹಕಾರಿ ತತ್ವಗಳ ಅನುಸಾರವಾಗಿ ಅದರ ಸದಸ್ಯರ ಆರ್ಥಿಕ ಹಿತಾಸಕ್ತಿಗಳನ್ನು ಪುರಸ್ಕಾರ ಮಾಡುವ ಉದ್ದೇಶಗಳನ್ನು ಇಟ್ಟುಕೊಂಡಿರುವ ಸಹಕಾರಿ ಸಂಘವು ಇಲ್ಲವೆ ಇಂತಹ ಸಂಘದ ಕಾರ್ಯಾಚರಣೆಯನ್ನು ಸುಲಭಗೊಳಿಸುವ ಉದ್ದೇಶಕ್ಕಾಗಿ ಸ್ಥಾಪಿತವಾದ ಸಹಕಾರಿ ಸಂಘವು ಈ ಕಾಯಿದೆಯ ಶರತುಗಳಿ-ಗಂಕಿತವಾಗಿ ಈ ಕಾಯಿದೆಯನ್ವಯವಾಗಿ ನೋಂದಾಯಿಸಲ್ಪಡಬಹುದು.

**ವಿವೇಚನೆ**

ಎರಡು ಮಾದರಿಯ ಸಂಘಗಳು ಇರುವುವೆಂದು ಈ ಕಲಮು ಸೂಚಿಸುತ್ತದೆ. ಒಂದು, ತನ್ನ ಸದಸ್ಯರ ಆರ್ಥಿಕ ಹಿತಾಸಕ್ತಿಗಳನ್ನು ಮುಂದವರಿಸುವುದನ್ನು ಸಹಕಾರಿ ತತ್ವದ ಮೂಲಕ ಮಾಡಬೇಕೆಂದಿರುವ ಸಂಘ; ಇನ್ನೊಂದು ಇಂತಹ ಸಂಘದ ಕಾರ್ಯಾಚರಣೆಯ್ನು ಸುಲಭಗೊಳಿಸುವ ಉದ್ದೇಶದಿಂದ ಉಂಟಾದ ಸಹಕಾರಿ ಸಂಘ ಮೊದಲನೆಯದು ಮೂಲಭೂತವಾದ ಮಾದರಿಯ ಸಂಘ. ಎರಡನೆಯದು ಮೂಲಭೂತ ಸಂಘಗಳ ಕಾರ್ಯಾಚರಣೆಯನ್ನು ಸುಲಭಗೊಳಿಸುವ ಉದ್ದೇಶದಿಂದ ಸ್ಥಾಪಿತವಾದ ಸಂಘ. ಈ ಮಾದರಿಯಾಗಿ ಇರುವ ಸಂಘಗಳು ಈ ಕಾಯಿದೆಯ ಇತರ ಶರತುಗಳಿಗೆ ಅಂಕಿತವಾಗಿ ಮತ್ತು ಈ ಕಾಯಿದೆಯ ಅನ್ವಯವಾಗಿ ನೋಂದಾಯಿಸಲ್ಪಡಬಹುದು.

ಸಹಕಾರಿ ತತ್ವದ ಮೂಲಕ ಸದಸ್ಯರ ಆರ್ಥಿಕ ಉನ್ನತಿಯನ್ನು ಸಾಧಿಸಬೇಕೆನ್ನುವುದು ಮೂಲ ಮಾತು. ಈ ಉದ್ದೇಶ ಈಡೇರಿಸುವುದಕ್ಕಾಗಿ ಮೂಲ ಸಂಘವನ್ನು ರಚಿಸಿ ನೋಂದಾಯಿಸಬಹುದು. ಅಂತಹ ಸಂಘವು ರಚಿತವಾಗಿ ನೋದಾಯಿಸಲಾದ ನಂತರ, ಅದರ ಕಾರ್ಯಾಚರಣೆಯನ್ನು ಸುಲಭಗೊಳಿಸಲು ಬೇರೊಂದು ಸಂಘವನ್ನು ಸ್ಥಾಪಿಸಬಹುದು. ಆ ಸಂಘವನ್ನೂ ನೋಂದಾಯಿಸಬಹುದು. ಏನೇ ಆದರೂ ಯಾವುದೇ ಸಂಘವು ನೋಂದಾಯಿಸಲ್ಪಡಬೇಕಾದರೆ, ಅದರ ಉದ್ದೇಶವು ಸಹಕಾರಿ ತತ್ವದ ಮೇಲೆ ಸದಸ್ಯರ ಆರ್ಥಿಕಹಿತಾಸಕ್ತಿ

ಮುಂದರಿಯುವಂತೆ ಇರಬೇಕು ಎಂಬುದು ಸ್ಪಷ್ಟವಾಗುತ್ತದೆ. ಈ ಉದ್ದೇಶವು ಇಲ್ಲದಿದ್ದರೆ ನೋಂದಾಯಿಸಲು ಬರಲಿಕ್ಕಿಲ್ಲವೆಂಬುದು ಸೂಚಿತವಾಯಿತು.

ಸದಸ್ಯರು ಯಾರು ಎಂಬುದನ್ನು ವ್ಯಾಖ್ಯೆಯಲ್ಲಿ ಹೇಳಿದೆ. ಈ ಕಲಮಿನಲ್ಲಿ ಹೊಸದಾಗಿ ಬಂದ ಪದಪ್ರಯೋಗವೆಂದರೆ ಆರ್ಥಿಕ ಹಿತಾಸಕ್ತಿ. ಅರ್ಥವು ನಮ್ಮ ದೇಶದಲ್ಲಿಯ ಪುರುಷಾರ್ಥಗಳಲ್ಲಿ ಅಡಕವಾದುದು. ಧರ್ಮ, ಅರ್ಥ, ಕಾಮ, ಮೋಕ್ಷ ಎಂಬುವು ಚತುರ್ವಿಧ ಪುರುಷಾರ್ಥಗಳು ಮಾನವನು ಬದುಕಿ ಬಾಳು ವುದು ಈ ನಾಲ್ಕರಲ್ಲಿ ಒಂದೊಂದು, ಇಲ್ಲವೆ ಹೆಚ್ಚು ಉದ್ದೇಶಗಳಿಗಾಗಿ. ಸಮಾಜ ದಲ್ಲಿಯ ಬಾಳುವೆಯು 'ಆರ್ಥಿಕ' ವ್ಯವಸ್ಥೆಯ ಮೂಲಕ ಸಂಘಟಿತವಾಗಿರುವುದು. ಧರ್ಮ, ಅರ್ಥ, ಕಾಮ, ಮೋಕ್ಷಗಳು ವೈಯುಕ್ತಿಕವಾಗಿ ಕಾಲಕಾಲಕ್ಕೆ ಬೇಕಾಗುವ-ಪಡೆಯಬೇಕೆಂಬ ಆಶೆ-ಆಕಾಂಕ್ಷೆಗಳಾದರೂ ಅದನ್ನೆಲ್ಲ ಸಾಧ್ಯಮಾಡಿ ಕೊಡಲು ಸಾಮಾಜಿಕ ಆರ್ಥಿಕ ವ್ಯವಸ್ಥೆಯು ಗಟ್ಟಿಯಾಗಿರಬೇಕಾಗುವುದು. ಇಲ್ಲಿ "ಆರ್ಥಿಕ" ಎಂಬುದು ಉತ್ಪತ್ತಿ-ವಿತರಣ ವ್ಯವಸ್ಥೆ. ಜೀವನಾವಶ್ಯಕ ಹಾಗೂ ಐಷಾರಾಮಿಕ-ವಸ್ತುಗಳ ಉತ್ಪತ್ತಿ-ವಿತರಣದಿಂದ-ಅದರ ಯೋಗ್ಯವ್ಯವಸ್ಥೆಯಿಂದ ಆರ್ಥಿಕ ಹಿತಾಸಕ್ತಿ ಮುಂದುವರೆಯುತ್ತದೆ. ಆರ್ಥಿಕ ಎಂಬುದು ಧನದ, ಎಂಬ ಅರ್ಥಕೊಡುವುದು. ಧನವು ಹಣವೇ ಆಗಿರಬೇಕಿಲ್ಲ. ವಸ್ತುಗಳು ಧನವೇ. ಈ ಎಲ್ಲ ಮಾದರಿಯ ಧನದ ಉತ್ಪತ್ತಿ ಹಾಗೂ ಯೋಗ್ಯ ವಿತರಣವಾಗಿ ವ್ಯಕ್ತಿಯ ಆರ್ಥಿಕ ಹಿತಾಸಕ್ತಿಯು ಮುಂದುವರೆಯುವಂತೆ ಅನುಕೂಲತೆಗಳನ್ನು ಒದಗಿಸು ವುದೇ ಸಹಕಾರಿ ಸಂಘದ ಉದ್ದೇಶ ಈ ಉದ್ದೇಶವಿದ್ದ ಹೊರತು ಸಂಘವು ನೋಂದಾಯಿಸಲ್ಪಡಲಾಗದು.

ಈ ಉದ್ದೇಶಗಳನ್ನು ಸಹಕಾರಿ ತತ್ವದ ಮೂಲಕ ಸಾಧಿಸುವ ಹವಣ ಇರುವಸಂಘಗಳು ನೋಂದಾಯಿಸಲ್ಪಡಲು ಯೋಗ್ಯವಾದವುಗಳು. ಸಹಕಾರಿ ತತ್ವ ವೆಂದರೇನು ? ಈ ಪುಸ್ತಕದ ಪ್ರಾರಂಭದಲ್ಲಿ ಪ್ರಾಸ್ತಾವಿಕವಾಗಿ ಸಹಕಾರಿ ತತ್ವವನ್ನು ಹೇಳಲಾಗಿದೆ. 'ಸಹಕಾರ' ಶಬ್ದವು ಸ್ಪಷ್ಟ ಅರ್ಥವನ್ನು, ಅದರಲ್ಲಿ ಅಡಕವಾದ ತತ್ವವನ್ನು ಹೇಳುವುದು. ಸಹ-ಅಂದರೆ ಜೊತೆಯಾಗಿ. ಜೊತೆ ಇದು ಸಮಾನ ಎಂಬ ಅರ್ಥವನ್ನು ಕೊಡುವುದು. ಅಂದರೆ ಇದರಲ್ಲಿ ಸದಸ್ಯರಾಗಿದ್ದವರು ಎಲ್ಲರೂ ಸಮಾನ ಅಧಿಕಾರದವರು. ಸಹಕಾರ, ಎಂದರೆ ಕೂಡಿ ಕೆಲಸ ಮಾಡುವುದು. 'ಕೈ ಕೈ ಕೂಡಿದರೆ ಕಾಮಧೇನು' ಎಂದು ಪ್ರಾರಂಭದಲ್ಲಿ ಹೇಳಿದೆ. ಆದರ ಅರ್ಥ ಇಷ್ಟು; ಕೂಡಬೇಕಾದುದು ವ್ಯಕ್ತಿಗಳೇ ಹೊರತು ಅವರು ಕೊಡುವ ವಂತಿಗೆಯಲ್ಲ. ಮಾನವನ ಮನಸ್ಸು ಕೂಡಿ ಕೆಲಸ ಮಾಡಬೇಕೆಂದು ಹೇಳಬೇಕು. ಇದರಲ್ಲಿ ಒತ್ತಾಯವಿಲ್ಲ. ಒಲುಮೆಯ ಸಾಹಸವಿದು.

ಕೂಡಿ ಕೆಲಸ ಮಾಡುವುದರ ಕಾರಣ ಎಲ್ಲರ ಸಾಮಾನ್ಯ ಉತ್ಕರ್ಷವಾಗ ಬೇಕೆಂಬುದು. ಈ ಮಾತುಗಳೇ ಸಹಕಾರಿ ತತ್ವಗಳು.

ಸದಸ್ಯರ ಆರ್ಥಿಕ ಹಿತಾಸಕ್ತಿಯು ಸಹಕಾರಿ ತತ್ವದ ಮೂಲಕ ಮುಂದರಿಯ ಬೇಕೆಂದು ಉದ್ದೇಶವಿಟ್ಟುಕೊಂಡ ಸಂಘವು ಇಲ್ಲವೆ ಇಂತಹ ಸಂಘದ ಕಾರ್ಯಾ ಚರಣೆ ಸುಲಭವಾಗಬೇಕೆಂದು ಉದ್ದೇಶವಿಟ್ಟುಕೊಂಡು ಸ್ಥಾಪಿತವಾದ ಸಂಘವು ನೋಂದಾಯಿಸಲು ಯೋಗ್ಯವಾದ ಸಂಘವಾಗಿರುತ್ತದೆ.

## ೫. ನಿಯಮಿತ ಇಲ್ಲವೆ ಅನಿಯಮಿತ ಹೊಣೆಗಾರಿಕೆಯಿಂದ ನೋಂದಣಿ ಮಾಡಿಸುವುದು

(೧) ನಿಯಮಿತ ಹೊಣೆಗಾರಿಕೆ ಇದ್ದು ಇಲ್ಲವೆ ಇರದೆ ಇದ್ದು ಸಹಕಾರಿ ಸಂಘವು ನೋಂದಾಯಿಸಲ್ಪಡಬಹುದು.

ಆದರೆ, ಯಾವ ಸಹಕಾರಿ ಸಂಘದ ಯಾವುದೇ ಸದಸ್ಯನು ಸಹಕಾರಿ ಸಂಘವು ಆಗಿದ್ದರೆ, ಆ ಸಹಕಾರಿ ಸಂಘದ ಹೊಣೆಗಾರಿಕೆಯು ನಿಯಮಿತವಾಗಿರ ತಕ್ಕದ್ದು.

(೨) ನಿಯಮಿತ ಹೊಣೆಗಾರಿಕೆಯಿದ್ದು ನೋಂದಾಯಿಸಲ್ಪಟ್ಟ ಸಹಕಾರಿ ಸಂಘದ ಹೆಸರಿನ ಕೊನೆಯ ಶಬ್ದವು ಲಿಮಿಟೆಡ್ ಇಲ್ಲವೆ ತತ್ ಸಮಾನವಾಗಿರುವ ಭಾರತದ ಯಾವುದೇ ಭಾಷೆಯಲ್ಲಿಯ ಶಬ್ದವು ಇರತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ನಿಯಮಿತ ಹೊಣೆಗಾರಿಕೆಯದು ಇಲ್ಲವೆ ನಿಯಮಿತ ಹೊಣೆಗಾರಿಕೆಯದು ಆಗಿಲ್ಲ ಎಂಬ ಹಾಗೆ ನೋಂದಾಯಿಸಬಹುದು. ಅಂದರೆ ನೋಂದಾಯಿಸುವ ಕಾಲಕ್ಕೆ ಅದರ ಹೊಣೆಗಾರಿಕೆ ನಿಯಮಿತವಾಗಿದೆಯೋ ಇಲ್ಲವೊ ಎಂಬುದರ ನಿರ್ಣಯವಾಗಿರಬೇಕು. ಹಾಗೆ ನಿರ್ದಿಷ್ಟಪಡಿಸಿಯೇ ನೋಂದಾಯಿಸಲ್ಪಡಬೇಕು. ನಿಯಮಿತ ಹೊಣೆಗಾರಿಕೆ ಇದ್ದ ಸಂಘದ ಹೆಸರಿನಲ್ಲಿಯ ಕೊನೆಯ ಶಬ್ದವು 'ಲಿಮಿಟೆಡ್' ಎಂದು ಇರಬೇಕು. ಅದರ ಅರ್ಥ ಬರುವಂತೆ ಭಾರತೀಯ ಭಾಷೆಯಲ್ಲಿಯ ಯಾವುದೇ ಶಬ್ದವು ಇದ್ದರೂ ನಡೆಯುವುದು. ಮಿತ, ನಿಯಮಿತ, ಪರಿಮಿತ ಮುಂತಾಗಿ.

ಸಹಕಾರಿ ಸಂಘವು ಅನಿಯಮಿತ ಹೊಣೆಗಾರಿಕೆಯುಳ್ಳದ್ದಾಗಿ ನೊಂದಾಯಿಸಲ್ಪಡಬಹುದು. ಹಾಗೆ ನೋಂದಾಯಿಸಲ್ಪಟ್ಟರೆ ಅದರ ಸದಸ್ಯರ ಹೊಣೆಗಾರಿಕೆಯು ಅನಿಯಮಿತವಾಗುವುದು. ಅನಿಯಮಿತವೇನೆಂಬುದು ವ್ಯಾಖ್ಯೆಯಲ್ಲಿ ಹೇಳಲಾಗಿದೆ. ಆದರೆ ಈ ಶರತಿಗೆ ಒಂದು ಅಪವಾದವಿದೆ. ಅನಿಯಮಿತ

ಹೊಣೆಗಾರಿಕೆಯುದು ಎಂದು ನೋಂದಾಯಿಸಲ್ಪಟ್ಟಿದ್ದರೂ ಆ ಸಂಘದ ಸದಸ್ಯನೆಂದು ಒಂದು ಸಹಕಾರಿ ಸಂಘವು ಇದ್ದರೆ ಅದರ ಹೊಣೆಗಾರಿಕೆಯು ನಿಯಮಿತವೆಂದು ಆಗಿರತಕ್ಕದ್ದು. ಅಂದರೆ ಸಹಕಾರಿ ಸಂಘಕ್ಕೆ ಅನಿಯಮಿತ ಹೊಣೆಗಾರಿಕೆಯ ಸದಸ್ಯನೆಂದು ಅರ್ಥಮಾಡಲಿಕ್ಕೆ ಬರುವುದಿಲ್ಲ. ಸಹಕಾರಿ ಸಂಘವು ನಿಯಮಿತ ಇಲ್ಲವೆ ಅನಿಯಮಿತ ಹೊಣೆಗಾರಿಕೆಯ ಸಂಘದ ಸದಸ್ಯನಾಗಿದ್ದರೂ ಅದರ ಹೊಣೆಗಾರಿಕೆ ಮಾತ್ರ ಯಾವಾಗಲೂ ನಿಯಮಿತವಾಗಿರತಕ್ಕದ್ದು ಎಂದು ಕಾಯಿದೆಯಲ್ಲಿ ಸಾರಿ ಹೇಳಲಾಗಿದೆ.

ನಿಯಮಿತ ಇಲ್ಲವೆ ಅನಿಯಮಿತ ಹೊಣೆಗಾರಿಕೆಯ ಬಗ್ಗೆ ವ್ಯಾಖ್ಯೆಗಳಲ್ಲಿಯ ಮಾತುಗಳನ್ನು ನೋಡಬೇಕು. ಆಗ ಹೊಣೆಗಾರಿಕೆಯು ಸಂಘವು ನಡೆಯುದಂತಾಗಿ ಅದರ ವ್ಯವಹಾರವು ದುಂಡುಸುತ್ತಲ್ಪಡುವ ಸಮಯಕ್ಕೆ ಉಂಟಾಗುವುದೆಂಬುದು ಸ್ಪಷ್ಟವಾಗುವುದು

ನೋಂದಾಯಿಸುವುದರಿಂದ ಸಂಘಕ್ಕೆ ಸಂಸ್ಥೆಯ ಸ್ವರೂಪ ಬರುವುದು ಮತ್ತು ಆದರಿಂದ ಅದರ ಸದಸ್ಯರ ಹೊಣೆಗಾರಿಕೆ ಎಷ್ಟು ಎಂಬುದೂ ಸಾರ್ವಜನಿಕವಾಗಿ ಪ್ರಕಟವಾಗುವುದು.

ಕಲಮು ೪ ಮತ್ತು ೫ ರಲ್ಲಿ ನೋಂದಾಯಿಸಲ್ಪಡಬಹುದು ಎಂದು ಹೇಳಿದ್ದರಲ್ಲಿ ಒಂದು ಮಾತು ಹೊರಡುತ್ತದೆ. ಈ ಕಾಯಿದೆಯ ಪ್ರಕಾರ ನಡೆಯಬೇಕಾಗಿದ್ದ ಸಂಘಗಳು ನೋಂದಾಯಿಸಲ್ಪಡಬೇಕು. ಆದರೆ ನೋಂದಾಯಿಸಿಕೊಳ್ಳುವ ಅಧಿಕಾರವು ರಜಿಸ್ಟ್ರಾರನದು. ಅವನಿಗೆ ತನ್ನ ವಿವೇಕ ಉಪಯೋಗಿಸಲು ಅವಕಾಶ ಕೊಟ್ಟಂತೆ ಕಾಣುವುದು. ಇಲ್ಲವಾದರೆ ನೊಂದಾಯಿಸತಕ್ಕದ್ದು ಎಂಬ ಪದವು ಪ್ರಯೋಗಮಾಡಲ್ಪಡುತ್ತಿತ್ತು. ರಜಿಸ್ಟ್ರಾರನು ತೂಗಿ ನೋಡಿ, ನೊಂದಾಯಿಸಲು ಬಂದ ಸಂಘವು ಸದಸ್ಯರ ಆರ್ಥಿಕ ಹಿತಾಸಕ್ತಿಯನ್ನು ಮುಂದುವರಿಸುವುದೋ ಇಲ್ಲವೆ ಸಹಕಾರಿ ತತ್ವದ ಮೇಲೆ ನಡೆಯುವಂತಹದ್ದೋ ಇಲ್ಲವೋ ಎಂಬುದನ್ನು ನೋಡಿ ಖಚಿತಮಾಡಿಕೊಂಡು ನೋಂದಾಯಿಸಿಕೊಳ್ಳಬಹುದು, ಎಂಬುದಕ್ಕೆ ಅವಕಾಶ ಇಟ್ಟಂತೆ ಇದೆ.

## ೬. ಸಹಕಾರಿ ಸಂಘಗಳ ನೊಂದಣಿಗಾಗಿ ಅರ್ಜಿ

(೧) ಗೊತ್ತುಮಾಡಲ್ಪಡಬಹುದಾದಂತಹ ನಮೂನೆಯಲ್ಲಿ ರಜಿಸ್ಟ್ರಾರನಿಗೆ, ಸಹಕಾರಿ ಸಂಘದ ನೋಂದಣಿ ಸಲುವಾಗಿ ಅರ್ಜಿಯು ಮಾಡಲ್ಪಡತಕ್ಕದ್ದು, ಅವನು ಬೇಡಬಹುದಾದಂತಹ ಎಲ್ಲ ಮಾಹಿತಿಯನ್ನು ಸಂಘದ ಸಲುವಾಗಿ ಅರ್ಜಿದಾರರು ಅವನಿಗೆ ಸಾದರಪಡಿಸತಕ್ಕದ್ದು.

(೨) ಪ್ರತಿಯೊಂದು ಅರ್ಜಿಯು ಈ ಕೆಳಗಿನ ಅಗತ್ಯತೆಗಳನ್ನು ಅನುಲಕ್ಷಿಸ ತಕ್ಕವನ್ನು; ಅವು ಯಾವುವೆಂದರೆ—

(ಅ) ಸಹಕಾರಿ ಸಂಘದ ಸೂಚಿತ ಪ್ರೋಟ ನಿಯಮಗಳ ಮೂರು ಪ್ರತಿಗಳು ಅರ್ಜಿಯು ಸಂಗಡ ಇರತಕ್ಕದ್ದು;

(ಬ) ಅರ್ಜಿದಾರರು ಎಲ್ಲರೂ ವ್ಯಕ್ತಿಗಳಾಗಿರುವಾಗ ಅರ್ಜಿದಾರರ ಸಂಖ್ಯೆಯು ಹತ್ತರಕಿಂತ ಕಡಿಮೆಯಾಗಿರತಕ್ಕದ್ದಲ್ಲ;

(ಕ) ವ್ಯಕ್ತಿಯಾಗಿದ್ದ ಪ್ರತಿಯೊಬ್ಬ ಅರ್ಜಿದಾರನು ಹದಿನೆಂಟು ವಯಸ್ಸಿನ ಮೇಲ್ಪಟ್ಟವನು ಆಗಿರತಕ್ಕದ್ದು;

(ಡ) ಸಹಕಾರಿ ಸಂಘದ ಉದ್ದೇಶಗಳಲ್ಲಿ ತನ್ನ ಸದಸ್ಯರಿಗೆ ಸಾಲವಾಗಿ ಕೊಡುವುದರ ಸಲುವಾಗಿ ನಿಧಿ ನಿರ್ಮಾಣ ಮಾಡುವುದು ಇರುವಾಗ ಮತ್ತು ಎಲ್ಲ ಅರ್ಜದಾರರು ವ್ಯಕ್ತಿಗಳಾಗಿರುವಾಗ, ಅರ್ಜದಾರರು ಅದೇ ಗ್ರಾಮದಲ್ಲಿ ಇಲ್ಲವೆ ಅದೇ ಪಟ್ಟಣದಲ್ಲಿ ಇಲ್ಲವೆ ಅದೇ ಗ್ರಾಮಗಳ ಗುಂಪಿನಲ್ಲಿ, ವಾಸವಾಗಿರತಕ್ಕದ್ದು ಇಲ್ಲವೆ ಅದೇ ವರ್ಗಕ್ಕೆ ಸಂಬಂಧಿಸಿದವರು ಆಗಿರತಕ್ಕದ್ದು ಇಲ್ಲವೆ ಆದೇ ವೃತ್ತಿ ಯನ್ನು ಅನುಸರಿಸಿದವರು ಆಗಿರತಕ್ಕದ್ದು;

(ಇ) ವ್ಯಕ್ತಿಯಾಗಿದ್ದ ಪ್ರತಿಯೊಬ್ಬ ಅರ್ಜದಾರನಿಂದ ಆ ಅರ್ಜಿಯು ಸಹಿ ಮಾಡಲ್ಪಟ್ಟದ್ದು ಆಗಿರತಕ್ಕದ್ದು ಮತ್ತು ಅರ್ಜದಾರನಾಗಿರುವ ಸಹಕಾರಿ ಸಂಘದ ಪರವಾಗಿ ಯೋಗ್ಯರೀತಿಯಲ್ಲಿ ಅಧಿಕರಿಸಲ್ಪಟ್ಟ ವ್ಯಕ್ತಿಯಿಂದ ಸಹಿ ಮಾಡಲ್ಪಟ್ಟದ್ದು ಆಗಿರತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವನ್ನು ನೋಂದಣಿ ಮಾಡಲು ಅರ್ಜಿಯನ್ನು ರಜಿಸ್ಟ್ರಾರನಿಗೆ ಮಾಡತಕ್ಕದ್ದು. ಅರ್ಜಿಯು ಯಾವ ನಮೂನೆಯಲ್ಲಿ ಇರಬೇಕೆಂಬುದನ್ನು ನಿಯಮ ಗಳು ಗೊತ್ತುಮಾಡುವವು. ಆ ನಮೂನೆಯಲ್ಲಿ ಅರ್ಜಿ ಮಾಡತಕ್ಕದ್ದು. ರಜಿ ಸ್ಟ್ರಾರನು ಬೇಡಿದ ಎಲ್ಲ ಮಾಹಿತಿಯನ್ನು ಅರ್ಜದಾರರು ಒದಗಿಸಬೇಕು. ಅಂದರೆ ಅರ್ಜಿ ಮಾಡಿದ ನಂತರ ಮತ್ತು ನೋಂದಣಿ ಯಾಗುವುದಕ್ಕೆ ಮುಂಚೆ ಅಗತ್ಯವಾದ ಎಲ್ಲ ಮಾಹಿತಿಯನ್ನು ರಜಿಸ್ಟ್ರಾರನು ಕೇಳಿದುದನ್ನೆಲ್ಲ ಒದಗಿಸುವುದು ಅರ್ಜದಾರರ ಕೆಲಸ. ನೋಂದಾಯಿಸಲು ಯೋಗ್ಯವಾಗಿದೆಯೆಂದು ಮನವರಿಕೆ ಮಾಡಿಕೊಳ್ಳಲು ರಜಿಸ್ಟ್ರಾರನು ಮಾಹಿತಿ ಕೇಳುವನು. ಅದನ್ನು ಅರ್ಜದಾರರು ಒದಗಿಸತಕ್ಕದ್ದು.

ಪ್ರತಿಯೊಂದು ಅರ್ಜಿಯು ಪೂರ್ಣವಾಗಿರಬೇಕು. ಅಂದರೆ ಅರ್ಜಿಯು ಪ್ರತಿಯೊಬ್ಬ ಅರ್ಜದಾರನಿಂದ ಸಹಿ ಮಾಡಲ್ಪಟ್ಟಿರಬೇಕು. ಅರ್ಜದಾರನು ಒಂದು ಸಹಕಾರಿ ಸಂಘವಾಗಿದ್ದರೆ, ಅದರಿಂದ ಯೋಗ್ಯ ಅಧಿಕಾರ ಪಡೆದ ವ್ಯಕ್ತಿಯು ಸಹಿ ಮಾಡಿರಬೇಕು. ಹೀಗೆ ಸಹಿ ಮಾಡಿದ ವ್ಯಕ್ತಿಯು ೧೮ ವಯಸ್ಸಿನ ಮೇಲ್ಪಟ್ಟವನು

ಇರಬೇಕು. ವ್ಯಕ್ತಿಗಳೇ ಅರ್ಜಿದಾರರು ಇದ್ದರೆ ೧೦ ರಕಿಂತ ಕಡಿಮೆ ಸಂಖ್ಯೆಯಲ್ಲಿ ಅರ್ಜಿದಾರರು ಇರಬಾರದು. ಕನಿಷ್ಟ ೧೦ ವ್ಯಕ್ತಿಗಳಾದರೂ ಇರಬೇಕು. ಈ ಅರ್ಜಿಯ ಸಂಗಡ ಆ ಸಂಘದ ಸೂಚಿತ ಪೋಟನಿಯಮಗಳ ಮೂರು ಪ್ರತಿಗಳನ್ನು ಜೋಡಿಸಿರಬೇಕು. ಅಂದಾಗ ಆ ಅರ್ಜಿಯು ಪೂರ್ಣವಾದ ಅರ್ಜಿಯಾಗುವುದು.

ಸಂಘವು ತನ್ನ ಉದ್ದೇಶಗಳಲ್ಲಿ ತನ್ನ ಸದಸ್ಯರಿಗೆ ಸಾಲ ಕೊಡಬೇಕೆಂದು ಮಾಡಿ ಅದಕ್ಕಾಗಿ ನಿಧಿಯನ್ನು ನಿರ್ಮಾಣಮಾಡಬೇಕೆಂದು ಮಾಡಿ ಕೊಂಡಿದ್ದರೆ ಇನ್ನೂ ಒಂದು ನಿರ್ಬಂಧವನ್ನು ಪಾಲಿಸಿ ಅರ್ಜಿಯನ್ನು ಸಾದರಪಡಿಸ ಬೇಕಾಗುವುದು. ಹಾಗೆ ಉದ್ದೇಶವಿದ್ದಾಗ ಎಲ್ಲ ಅರ್ಜದಾರರು, ಅವರು ವ್ಯಕ್ತಿಗಳಾಗಿದ್ದಾಗ, ಒಂದೇ ಗ್ರಾಮದಲ್ಲಿ, ಇಲ್ಲವೆ ಪಟ್ಟಣದಲ್ಲಿ, ಇಲ್ಲವೆ ಒಂದೇ ಗ್ರಾಮಗಳ ಗುಂಪಿನಲ್ಲಿ ವಾಸವಾಗಿರುವಂತಹರು ಇರಬೇಕು. ಇಲ್ಲವೆ ಒಂದೇ ವರ್ಗದವರು ಇಲ್ಲವೆ ಒಂದೇ ವೃತ್ತಿಯವರು ಇರಬೇಕು. ಸಹಕಾರಕ್ಕಾಗಿ ಅಗತ್ಯ ವಾದ ನಿರ್ಬಂಧವಿದು.

ಈ ಎಲ್ಲ ಮಾತುಗಳನ್ನು ಲಕ್ಷಿಸಿ ಅರ್ಜಿಯನ್ನು ಪೂರ್ತಿಮಾಡಿ ಗೊತು ಮಾಡಿದ ನಮೂನೆಯಲ್ಲಿ ಬರೆದು, ಅದರ ಜತೆಗೆ ಸೂಚಿತ ಪೋಟ ನಿಯಮಗಳ ಮೂರು ಪ್ರತಿಗಳನ್ನು ಕಳಿಸಿದರೆ, ನೋಂದಣಿ ಸಲುವಾಗಿ ವಿಚಾರ ಮಾಡಲು ರಜಿಸ್ಟ್ರಾರನಿಗೆ ಆಸ್ಪದವುಂಟಾಗುವುದು. ಇವುಗಳಲ್ಲಿ ಕೊರತೆ ಇದ್ದರೆ, ವಿಚಾರ ಮಾಡಲಿಕ್ಕೆ ರಜಿಸ್ಟ್ರಾರನಿಗೆ ಆತಂಕವುಂಟಾಗುವುದು. ಮೂಲಭೂತ ಅವಶ್ಯಕತೆಗಳನ್ನು ಪೂರೈಸುವುದು ಅರ್ಜಿದಾರನ ಕರ್ತವ್ಯ. ನಂತರ ಅವಶ್ಯಕಂಡ ಮಾಹಿತಿಯನ್ನು ಪಡೆಯುವುದು ರಜಿಸ್ಟ್ರಾರನ ಕಾರ್ಯ. ಪಡೆದ ನಂತರ, ಅದು ಈ ಕಾಯಿದೆಯನುಸಾರವಾಗಿ ನೋಂದಾಯಿಸಲು ಬರುವುದೆಂದು ಮನಗಂಡ ಮೇಲೆ ರಜಿಸ್ಟ್ರಾರನು ಆ ಸಂಘವನ್ನು ನೋಂದಣಿ ಮಾಡುವನು. ಇದು ಈ ಕಲಮಿನಲ್ಲಿ ಅಡಕವಾದ ಮಾತು.

## ೭. ನೋಂದಣಿ

(೧) ರಜಿಸ್ಟ್ರಾರನಿಗೆ—

(ಅ) ಆ ಅರ್ಜಿಯು ಈ ಕಾಯಿದೆಯ ಹಾಗೂ ಅದರ ನಿಯಮಗಳ ಶರತುಗಳನ್ನು ಪೂರೈಸಿದೆಯೆಂದು;

(ಬ) ಆ ಸೂಚಿತ ಸಂಘದ ಉದ್ದೇಶಗಳು ಕಲಮು ೪ ರ ಅನುಸಾರವಾಗಿ ಇವೆಯೆಂದು;

(ಕ) ಆ ಸೂಚಿತ ಸಂಘದ ಗೊತ್ತು ಗುರಿಗಳು ಸಾಮಾಜಿಕ ನ್ಯಾಯದ ತತ್ವಗಳಿಗೆ ವಿಸಂಗತವಾಗಿಲ್ಲವೆಂದು;

(ಡ) ಆ ಸೂಚಿತ ಪೋಟನಿಯಮಗಳು ಈ ಕಾಯಿದೆಯ ಹಾಗೂ ಅದರ ನಿಯಮಗಳ ವಿರುದ್ಧವಾಗಿ ಇಲ್ಲವೆಂದು;

(ಇ) ಆ ಸೂಚಿತ ಸಂಘವು ಭದ್ರವಾದ ವ್ಯವಹಾರದ ಲಕ್ಷಣಗಳನ್ನು ಪ್ರಾಪ್ತಿಸುವುವೆಂದು ಮತ್ತು ಯಶಸ್ವಿಯಾಗಲು ಯೋಗ್ಯ ಆಸ್ಪದವಿರುವುದೆಂದು;

ಮನವರಿಕೆಯಾದರೆ, ರಜಿಸ್ಟ್ರಾರನು ಆ ಸಹಕಾರಿ ಸಂಘವನ್ನು ಮತ್ತು ಅದರ ಪೋಟನಿಯಮಗಳನ್ನು ನೋಂದಾಯಿಸಬಹುದು.

(೨) ಸಹಕಾರಿ ಸಂಘವನ್ನು ನೋಂದಾಯಿಸಲು ರಜಿಸ್ಟ್ರಾರನು ನಿರಾಕರಿಸಿದಾಗ ಅವನು ಹಾಗೆ ನಿರಾಕರಿಸಿದ ಹುಕುಮನ್ನು ನಿರಾಕರಣೆಯ ಕಾರಣಗಳ ಸಹಿತವಾಗಿ ಗೊತ್ತು ಮಾಡಬಹುದಾದಂತಹ ಅರ್ಜಿದಾರರಿಗೆ ತಿಳಿಸತಕ್ಕದ್ದು.

**ವಿವೇಚನೆ**

ಕಲಮು ೪, ೫, ೬ ಇವು ನೋಂದಣಿಗೆ ಸಂಬಂಧಪಟ್ಟ ಪೂರ್ವಭಾವಿಯಾದ ಕಲಮುಗಳು. ಅವುಗಳನ್ನು ಲಕ್ಷಿಸಬೇಕು. ಅದೇ ಮಾತನ್ನೆ ಈ ಕಲಮು ಹೇಳುತ್ತದೆ

ಇಲ್ಲಿ ಮುಖ್ಯವಾದ ಮಾತೆಂದರೆ ರಜಿಸ್ಟ್ರಾರನಿಗೆ ಮನವರಿಕೆಯಾಗಬೇಕಾದುದು. ನೋಂದಣಿಗಾಗಿ ಮಾಡಿದ ಅರ್ಜಿಯು ಕಾಯಿದೆಯ ಹಾಗೂ ನಿಯಮಗಳ ಶರತುಗಳನ್ನು ಪೂರೈಸಿದೆಯೆಂದು ರಜಿಸ್ಟ್ರಾರನಿಗೆ ಮನವರಿಕೆಯಾಗಬೇಕು. ನೋಂದಾಯಿಸಲು ಯೋಗ್ಯವಾದ ಸಂಘವು ಎಂದು ಕಲಮು ೪ ರ ಪ್ರಕಾರ ಇದೆಯೆಂದು ರಜಿಸ್ಟ್ರಾರನಿಗೆ ಮನವರಿಕೆಯಾಗಬೇಕು. ಸಾಮಾಜಿಕ ನ್ಯಾಯದ ತತ್ವಗಳಿಗೆ ಸಂಘದ ಉದ್ದೇಶಗಳು ವಿಸಂಗತವಾಗಿಲ್ಲವೆಂದು ರಜಿಸ್ಟ್ರಾರನಿಗೆ ಮನವರಿಕೆಯಾಗಬೇಕು; ಆ ಸಂಘದ ಪೋಟನಿಯಮಗಳು ಕಾಯಿದೆಗೆ ಮತ್ತು ಅದರ ನಿಯಮಗಳಿಗೆ ವಿರುದ್ಧವಾಗಿಲ್ಲವೆಂದು ಮನವರಿಕೆಯಾಗಬೇಕು. ಇವೆಲ್ಲ ಇದ್ದರೂ ಅದು ವ್ಯವಹಾರದ ದೃಷ್ಟಿಯಿಂದ ಭದ್ರವಾಗಿದೆಯೆಂದೂ ಅದು ನಡೆದರೆ ಯಶಸ್ವಿಯಾಗುವುದೆಂದೂ ಮನವರಿಕೆಯಾಗಬೇಕು. ಅಂದಾಗ ಅದನ್ನು ರಜಿಸ್ಟ್ರಾರನು ನೋಂದಾಯಿಸಿಕೊಳ್ಳುವನು. ಇಲ್ಲವಾದರೆ ನಿರಾಕರಿಸುವನು. ಒಂದು ವೇಳೆ ನಿರಾಕರಿಸಿದರೆ, ನಿರಾಕರಣೆಯ ಕಾರಣ ಸಹಿತವಾಗಿ ಆ ಹುಕುಮನ್ನು ಅರ್ಜಿದಾರರಿಗೆ ತಿಳಿಸಬೇಕು.

ರಜಿಸ್ಟ್ರಾರನಿಗೆ ಮನವರಿಕೆಯಾಗಬೇಕು, ಎಂದರೆ ಅದು ಅವನ ಸ್ವೇಚ್ಛೆಯ ವಿಷಯವಾಗಿಲ್ಲ. ಈ ಕಲಮಿನಲ್ಲಿ ಯಾವ ಯಾವ ವಿಷಯಗಳ ಬಗ್ಗೆ ಮನವರಿಕೆಯಾಗಬೇಕೆಂಬ ಬಗ್ಗೆ ಹೇಳಿದೆಯಲ್ಲದೆ, ಅದು ಕಾಯಿದೆಗೆ ಹೊಂದಿಕೊಂಡಿರಬೇಕಾದ ಸಂಗತಿಗಳನ್ನು ಹೇಳಿದೆ. ಕಾಯಿದೆಗೆ ಹೊಂದಿಕೊಂಡಿದ್ದರೆ ರಜಿಸ್ಟ್ರಾರನಿಗೆ ಮನವರಿಕೆ ಆದಂತೆ. ಆದರೆ ವ್ಯವಹಾರದ ದೃಷ್ಟಿಯಿಂದ ಭದ್ರವಾಗಿಲ್ಲ, ಇದು ಯಶಸ್ವಿ

ಯಾಗುವುದಿಲ್ಲ, ಎಂದು ರಜಿಸ್ಟ್ರಾರನಿಗೆ ಅನ್ನಿಸಿದರೆ, ಅದು ಅವನ ವಿವೇಕದ ಪ್ರಶ್ನೆಯಾಗುವುದು; ಅನುಭವದ ಪ್ರಶ್ನೆಯಾಗುವುದು. ಆದರೂ ಅವನು ನಿರಾಕರಿಸಿದರೆ ಅದಕ್ಕೆ ಕಾರಣಗಳನ್ನು ಕೊಡಬೇಕೆಂದು ಹೇಳಿ, ಅವನ ಹುಕುಮು ಸಕಾರಣವಾದುದೂ ಸಬಲಕಾರಣವಾದುದೂ ಆಗಿರಬೇಕೆಂಬುದನ್ನು ಸೂಚಿಸಿದೆ. ಸುಮ್ಮನೆ "ನನ್ನ ಮನಸ್ಸಿಗೆ ಬಂದಿಲ್ಲ ಅದಕ್ಕೆ ನಾನು ನೋಂದಾಯಿಸಿರುವುದಿಲ್ಲ" ಎಂದು ರಜಿಸ್ಟ್ರಾರನಿಗೆ ಹೇಳಲು ಬರುವುದಿಲ್ಲ.

ಈ ಕಲಮಿನಲ್ಲಿ ಒಂದು ಹೊಸ ಸಂಗತಿಯು ಬಂದಿದೆ. ಅದು ಸಾಮಾಜಿಕ ನ್ಯಾಯದ ತತ್ವ. 'ಸಾಮಾಜಿಕ ನ್ಯಾಯ' ವೆಂಬುವದು ಕಾಲಕಾಲಕ್ಕೆ ಬದಲಾಗುವ ಸಂಗತಿಯಾಗಿದೆ. ಯಾವುದು ನ್ಯಾಯ ಯಾವುದು ಅನ್ಯಾಯವೆಂಬುವುದು ಆಯಾ ಕಾಲದ ಸಮಾಜದ ಧೋರಣೆಯು ತಿಳಿಹೇಳುವುದು. ಸಮಾಜ ಒಪ್ಪಿದ್ದು ನ್ಯಾಯ; ಸಮಾಜ ಒಪ್ಪದೇ ಇದ್ದದ್ದು ಅನ್ಯಾಯ. ಆದರೆ ಸಮಾಜವೆಂಬುದು ಒಂದು ವ್ಯಕ್ತಿಯಲ್ಲ; ಅದೊಂದು ಭಾವನೆ; ಅದೊಂದು ವಾತಾವರಣ; ಈ ವಾತಾವರಣ ಅಥವಾ ಭಾವನೆಯನ್ನು ರೂಪುಗೊಳಿಸಿ ಅದಕ್ಕೆ ಸ್ವರೂಪ ಕೊಟ್ಟಾಗ ಅದಕ್ಕೆ ಸ್ಪಷ್ಟತೆ ಬರುವುದು. ಯಾವುದನ್ನು ಬಹುಜನರು ನ್ಯಾಯವೆಂದು ಒಪ್ಪುವರೋ ಅದು ಸಾಮಾಜಿಕ ನ್ಯಾಯ. ಆಗ ಬಹುಮತದ ವಿಷಯವೇ ನ್ಯಾಯವನ್ನು ನಿರ್ಣಯಿಸುವುದು. ಪ್ರಜಾಸತ್ತೆಯಲ್ಲಿ ಸಾಮಾಜಿಕ ನ್ಯಾಯವೆಂದರೆ, ಶಾಸನ ಸಭೆಗಳ ಮುಖಾಂತರ ಧೋರಣೆಗಳನ್ನು ನಿರ್ಣಯಿಸಿದುದೇ ಆಗುವುದು. ಆಗ ಮತ್ತೆ ಅದು ಶಾಸನಿಕ ನ್ಯಾಯವಾಗುವುದು; ಸಾಮಾಜಿಕ ನ್ಯಾಯ—ಶಾಸನಿಕ ನ್ಯಾಯ ಒಂದೇ ಆಗುವ ಸಂಭವ ಉಂಟಾಗುವುದು. ಆದರೆ ಸಮಾಜವು ಬೆಳೆಯುತ್ತಿರುವಾಗ ಅಥವಾ ಸುಧಾರಿಸುತ್ತಿರುವ ಸಂಧಿಕಾಲದಲ್ಲಿರುವಾಗ ಹಳೆಯ ಹಾಗೂ ಹೊಸವಾತಾವರಣವು ಸಮಕಾಲೀನವಾಗಿ ಬಾಳುವಾಗ ಸಾಮಾಜಿಕ ನ್ಯಾಯವೆಂದರೆ ಅಧಿಕಾರಾರೂಢ ಪಕ್ಷವು ಹೇಳುವ ನ್ಯಾಯವೇ ಸಾಮಾಜಿಕ ನ್ಯಾಯವಾಗುವುದು. ತತ್ವತಃ ಸಾಮಾಜಿಕ ನ್ಯಾಯವೆಂದರೇನು; ಅದರಲ್ಲಿ ಅಡಕವಾದ ತತ್ವಗಳು ಯಾವು ಎಂಬುದನ್ನು ತಿಳಿಯಬೇಕು.

ಭಾರತದ ರಾಜ್ಯಘಟನೆಯಲ್ಲಿ ಪೀಠಿಕೆಯಲ್ಲಿ ಸಾಮಾಜಿಕ ನ್ಯಾಯ ಎಂಬ ಪದವು ದೊರೆಯುವುದು; ಭಾರತವು ಪ್ರಜಾಸತ್ತಾತ್ಮಕ ರಾಜ್ಯವು. ಅಂದರೆ ಬಹುಮತದವರ ಆಡಳಿತೆಯುಳ್ಳ ಸರಕಾರವಿರುವ ವ್ಯವಸ್ಥೆ. ಆದರೆ ನ್ಯಾಯವೆಂದರೆ ಬಹುಮತದವರು ಹೇಳಿದ ನ್ಯಾಯವೆಂದು ಆದರೆ ಅದು ನ್ಯಾಯ ಶಬ್ದದ ವಿಪರ್ಯಾಸವಾಗುವುದು. ಪ್ರತಿಯೊಬ್ಬನೂ ತನ್ನ ಸ್ವಾರ್ಥದ ದೃಷ್ಟಿಯಿಂದಲೇ ಜೀವನ ಸಾಗಿಸುತ್ತಾನೆ. ಆದರೆ ಅವನ ವರ್ತನವು ಸಾಮಾನ್ಯರ ಕಲ್ಯಾಣವನ್ನು ಸಾಧಿಸುವ

ಹಾಗೆ ಇದ್ದರೆ ಮಾತ್ರ ಅದು ನ್ಯಾಯವಾದ ವರ್ತನವಾಗುವುದು. ಆ ಮಟ್ಟಿಗೆ ಆವನ ಸ್ವಾರ್ಥವು ಮಿತವಾಗುವುದು. ಸಾಮಾಜಿಕ ನ್ಯಾಯವೆಂಬುದನ್ನು ಈ ಅರ್ಥದಿಂದ ತಿಳಿಯಬೇಕು. ಸಮಾಜದಲ್ಲಿಯ ಸಾಂಪತ್ತಿಕ ಸ್ಥಿತಿ ಇಲ್ಲವೆ ಕಾರ್ಯಾವಕಾಶದ ದೃಷ್ಟಿಯಿಂದ ಉಂಟಾದ ಅಸಮಾನತೆಯನ್ನು ಹೋಗಲಾಡಿಸುವುದು ಸಾಮಾಜಿಕ - ನ್ಯಾಯ. ಕೆಲಸಮಾಡುವಾಗ ಮಾನವೀಯ ಪರಿಸ್ಥಿತಿಯನ್ನು ಉಂಟುಮಾಡುವುದು ಸಾಮಾಜಿಕ ನ್ಯಾಯ. ಹೆರಿಗೆಯ ಸಲುವಾಗಿ ಅನುಕೂಲತೆ, ವ್ಯಕ್ತಿಗಳಿಗೆ ವಿರಾಮ ಮತ್ತು ಸಾಂಪತ್ತಿಕ ಅವಕಾಶವನ್ನು ಒದಗಿಸುವುದು, ಎಲ್ಲರಿಗೂ ಶಿಕ್ಷಣ ಸೌಕರ್ಯವನ್ನು ಒದವಿಸುವುದು, ಹಿಂದುಳಿದವರ ಉತ್ಕರ್ಷ ಸಾಧಿಸುವುದು, ಒತ್ತಾಯದ ಕೂಲಿಯ ಕೆಲಸವನ್ನು ತಡೆಯುವುದು, ಇವೆಲ್ಲವೂ ಸಾಮಾಜಿಕ ನ್ಯಾಯದಲ್ಲಿ ಬರುವುವು.

ರಾಜ್ಯಘಟನೆಯಲ್ಲಿ ಸಾರ್ವಜನಿಕರ (ಎಲ್ಲರ) ಕಲ್ಯಾಣವೆಂದು ಹೇಳಿದೆಯೆ ಹೊರತು, ಬಹುಮತದವರ ಕಲ್ಯಾಣವೆಂದು ಹೇಳಿಲ್ಲ. ಬಹುಮತದ ಸರಕಾರವಾದರೂ ಸಾರ್ವಜನಿಕರ ಕಲ್ಯಾಣ ಸಾಧಿಸಬೇಕೆಂದು ಹೇಳಲಾಗಿದೆ. ಸಾರ್ವಜನಿಕರ ಕಲ್ಯಾಣ ಸಾಧಿಸುವ ತತ್ವಗಳೇ ಸಾಮಾಜಿಕ ನ್ಯಾಯದ ತತ್ವಗಳು.

ಪೀಠಿಕೆಯ ಮಾತುಗಳೂ ಮೂಲಭೂತ ಹಕ್ಕುಗಳೂ, ನಿರ್ದೇಶನ ತತ್ವಗಳೂ ಕೂಡಿ ಭಾರತೀಯ ನಾಗರಿಕನಿಗೆ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ನ್ಯಾಯವನ್ನು ಒದಗಿಸುವಂತೆ ಸರಕಾರಗಳು ನಡೆದುಕೊಳ್ಳಬೇಕೆಂದು, ಕಾಯಿದೆ ಮಾಡಬೇಕೆಂದು ಸೂಚಿಸಲಾಗಿದೆ. ಈ ತತ್ವಗಳಿಗೆ ವಿರುದ್ಧವಾಗಿ ಯಾವುದೇ ಸಹಕಾರಿ ಸಂಘವು ರೂಪುಗೊಳ್ಳಬಾರದೆಂದು ನೋಂದಾಯಿಸುವ ಕಾಲಕ್ಕೆ ರಜಿಸ್ಟ್ರಾರನು ನೋಡಬೇಕೆಂದು ಈ ಕಲಮು ಹೇಳುತ್ತದೆ. ಒಟ್ಟಿನಲ್ಲಿ ಸಹಕಾರಿ ಸಂಘವು ಸದಸ್ಯರ ಆರ್ಥಿಕ ಹಿತಾಸಕ್ತಿ ನೋಡಿದರೂ ಸಾಮಾಜಿಕ ನ್ಯಾಯದ ತತ್ವಗಳಿಗೆ-ಯಾವ ತತ್ವಗಳನ್ನು ರಾಜ್ಯಘಟನೆಯು ಎತ್ತಿ ಹಿಡಿದಿರುವುದೋ ಅದರ ವಿರುದ್ಧವಾಗಿ ಯಾವ ಸಂಘವೂ ರೂಪುಗೊಳ್ಳಬಾರದು ಎಂದೇ ಇದರ ಅರ್ಥ.

## ೮. ನೋಂದಣಿ ಸರ್ಟಿಫಿಕೇಟು

ಈ ಕಾಯಿದೆಯನ್ವಯವಾಗಿ ಸಹಕಾರಿ ಸಂಘವು ನೋಂದಾಯಿಸಲ್ಪಟ್ಟಾಗ ರಜಿಸ್ಟ್ರಾರನು ತಾನು ಸಹಿ ಮಾಡಿ ನೋಂದಣಿ ಸರ್ಟಿಫಿಕೇಟನ್ನು ಕೊಡತಕ್ಕದ್ದು. ಅದರಲ್ಲಿ ನಮೂದಾದ ಸಹಕಾರಿ ಸಂಘವು ಈ ಕಾಯಿದೆಯನ್ವಯವಾಗಿ ಯೋಗ್ಯವಾಗಿ ನೋಂದಾಯಿಸಲ್ಪಟ್ಟ ಸಹಕಾರಿ ಸಂಘವೆಂಬುದಕೆ, ಆ ಸರ್ಟಿಫಿಕೇಟು ನಿರ್ಣಾಯಕ ಪುರಾವೆ ಆಗತಕ್ಕದ್ದು.

**ವಿವೇಚನೆ**

ಸಂಘ ನೋಂದಾಯಿಸಲ್ಪಟ್ಟ ಮೇಲೆ ಆ ಬಗ್ಗೆ ಒಂದು ನೋಂದಣಿ ಸರ್ಟಿಫಿಕೇಟು ಕೊಡಲ್ಪಡಬೇಕು. ಅದನ್ನು ರಜಿಸ್ಟ್ರಾರನು ಕೊಡತಕ್ಕದ್ದು. ಆ ಸರ್ಟಿಫಿಕೇಟಿಗೆ ರಜಿಸ್ಟ್ರಾರನ ಸಹಿ ಇರತಕ್ಕದ್ದು. ಸಹಿ ಮಾಡಿ ಕೊಟ್ಟ ಸರ್ಟಿಫಿಕೇಟಿನಲ್ಲಿ ನಮೂದಾದ ಸಂಘವು ಸರಿಯಾಗಿಯೇ ಈ ಕಾಯಿದೆಯ ಪ್ರಕಾರ ನೋಂದಾಯಿಸಲಾದ ಸಂಘವೆಂದು ನಿರ್ಣಾಯಕ ಪುರಾವೆಯೆಂಬ ಹಾಗೆ ಆ ಸರ್ಟಿಫಿಕೇಟು ತೋರುವುದು. ಸರ್ಟಿಫಿಕೇಟು ಕೊಟ್ಟ ನಂತರ ಅದರಕಿಂತ ಮೊದಲಿನ ಎಲ್ಲ ವಿಧಾನಗಳೂ ಕಾಯಿದೇಶೀರ ಆಗಿವೆಯೆಂಬ ಗ್ರಹಿಕೆಯನ್ನು ಅದು ಹುಟ್ಟಿಸುವುದು. ಆದ್ದರಿಂದ ಸರ್ಟಿಫಿಕೇಟು ನಿರ್ಣಾಯಕ ಪುರಾವೆ ಆಗುವುದು ಸರ್ಟಿಫಿಕೇಟು ಇಲ್ಲದೆ ಯಾವ ಸಂಘವೂ ತನ್ನ ಕಾರ್ಯವನ್ನು ಪ್ರಾರಂಭಿಸಲು ಬರುವುದಿಲ್ಲ. ಸರ್ಟಿಫಿಕೇಟು ಎರಡು ಮಾತುಗಳನ್ನು ಹೇಳುವುದು: ಸಂಘವು ನೋಂದಾಯಿಸಲ್ಪಟ್ಟಿದೆ ಎಂದು; ಮತ್ತು ನೊಂದಣಿಯಕಿಂತ ಮೊದಲಿನ ಎಲ್ಲ ವಿಧಾನವೂ ಸರಿಯಾಗಿ ಪೂರೈಸಲಾಗಿದೆ ಎಂದು ಇದೇ ನಿರ್ಣಾಯಕ ಪುರಾವೆ.

**೯. ಸಹಕಾರಿ ಸಂಘಗಳು ಸಂಸ್ಥೀಕೃತ ಸಂಸ್ಥೆಗಳು**

ಸಹಕಾರಿ ಸಂಘದ ನೊಂದಣಿಯು ಅದು ಯಾವ ಹೆಸರಿನಲ್ಲಿ ನೋಂದಾಯಿಸಲ್ಪಟ್ಟಿರುವುದೋ ಆ ಹೆಸರಿನಲ್ಲಿ ಆ ಸಂಘವನ್ನು ಸಂಸ್ಥೀಕೃತ ಸಂಸ್ಥೆಯನ್ನಾಗಿ ಮಾಡುವುದು, ಅದಕ್ಕೆ ನಿರಂತರ ವಾರಸಾ ಮತ್ತು ಸಾಮಾನ್ಯ ಮುದ್ರೆ ಇದ್ದು ಆಸ್ತಿಯನ್ನು ಧಾರಣಮಾಡಲು, ಕರಾರುಗಳಲ್ಲಿ ಭಾಗಿಯಾಗಲು, ದಾವಾಮಾಡಲು, ಮತ್ತು ಪ್ರತಿವಾದಿಯಾಗಿ ದಾವೆಯಲ್ಲಿ ಮತ್ತು ಪ್ರಕರಣಗಳಲ್ಲಿ ಎದುರಿಸಲು ಮತ್ತು ಯಾವುದರ ಸಲುವಾಗಿ ಅದು ರಚಿತವಾಯಿತೋ ಆ ಉದ್ದೇಶಗಳಿಗಾಗಿ ಅವಶ್ಯಕವಾದ ಎಲ್ಲವನ್ನು ಮಾಡಲು ಅಧಿಕಾರ ಪಡೆದಿರುವ ಸಂಸ್ಥೆಯನ್ನಾಗಿ ಮಾಡುವುದು.

**ವಿವೇಚನೆ**

ಸಹಕಾರಿ ಸಂಘವು ನೋಂದಣಿಯಾದ ಕೂಡಲೇ ಅದಕ್ಕೆ ಒಂದು ಸಂಸ್ಥೆಯ ಸ್ವರೂಪ ಬರುವುದು. ಯಾವ ಹೆಸರಿನಲ್ಲಿ ಅದು ನೋಂದಾಯಿಸಲ್ಪಟ್ಟಿರುವುದೋ ಅದೇ ಆ ಸಂಸ್ಥೆಯ ಹೆಸರು. ಅದು ನಿರಂತರ ವಾರಸಾ ಹಾಗೂ ಸಾಮಾನ್ಯ ಮುದ್ರೆಯುಳ್ಳ ಸಂಸ್ಥೆಯಾಗುವುದು. ವಾದಿಯಾಗಿ ಇಲ್ಲವೆ ಪ್ರತಿವಾದಿ ಕಾರ್ಯ ಮಾಡಬೇಕಾದರೆ ಈ ಸಂಸ್ಥೆಯ ಹೆಸರಿನಲ್ಲಿಯೇ ಮಾಡತಕ್ಕದ್ದು. ಅದರಂತೆ ಆಸ್ತಿ ಧಾರಣ ಮಾಡಲು, ಕರಾರುಗಳಲ್ಲಿ ಭಾಗಿಯಾಗಲು ಇದೇ ಹೆಸರಿನಲ್ಲಿಯ ಸಂಸ್ಥೆಯೇ ಮಾಡತಕ್ಕದ್ದು. ಅಂದರೆ ನೋಂದಣಿಯಾಗುವ ಪೂರ್ವದಲ್ಲಿ ಅರ್ಜದಾರರು ಪ್ರತ್ಯೇಕ ಅಸ್ತಿತ್ವವುಳ್ಳವರಾಗಿದ್ದು ನೋಂದಣಿಯಾದ ನಂತರ ಸಂಘವು ಒಂದು ಸಂಸ್ಥೆಯಾಗಿ ಅದರ ಅಸ್ತಿತ್ವವು ಕಾಯಿದೇಶೀರ ಆಗಿ ಅದಕ್ಕೆ ಪ್ರತ್ಯೇಕ

ಸಂಸ್ಥಾತ್ಮಕ ಅಸ್ತಿತ್ವ ಬಂದು ಅದರಲ್ಲಿಯು ಸದಸ್ಯರು ಬೇರೆ-ಸಂಘ ಬೇರೆ ಎಂಬ ಹಾಗೆ ಆಗುವುದು. ವ್ಯಕ್ತಿಗಳ ಹೆಸರಿನಿಂದ ಮುಂದೆ ಯಾವ ಕಾರ್ಯವೂ ನಡೆಯು ಲಾಗದು. ಎಲ್ಲ ಕಾರ್ಯವು ಸಂಸ್ಥೆಯ ಹೆಸರಿನಲ್ಲಿ ನಡೆಯತಕ್ಕದ್ದು. ಈ ಸಂಸ್ಥೆಯ ಸ್ವರೂಪವು ಸಂಘಕ್ಕೆ ಬರುವುದು ಅದು ನೋಂದಣಿಯಾದುದರ ಮೂಲಕವಾಗಿ. ಯಾವ ಉದ್ದೇಶಕ್ಕಾಗಿ ಸಂಘವು ರಚಿತವಾಗಿರುವುದೋ ಅದನ್ನೆಲ್ಲವನ್ನು ಮಾಡಲು ಆ ಸಂಘಕ್ಕೆ ಅದರ ಸಂಸ್ಥಾತ್ಮಕ ಸ್ವರೂಪದಲ್ಲಿ ಬರುವುದು.

## ೧೦. ಸಹಕಾರಿ ಸಂಘದ ಹೆಸರಿನಲ್ಲಿ ಬದಲಾವಣೆ

(೧) ಸಹಕಾರಿ ಸಂಘವು ತನ್ನ ಪೋಟನಿಯಮಗಳಿಗೆ ಮಾಡಿದ ತಿದ್ದುಪಡಿಯಿಂದ ತನ್ನ ಹೆಸರನ್ನು ಅದು ಬದಲಿಸಿಕೊಳ್ಳಬಹುದು.

(೨) ಸಹಕಾರಿ ಸಂಘವು ತನ್ನ ಹೆಸರನ್ನು ಬದಲಿಸಿದಾಗ ರಜಿಸ್ಟ್ರಾರನು ಆ ಸಂಘದ ಹಿಂದಿನ ಹೆಸರಿನ ಬದಲಾಗಿ ಸಹಕಾರಿ ಸಂಘಗಳ ರಜಿಸ್ಟರದಲ್ಲಿ ಹೊಸ ಹೆಸರನ್ನು ನಮೂದ ಮಾಡತಕ್ಕದ್ದು. ಮತ್ತು ಅದರ ಅನುಸಾರವಾಗಿ ನೋಂದಣಿ ಸರ್ಟಿಫಿಕೇಟನ್ನು ತಿದ್ದುಪಡಿ ಮಾಡತಕ್ಕದ್ದು.

(೩) ಸಹಕಾರಿ ಸಂಘದ ಹೆಸರಿನಲ್ಲಿ ಆದ ಬದಲಾವಣೆಯು ಸಹಕಾರಿ ಸಂಘದ ಹಕ್ಕುಗಳನ್ನು ಇಲ್ಲವೆ ಹೊಣೆಗಾರಿಕೆಗಳನ್ನು ಬಾಧಿಸತಕ್ಕದ್ದಲ್ಲ ಇಲ್ಲವೆ ಅದರಿಂದ ಇಲ್ಲವೆ ಅದರ ವಿರುದ್ಧ ನಡೆದ ಯಾವುದೇ ಕಾಯಿದೇಶೀರ ಪ್ರಕರಣವನ್ನು ದೋಷಯುಕ್ತವಾಗಿ ಮಾಡತಕ್ಕದ್ದಲ್ಲ. ಮತ್ತು ಅದರ ಹಿಂದಿನ ಹೆಸರಿನಲ್ಲಿ ಸಂಘದಿಂದ ಇಲ್ಲವೆ ಸಂಘದ ವಿರುದ್ಧವಾಗಿ ಪ್ರಾರಂಭ ಮಾಡಬಹುದಾಗಿದ್ದ ಇಲ್ಲವೆ ಮುಂದುವರೆಸಬಹುದಾಗಿದ್ದ ಯಾವುದೇ ಕಾಯಿದೇಶೀರ ಪ್ರಕರಣಗಳು ಹೊಸ ಹೆಸರಿನಿಂದ ಪ್ರಾರಂಭ ಮಾಡಬಹುದು ಇಲ್ಲವೆ ಮುಂದುವರೆಸಬಹುದು.

### ವಿವೇಚನೆ

ಸಹಕಾರಿ ಸಂಘವು ತನ್ನ ಹೆಸರನ್ನು ಬದಲಿಸಿಕೊಳ್ಳಲು ಅನುಕೂಲತೆ ಇದೆ. ಹಾಗೆ ಹೆಸರು ಬದಲಿಸಬೇಕಾದರೆ ಅದರ ಪೋಟ-ನಿಯಮಗಳಲ್ಲಿ ತಿದ್ದುಪಡಿಯಾಗಬೇಕು. ತಿದ್ದುಪಡಿ ಮಾಡಿದ ನಂತರ ಹೆಸರು ಬದಲಿಸಿಕೊಳ್ಳಬಹುದು. ಹೀಗೆ ಹೆಸರು ಬದಲಿಸಿಕೊಂಡಾಗ ರಜಿಸ್ಟ್ರಾರನು ಬದಲಾದ ಹೆಸರನ್ನು ಸಹಕಾರಿ ಸಂಘಗಳ ರಜಿಸ್ಟರದಲ್ಲಿ ನಮೂದಿಸಬೇಕು. ಮತ್ತು ಸರ್ಟಿಫಿಕೇಟನ್ನು ಆ ಬಗ್ಗೆ ತಿದ್ದುಪಡಿ ಮಾಡಬೇಕು.

ಹೆಸರು ಬದಲಾಗುವುದರಿಂದ ಪರಿಣಾಮ ಏನಾಗುವುದು? ಹೆಸರು ಬದಲಾದುದಷ್ಟೇ ಪರಿಣಾಮ. ಬೇರಾವ ಪರಿಣಾಮಗಳೂ ಆಗುವುದಿಲ್ಲ, ಎಂದು ಇಲ್ಲಿ

ಹೇಳಿದೆ. ಹಿಂದಿನ ಇಲ್ಲವೆ ಹೊಸ ಹೆಸರಿನ ಸಂಘದ ಯಾವ ಹಕ್ಕು ಹೊಣೆಗಾರಿಕೆಗಳಿಗೆ ಬಾಧೆ ಬರುವುದಿಲ್ಲ. ಹಿಂದೆ ಇದ್ದ ಪ್ರಕರಣಗಳನ್ನು ಮುಂದೆ ಹೊಸ ಹೆಸರಿದಲ್ಲಿ ಮುಂದುವರಿಸಬಹುದು. ಹಿಂದೆ ಇದ್ದ ಹೆಸರಿನಲ್ಲಿಯ ಪ್ರಕರಣಗಳನ್ನು ಹೊಸ ಹೆಸರಿನಲ್ಲಿ ಪ್ರಾರಂಭಿಸಬಹುದು.

ಪೋಟ ನಿಯಮಗಳು ನೋಂದಾಯಿಸಲ್ಪಟ್ಟಿರುವುವು. ಸಂಘದ ನೋಂದಣಿ ಅರ್ಜಿಯ ಜತೆಗೆ ಹಾಜರ ಮಾಡಲ್ಪಟ್ಟಿರುವುವು; ಪೋಟ ನಿಯಮಗಳಲ್ಲಿ ಸಂಘದ ಹೆಸರು ನಮೂದಾಗಿರುವುದು. ಆದ್ದರಿಂದ ಅದರ ತಿದ್ದುಪಡಿಯಾದ ಹೊರತು ಹೆಸರಿನಲ್ಲಿ ಬದಲಾವಣೆ ಮಾಡಲು ಬರುವುದಿಲ್ಲ ಅದರ ತಿದ್ದುಪಡಿಯಾದ ಮೇಲೆ ಹೆಸರು ಬದಲಾದರೂ ಸಂಘದ ಸ್ಥಾನಮಾನ, ಹಕ್ಕು ಹೊಣೆಗಾರಿಕೆ, ಅಧಿಕಾರ-ಭದ್ರತೆಗಳಿಗೆ ಯಾವುದೇ ಬಾಧೆ ಉಂಟಾಗುವುದಿಲ್ಲ. ಮೂಲ ಸಂಘವೇ ಬದಲಾದ ಹೆಸರಿನಿಂದ ಮುಂದುವರೆಯುವುದು. ಇದರಿಂದ ಅದರ ನಿರಂತರತ್ವಕ್ಕೆ ಬಾಧೆ ಬರುವುದಿಲ್ಲ.

## ೧೧. ಹೊಣೆಗಾರಿಕೆಯಲ್ಲಿ ಬದಲಾವಣೆ

(೧) ಈ ಕಾಯಿದೆಯ ಮತ್ತು ನಿಯಮಗಳ ಶರತುಗಳಿಗಂಕಿತವಾಗಿ ಸಹಕಾರಿ ಸಂಘವು ತನ್ನ ಪೋಟ ನಿಯಮಗಳ ತಿದ್ದುಪಡಿ ಮಾಡಿ ತನ್ನ ಹೊಣೆಗಾರಿಕೆಯ ಸ್ವರೂಪ ಇಲ್ಲವೆ ವ್ಯಾಪ್ತಿಯನ್ನು ಬದಲು ಮಾಡಬಹುದು.

(೨) ಸಹಕಾರಿ ಸಂಘವು ತನ್ನ ಹೊಣೆಗಾರಿಕೆಯ ಸ್ವರೂಪ ಇಲ್ಲವೆ ವ್ಯಾಪ್ತಿಯನ್ನು ಬದಲಿಸಬೇಕೆಂದು ಠರಾವು ಪಾಸು ಮಾಡಿದಾಗ ಆ ಬಗ್ಗೆ ತನ್ನ ಎಲ್ಲ ಸದಸ್ಯರಿಗೆ ಧನಕೋಗಳಿಗೆ, ಲಿಖಿತವಾಗಿ ನೋಟೀಸು ಕೊಡತಕ್ಕದ್ದು ಮತ್ತು ಯಾವುದೇ ಪೋಟ ನಿಯಮದಲ್ಲಿ ಇಲ್ಲವೆ ಕರಾರುಪತ್ರದಲ್ಲಿ ಏನೇ ಹೇಳಲಾಗಿದ್ದರೂ ಆ ನೋಟೀಸು ಅವನ ಮೇಲೆ ಜಾರಿಯಾದ ಒಂದು ತಿಂಗಳದಲ್ಲಿ ಯಾವುದೇ ಸದಸ್ಯನು ಇಲ್ಲವೆ ಧನಕೋನು ಸಂದರ್ಭಾನುಸಾರವಾಗಿ ತನ್ನ ಶೇರುಗಳನ್ನು, ಠೇವುಗಳನ್ನು ಇಲ್ಲವೆ ಸಾಲಗಳನ್ನು ಹಿಂತೆಗೆದುಕೊಳ್ಳಲು ಅವಕಾಶ ಇರತಕ್ಕದ್ದು.

(೩) ಉಪಕಲಮು(೨)ರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಯಾವುದೇ ಸದಸ್ಯನು ಇಲ್ಲವೆ ಧನಕೋನು, ತನಗೆ ಕೊಟ್ಟ ಅವಕಾಶವನ್ನು ಉಪಯೋಗಿಸದಿದ್ದರೆ, ಬದಲಾವಣೆಗೆ ಅವನು ಒಪ್ಪಿದ್ದಾನೆಂದು ಗಣಿಸತಕ್ಕದ್ದು.

(೪) ಸಹಕಾರಿ ಸಂಘದ ಸ್ವರೂಪ ಇಲ್ಲವೆ ವ್ಯಾಪ್ತಿಯನ್ನು ಬದಲಿಸುವ ಪೋಟನಿಯಮಗಳ ತಿದ್ದುಪಡಿಯು—

(ಅ) ಎಲ್ಲ ಸದಸ್ಯರ ಮತ್ತು ಧನಕೋಗಳ ಸಮ್ಮತಿಯು ಪಡೆವ ತನಕ ಇಲ್ಲವೆ ಪಡೆಯಲಾಗಿದೆಯೆಂದು ಗಣಿಸುವ ತನಕ; ಇಲ್ಲವೆ

(ಬ) ಉಪಕಲಮು (೨) ರಲ್ಲಿ ಸೂಚಿಸಲಾದ ಅವಕಾಶವನ್ನು ಉಪಯೋಗಿಸಿದ ಸದಸ್ಯರ ಮತ್ತು ಧನಕೋಗಳ ಎಲ್ಲ ಮಾಗಣಿಗಳು, ಅದರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಪೂರ್ತಿಯಾಗಿ ಪೂರೈಸಲ್ಪಡುವ ತನಕ,

ನೋಂದಾಯಿಸಲ್ಪಡತಕ್ಕದ್ದಲ್ಲ ಇಲ್ಲವೆ ಪರಿಣಾಮಕಾರಿಯಾಗತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘವು ನೋಂದಾಯಿಸಲ್ಪಡುವ ಕಾಲಕ್ಕೆ ಅದರ ಹೊಣೆಗಾರಿಕೆಯು ನಿಯಮಿತವಾಗಿದೆಯೋ ಇಲ್ಲವೆ ಅನಿಯಮಿತವಾಗಿದೆಯೋ ಎಂಬುದನ್ನು ಕಲಮು ೫ ರ ಪ್ರಕಾರ ನಿರ್ದಿಷ್ಟಪಡಿಸಬೇಕಾಗುತ್ತದೆ. ಹಾಗೆ ನಿರ್ದಿಷ್ಟಪಡಿಸಿ ಸಂಘವು ಒಮ್ಮೆ ನೋಂದಣಿಯಾದ ಮೇಲೆ ಅದರ ಹೊಣೆಗಾರಿಕೆಯ ಬಗ್ಗೆ ಬದಲಾವಣೆ ಮಾಡಲಿಕ್ಕೆ ಬರುವುದೋ ಇಲ್ಲವೊ ಎಂಬುದಕ್ಕೆ ಈ ಕಲಮು ಉತ್ತರ ಹೇಳುತ್ತದೆ. ಬದಲಾವಣೆ ಮಾಡಲು ಬರುತ್ತದೆ; ಆದರೆ ಅದಕ್ಕೆ ನಿರ್ದಿಷ್ಟವಾದ ವಿಧಾನವಿದೆ. ಅದನ್ನು ಈ ಕಲಮಿನಲ್ಲಿ ಹೇಳಲಾಗಿದೆ.

ಸಂಘದ ಸ್ವರೂಪ ಮತ್ತು ವ್ಯಾಪ್ತಿಯು ಅದರ ಪೋಟನಿಯಮಗಳಿಂದ ನಿರ್ಣಯಿತವಾಗುವುದು. ಆದ್ದರಿಂದ ಬದಲಾವಣೆ ಮಾಡುವದಕ್ಕಿಂತ ಮೊದಲು ಪೋಟನಿಯಮಗಳಲ್ಲಿ ತಿದ್ದುಪಡಿಯಾಗಬೇಕಾಗುವುದು. ಏನು ಬದಲು ಮಾಡಬೇಕು ಎಂಬ ಬಗ್ಗೆ ಒಂದು ಠರಾವು ಸಂಘದಲ್ಲಿ ಸ್ವೀಕೃತವಾಗಬೇಕು. ಮತ್ತು ಹೀಗೆ ಬದಲು ಮಾಡಬೇಕೆಂದು ಸಂಘವು ಠರಾವು ಮಾಡಿದೆ ಎಂಬ ಬಗ್ಗೆ ಎಲ್ಲ ಸದಸ್ಯರಿಗೆ ಹಾಗೂ ಧನಕೋಗಳಿಗೆ, ಲಿಖಿತ ನೋಟೀಸನ್ನು ಕೊಡಬೇಕು. ಮೂಲತಃ ಇದ್ದ ಸ್ವರೂಪ ಹಾಗೂ ಹೊಣೆಗಾರಿಕೆಯ ವ್ಯಾಪ್ತಿಯ ಬಗ್ಗೆ ಹೊಣೆಗಾರರಾಗಿರುವ ಸದಸ್ಯರಿಗೆ ತಮ್ಮ ಸದಸ್ಯತ್ವವನ್ನು ಮುಂದುವರಿಸಬೇಕೋ ಬೇಡವೋ ಎಂಬ ಬಗ್ಗೆ ವಿಚಾರಿಸಲು ಆಸ್ಪದ ಕೊಡಬೇಕೆಂದು ಈ ವಿಧಾನ ಹೇಳಿಯದೆ. ಅದರಂತೆ ಆ ಹೊಣೆಗಾರಿಕೆಯ ಆಶ್ವಾಸನದ ಮೇಲೆ ಸಾಲ ಕೊಟ್ಟಿರುವ ಧನಕೋ ಜನರು ಸಾಲವನ್ನು ಮುಂದುವರೆಸಬೇಕೋ ಇಲ್ಲವೆ ಸಂಘದ ಸಂಬಂಧ ಕಡಿದುಕೊಳ್ಳಬೇಕೋ ಎಂಬ ಬಗ್ಗೆ ವಿಚಾರ ಮಾಡಲು ಅವಕಾಶ ಕಲ್ಪಿಸಿ ಕೊಡಬೇಕೆಂದು ಅವರಿಗೂ ನೋಟೀಸು ಮಾಡಬೇಕಾಗುವುದು. ನೋಟೀಸು ಜಾರಿಯಾದ ಒಂದು ತಿಂಗಳ ಒಳಗೆ ಸದಸ್ಯರು ಮತ್ತು ಧನಕೋ ಜನರು ತಮ್ಮ ಅಭಿಪ್ರಾಯನ್ನು ತಿಳಿಸಬೇಕು. ಹಾಗೆ ಆ ತಿಂಗಳ ಕಾಲಾವಧಿಯಲ್ಲಿ ಅವರು ತಿಳಿಸದಿದ್ದರೆ, ಬದಲಾವಣೆಗೆ ಒಪ್ಪಿದ್ದಾರೆಂದು ಗಣಿಸಲು ಅಡ್ಡಿಯಿಲ್ಲ, ಎಂದು ಈ ಕಲಮು ಹೇಳುತ್ತದೆ. ಆದರೆ ಹೊಣೆಗಾರಿಕೆಯ ಸ್ವರೂಪ ಇಲ್ಲವೆ ವ್ಯಾಪ್ತಿ ಬದಲುಮಾಡಬೇಕೆಂದು ಪೋಟ ನಿಯಮಗಳನ್ನು ನೋಂದಾಯಿಸಿಕೊಳ್ಳುವ ಮೊದಲು, ಸದಸ್ಯರು ಮತ್ತು ಧನಕೋಜನರು ಸಮ್ಮತಿ ಕೊಟ್ಟಿದಾರೆಯೋ, ಕೊಟ್ಟಿರುವರೆಂದು ಗಣಿಸಲಾಗಿದೆಯೋ ಎಂಬದನ್ನು ನೋಡಬೇಕು; ಅಲ್ಲದೆ, ಸಮ್ಮತಿ

ಕೊಡದೆ ಇದ್ದವರ ಮಾಗಣಿಗಳು ಪೂರ್ತಿಯಾಗಿ ಪೂರೈಸಲ್ಪಟ್ಟಿವೆಯೋ ಇಲ್ಲವೊ ಎಂಬುದನ್ನು ನೋಡಿಕೊಂಡು ಆ ಪೋಟ ನಿಯಮುಗಳ ತಿದ್ದುಪಡಿಯನ್ನು ನೋಂದಾಯಿಸಿಕೊಳ್ಳಬೇಕು. ಒಮ್ಮೆ ಅವು ಬದಲಾದ ಸ್ಥಿತಿಯಲ್ಲಿ ನೋಂದಾಯಿಸಲ್ಪಟ್ಟ ಮೇಲೆ, ಅಂದು ಸಂಘವು ಯಾವ ಸ್ವರೂಪದಲ್ಲಿ ಇರುವುದೋ ಅದರ ವ್ಯಾಪ್ತಿಯಲ್ಲಿ ಅದರ ಹೊಣೆಗಾರಿಕೆಯು ಉಂಟಾಗುವುದು. ಅವಕಾಶ ಮಾಡಿಕೊಟ್ಟಾಗ ಕೆಲಸ ಮಾಡದೆ ಇದ್ದ ಸದಸ್ಯರಿಗೆ ಮತ್ತು ಧನಕೋ ಜನರಿಗೆ ಒಮ್ಮೆ ಪೋಟನಿಯಮುಗಳ ತಿದ್ದುಪಡಿಯು ನೋಂದಣಿ ಆದ ಮೇಲೆ ತಕರಾರು ಮಾಡಿಕೊಳ್ಳಲು ಬರುವುದಿಲ್ಲ, ಎಂದು ಇದರಿಂದ ಸೂಚಿತವಾಯಿತು.

ಹೊಣೆಗಾರಿಕೆಯ ಸ್ವರೂಪ ಮತ್ತು ವ್ಯಾಪ್ತಿಯಲ್ಲಿಯ ಬದಲಾವಣೆಯಿಂದ ಹೊಸ ಜನರು ಸಹಕಾರಿ ಸಂಘದಲ್ಲಿ ಆಕರ್ಷಿತರಾಗುವ ಸಂಭವವಿದೆಯೆಂದು ಆ ಬಗ್ಗೆ ಅನುಕೂಲತೆ ಒದಗಿಸಬೇಕೆಂದು ಈ ಕಲಮು ಇದೆ.

## ೧೨. ಸಹಕಾರಿ ಸಂಘದ ಪೋಟನಿಯಮುಗಳಲ್ಲಿ ತಿದ್ದುಪಡಿ

(೧) ಸಹಕಾರಿ ಸಂಘದ ಯಾವುದೇ ಪೋಟನಿಯಮುದ ಯಾವುದೇ ತಿದ್ದುಪಡಿಯು ಈ ಕಾಯಿದೆಯನ್ವಯವಾಗಿ ನೋಂದಾಯಿಸಲ್ಪಟ್ಟ ಹೊರತು ಅಂತಹ ತಿದ್ದುಪಡಿಯು ಕಾಯಿದೆಶೀರ ಆಗಿದೆಯೆಂದು ಆಗತಕ್ಕದ್ದಲ್ಲ.

(೨) ಇಂತಹ ತಿದ್ದುಪಡಿಯ ಪ್ರತಿಯೊಂದು ಸೂಚನೆಯು ರಜಿಷ್ಟ್ರಾರನಿಗೆ ಕಳಿಸಲ್ಪಡತಕ್ಕದ್ದು. ಮತ್ತು ಸೂಚಿತ ತಿದ್ದುಪಡಿಯು—

(i) ಈ ಕಾಯಿದೆಯ ಹಾಗೂ ನಿಯಮುಗಳ ಶರತುಗಳಿಗೆ ವಿರುದ್ಧವಾಗಿಲ್ಲವೆಂದು;

(ii) ಸಹಕಾರಿ ತತ್ವಗಳೊಡನೆ ತಿಕ್ಕಾಟವುಂಟಾಗುವದಿಲ್ಲವೆಂದು;

(iii) ಭದ್ರವ್ಯವಹಾರದ ಅಗತ್ಯತೆಯನ್ನು ಪೂರೈಸುವುದೆಂದು;

(iv) ಸಂಘದ ಸದಸ್ಯರ ಆರ್ಥಿಕ ಹಿತಾಸಕ್ತಿಯನ್ನು ಪುರಸ್ಕರಿಸುವುದೆಂದು; ಮತ್ತು,

(v) ಸಾಮಾಜಿಕ ನ್ಯಾಯದ ತತ್ವಗಳಿಗೆ ವಿಸಂಗತವಾಗುವುದಿಲ್ಲವೆಂದು.

ರಜಿಸ್ಟ್ರಾರನಿಗೆ ಮನವರಿಕೆಯಾದರೆ, ಅವನು ತಿದ್ದುಪಡಿಯನ್ನು ನೋಂದಾಯಿಸಿಕೊಳ್ಳಬಹುದು.

(೩) ನೋಂದಾಯಿಸಿಕೊಂಡ ತಿದ್ದುಪಡಿಯ ನಕಲನ್ನು ಆ ಬಗ್ಗೆ ಅವನಿಂದ ಸಹಿಮಾಡಲ್ಪಟ್ಟ ಸರ್ಟಿಫಿಕೇಟದೊಂದಿಗೆ, ರಜಿಸ್ಟ್ರಾರನು ಆ ಸಂಘಕ್ಕೆ ಕಳಿಸಿಕೊಡತಕ್ಕದ್ದು ಮತ್ತು ತಿದ್ದುಪಡಿಯು ಯೋಗ್ಯ ರೀತಿಯಲ್ಲಿ ನೋಂದಾಯಿಸಲ್ಪಟ್ಟಿದೆಯೆಂಬ ಬಗ್ಗೆ ಇಂತಹ ಸರ್ಟಿಫಿಕೇಟು ನಿರ್ಣಾಯಕ ಪುರಾವೆ ಆಗಿರತಕ್ಕದ್ದು.

(೪) ಸಹಕಾರಿ ಸಂಘದ ಪೋಟ ನಿಯಮಗಳ ತಿದ್ದುಪಡಿಯನ್ನು ನೋಂದಾಯಿಸಲು ರಜಿಸ್ಟ್ರಾರನು ನಿರಾಕರಿಸಿದಾಗ ಅವನು ನಿರಾಕರಣೆಯ ಕಾರಣಸಹಿತವಾಗಿರುವ ನಿರಾಕರಣೆಯ ಹುಕುಮನ್ನು ಆ ಸಂಘಕ್ಕೆ ತಿಳಿಸತಕ್ಕದ್ದು.

**ವಿವೇಚನೆ**

ಸಂಘವು ಸ್ಥಾಪಿತವಾಗಿ ನೋಂದಾಯಿಸಲ್ಪಡಬೇಕಾದಾಗ ಪೋಟ ನಿಯಮಗಳು ಇರಬೇಕು. ಅವೂ ನೋಂದಾಯಿಸಲ್ಪಡಬೇಕು. ಸಂಘದ ಹೆಸರು ಬದಲಿಸುವುದಾಗಲೀ ಹೊಣೆಗಾರಿಕೆಯ ವ್ಯಾಪ್ತಿಯನ್ನು ಸ್ವರೂಪವನ್ನು ಬದಲಿಸುವುದಾಗಲೀ ಪೋಟ ನಿಯಮಗಳ ತಿದ್ದುಪಡಿಯಿಲ್ಲದೆ ಆಗುವಂತಿಲ್ಲವೆಂದು ಹೇಳಿಯಾಯಿತು. ಅಲ್ಲದೆ ತಿದ್ದುಪಡಿಯು ನೋಂದಾಯಿಸಲ್ಪಡಬೇಕೆಂದೂ ಹೇಳಲಾಯಿತು. ಈ ಕಲಮಿನಲ್ಲಿ ಮುಂದಿನ ಮಾತನ್ನು ಹೇಳಲಾಗಿದೆ. ನೋಂದಾಯಿಸಿದೆ ಇದ್ದ ತಿದ್ದುಪಡಿಯು ಕಾಯಿದೇಶೀರ ತಿದ್ದುಪಡಿಯೇ ಅಲ್ಲ, ಎಂಬುದು ಮುಖ್ಯ. ಮತ್ತು ನೋಂದಾಯಿಸಲ್ಪಡುವ ಮುಂಚೆ ರಜಿಸ್ಟ್ರಾರನು ಏನು ಮಾಡಬೇಕೆಂಬ ಬಗ್ಗೆಯೂ ಈ ಕಲಮಿನಲ್ಲಿ ಹೇಳಲಾಗಿದೆ.

ಪೋಟ ನಿಯಮಗಳು ಸಹಕಾರಿ ಸಂಘದ ಜೀವಾಳವಾಗಿವೆಯೆಂಬುದು ಈಗಾಗಲೇ ಖಚಿತವಾಗಿರಬಹುದಾದ ಸಂಗತಿಯಾಗಿದೆ. ಪೋಟ ನಿಯಮಗಳಲ್ಲಿಯ ತಿದ್ದುಪಡಿಯಿಂದ ಸಹಕಾರಿ ಸಂಘದ ಆಂತರಿಕ ಹಾಗೂ ಬಾಹ್ಯ ಸ್ವರೂಪ ಬದಲಾಗುವುದು. ಈ ಬದಲಾವಣೆಯು ಮೂಲ ಸಂಘದ ಸ್ಥಿತಿಯನ್ನೇ ಬದಲಿಸಿ ಈ ಕಾಯಿದೆಯ ಶರತುಗಳನ್ನು ಅಲಕ್ಷಿಸುವಂತಾಗಬಾರದು ಎಂದು ಈ ಕಲಮನ್ನು ಮಾಡಲಾಗಿದೆ. ಸಂಘವನ್ನು ನೋಂದಾಯಿಸಿಕೊಳ್ಳುವ ಕಾಲಕ್ಕೆ ಯಾವ ಯಾವ ಸಂಗತಿಗಳ ಬಗ್ಗೆ ರಜಿಸ್ಟ್ರಾರನು ನೋಡಬೇಕೆಂದು ಕಲಮು ೭ ಹೇಳಿದೆಯೋ ಅವೆಲ್ಲ ಮಾತುಗಳನ್ನು ಪೋಟ ನಿಯಮಗಳ ತಿದ್ದುಪಡಿಯ ನೋಂದಣಿ ಕಾಲಕ್ಕೆ ಕೂಡ ನೋಡಬೇಕೆಂದೂ ಆ ಬಗ್ಗೆ ಮನವರಿಕೆ ಮಾಡಿಕೊಳ್ಳಬೇಕೆಂದೂ ಇಲ್ಲಿ ಹೇಳಿದೆ. ಹಾಗೆ ಮನವರಿಕೆ ಮಾಡಿಕೊಂಡ ನಂತರವೇ ಪೋಟ ನಿಯಮಗಳ ತಿದ್ದುಪಡಿಯನ್ನು ನೋಂದಾಯಿಸಿಕೊಳ್ಳಬೇಕು. ನೋಂದಣಿಯಾದ ತಿದ್ದುಪಡಿಯೂ ಕಾಯಿದೇಶೀರ ತಿದ್ದುಪಡಿಯಾಗುವುದು. ನೋಂದಣಿಯಾದ ಬಗ್ಗೆ ಕೊಟ್ಟ ಸರ್ಟಿಫಿಕೇಟು, ಆ ಬಗ್ಗೆ ಅದರ ಕಾಯಿದೆ ಬದ್ಧತೆಯ ಬಗ್ಗೆ ನಿರ್ಣಾಯಕ ಪುರಾವೆ ಆಗುವುದು.

ತಿದ್ದುಪಡಿ ನೋಂದಣಿ ಆಗಿ, ಅದರ ಬಗ್ಗೆ ಸರ್ಟಿಫಿಕೇಟು, ಮತ್ತು ತಿದ್ದುಪಡಿಯಾದ ಪೋಟನಿಯಮದ ನಕಲು ರಜಿಸ್ಟ್ರಾರನಿಂದ ಆ ಸಂಘಕ್ಕೆ ಕಳಿಸಲ್ಪಡಬೇಕು. ಹೀಗೆ ಸರ್ಟಿಫಿಕೇಟ ಸಹಿತ ನಕಲು ಬಂದರೆ, ತಿದ್ದುಪಡಿಯ ನೋಂದಣಿಯು ಕಾಯಿದೆಬದ್ಧವಾಗಿದೆಯೆಂಬುದರ ಪುರಾವೆ ಆದಂತೆ.

ರಜಿಸ್ಟ್ರಾರನು ತಿದ್ದುಪಡಿಯ ನೋಂದಣಿ ಮಾಡಿಕೊಳ್ಳಲು ನಿರಾಕರಿಸಿದರೆ, ನಿರಾಕರಣೆಯ ಕಾರಣಗಳನ್ನು ತೋರಿಸುವ ನಿರಾಕರಣೆಯ ಹುಕುಮನ್ನು ಸಂಬಂಧಪಟ್ಟ ಸಂಘಕ್ಕೆ ಕಳಿಸಿಕೊಡಬೇಕು. ಅಂದರೆ ನಿರಾಕರಿಸುವ ಪ್ರಸಂಗ ಬಂದಾಗ ಮಾಡಬೇಕಾದ ಹುಕುಮನ್ನು ರಜಿಸ್ಟ್ರಾರನು ಕಾರಣ ತೋರಿಸಿ ಮಾಡಬೇಕು. ಆ ಕಾರಣಗಳ ಕಲಮು ೭ ಮತ್ತು ೧೨ ರಲ್ಲಿ ಹೇಳಿದ ಮಾತುಗಳ ಬಗ್ಗೆ ಇರಬೇಕಾಗುವುದು. ಅಲ್ಲಿ ಹೇಳಿದ ಮಾತುಗಳ ಅನುಸಾರವಾಗಿ ತಿದ್ದುಪಡಿಯು ಇದ್ದರೆ ಅವನಿಗೆ ನಿರಾಕರಿಸಲು ಸಾಮಾನ್ಯವಾಗಿ ಬರುವುದಿಲ್ಲ ಎಂದು ಹೇಳಿದ ಹಾಗೆ. ಇಷ್ಟಾಗಿಯೂ ನಿರಾಕರಿಸಿದರೆ ಬೇರೆ ಕಾರಣಗಳಿರಬೇಕಾಗುವುದು; ಅವು ಯಾವು ಎಂಬುದನ್ನು ತಿಳಿದುಕೊಳ್ಳುವ ಹಕ್ಕು ಸಂಬಂಧಪಟ್ಟ ಸಂಘಕ್ಕೆ ಇದೆ ಎಂದು ಇದರಿಂದ ಸ್ಪಷ್ಟವಾಗುವುದು.

## ೧೩. ಪೋಟನಿಯಮಗಳ ತಿದ್ದುಪಡಿಗಳು ಎಂದು ಜಾರಿಯಲ್ಲಿ ಬರುವುವು

ಕಲಮು ೧೦೬ ರನ್ವಯವಾಗಿರುವ ಯಾವುದೇ ಅಪೆಲೆಟ ಹುಕುಮಿನ ಅಂಕಿತವಾಗಿ, ಸಹಕಾರಿ ಸಂಘದ ಪೋಟನಿಯಮಗಳ ತಿದ್ದುಪಡಿಯು, ಯಾವುದೊಂದು ನಿರ್ದಿಷ್ಟ ದಿವಸದಿಂದ ಕಾರ್ಯಾಚರಣೆಯಲ್ಲಿ ಬರಬೇಕೆಂದು ಪ್ರಕಟವಾಗಿ ಹೇಳಿದ ಹೊರತು, ನೋಂದಣಿಯಾದ ದಿವಸದಿಂದ ಜಾರಿಯಲ್ಲಿ ಬರತಕ್ಕದ್ದು.

**ವಿವೇಚನೆ**

ತಿದ್ದುಪಡಿಯ ಕ್ರಮವಿಧಾನವಿದ್ದಾಗ ತಿದ್ದುಪಡಿ ಎಂದಿನಿಂದ ಜಾರಿಯಲ್ಲಿ ಬರುವುದು ಎಂಬ ಬಗ್ಗೆ ಪ್ರಶ್ನೆ ಸಹಜವಾಗಿ ಏಳುವುದು. ಸೂಚನೆ ಕಳಿಸಿದ ದಿನದಿಂದಲೋ, ಠರಾವು ಸ್ವೀಕೃತವಾದ ದಿನದಿಂದಲೋ, ನೋಂದಣಿಯಾದ ದಿನದಿಂದಲೊ? ಈ ಕಲಮು ಇರದಿದ್ದರೆ ಈ ಪ್ರಶ್ನೆಗೆ ಉತ್ತರ ಹೇಳುವುದು ಕಠಿಣವಾಗುತ್ತಿತ್ತು. ಮತ್ತು ಕಾಲಕಾಲಕ್ಕೆ ತೊಡಕು ಉಂಟಾಗುತ್ತಿತ್ತು. ಆದರಿಂದ ಸ್ಪಷ್ಟವಾಗಿ ಇಲ್ಲಿ ಹೇಳಲಾಗಿದೆ. ಇಲ್ಲಿ ಮೂರು ಮಾತುಗಳು ಇವೆ. ಒಂದು ತಿದ್ದುಪಡಿಯ ನೋಂದಣಿಯ ನಿರ್ಣಯದ ಬಗ್ಗೆ ಅಪೀಲು ಮಾಡಿಕೊಳ್ಳಲು ಅವಕಾಶವಿದೆ; ಅದನ್ನು ಕಲಮು ೧೦೬ ಅವಕಾಶ ಮಾಡಿಕೊಟ್ಟಿದೆ. ಈ ಅವಕಾಶದಿಂದ ಅಪೀಲಾಗಿ, ಅದರಲ್ಲಿ ನಿರ್ಣಯ ಬಂದರೆ, ಆ ನಿರ್ಣಯದ ಅಂಕಿತವಾಗಿ ಕಾರ್ಯ ನಡೆಯಬೇಕಾದುದು ಮೊದಲನೆಯ ಕೆಲಸ. ಅದರಲ್ಲಿ ಹೇಳಿದಂತೆ ಜಾರಿಯಲ್ಲಿ ಬರುವುದು. ಎರಡನೆಯದು ಯಾವುದೊಂದು ನಿರ್ದಿಷ್ಟ ತನದಿಂದ ತಿದ್ದುಪಡಿಯು ಕಾರ್ಯಾಚರಣೆಯಲ್ಲಿ ಬರತಕ್ಕದ್ದೆಂದು ನೋಂದಣಿ ಕಾಲಕ್ಕೆ ಹೇಳಲಾಗಿದ್ದರೆ, ಆ ದಿನದಿಂದ ಅದು ಜಾರಿಯಲ್ಲಿ ಬರುವುದು. ಈ ಮೇಲಿನ ಎರಡೂ ಪ್ರಸಂಗಗಳು ಇರದಿದ್ದರೆ, ತಿದ್ದುಪಡಿಯು ಎಂದು ನೋಂದಣಿ ಆಗುವುದೋ

ಆ ದಿನದಿಂದ ಅದು ಜಾರಿಯಲ್ಲಿ ಬರತಕ್ಕದ್ದು ಎಂದು ತಿಳಿಯಬೇಕು. ಹಾಗೆ ಸ್ಪಷ್ಟವಾಗಿ ಹೇಳಿದ್ದರಿಂದ ಸಂಶಯಕ್ಕೆ ಆಸ್ಪದವೇ ಉಳಿಯುವುದಿಲ್ಲ.

## ೧೪. ಸಹಕಾರಿ ಸಂಘಗಳ ಜೋಡಣೆ, ವಿಭಾಗೀಕರಣ ಮತ್ತು ಆಸ್ತಿ ಋಣಗಳ ಹಸ್ತಾಂತರ

(೧) ಸಂಘದ ಸಾಮಾನ್ಯ ಸಭೆಯಲ್ಲಿ ಹಾಜರಿದ್ದ ಮತ್ತು ಮತದಾನ ಮಾಡಿದ ಸದಸ್ಯರ ಎರಡು ಮೂರಾಂಶದಷ್ಟು ಬಹುಮತದಿಂದ ಪಾಸುಮಾಡಿದ ಠರಾವಿನಿಂದ ಸಹಕಾರಿ ಸಂಘವು—

(ಅ) ಎರಡು ಇಲ್ಲವೆ ಹೆಚ್ಚು ಸಹಕಾರಿ ಸಂಘಗಳಾಗಿ ತಾನು ವಿಭಾಗಿಸಿಕೊಳ್ಳಬಹುದು; ಇಲ್ಲವೆ,

(ಬ) ಬೇರೆ ಯಾವುದೇ ಸಹಕಾರಿ ಸಂಘಕ್ಕೆ ಯಾವುದು ಅಂತಹ ಠರಾವಿನಿಂದ ಇಂತಹ ಹಸ್ತಾಂತರಕ್ಕೆ ಒಪ್ಪಿರುವುದೋ ಅಂತಹ ಸಂಘಕ್ಕೆ ಪೂರ್ತಿಯಾಗಿ ಇಲ್ಲವೆ ಸ್ವಲ್ಪಭಾಗ ತನ್ನ ಆಸ್ತಿ ಮತ್ತು ಹೊಣೆಗಾರಿಕೆಗಳನ್ನು ಹಸ್ತಾಂತರಿಸಬಹುದು.

(೨) ಯಾವುದೇ ಎರಡು ಇಲ್ಲವೆ ಹೆಚ್ಚು ಸಹಕಾರಿ ಸಂಘಗಳು ತಮ್ಮ ಸಂಘಗಳ ಒಂದೊಂದರ ಸಾಮಾನ್ಯ ಸಭೆಯಲ್ಲಿ ಹಾಜರಿದ್ದ ಮತ್ತು ಮತದಾನ ಮಾಡಿದ ಸದಸ್ಯರ ಎರಡು ಮೂರಾಂಶದಷ್ಟು ಬಹುಮತದಿಂದ ಪಾಸುಮಾಡಿದ ಠರಾವಿನಿಂದ ಒಂದಕ್ಕೊಂದು ಜೋಡಣೆ ಮಾಡಿಕೊಂಡು ಹೊಸದೊಂದು ಸಹಕಾರಿ ಸಂಘವನ್ನು ರೂಪಿಸಿಕೊಳ್ಳಬಹುದು.

(೩) ಉಪಕಲಮು (೧) ಇಲ್ಲವೆ ಉಪಕಲಮು (೨) ರನ್ವಯವಾಗಿ ಮಾಡಲಾದ ಸಹಕಾರಿ ಸಂಘದ ಠರಾವು, ಸಂದರ್ಭಾನುಸಾರವಾಗಿ, ಹಸ್ತಾಂತರದ, ವಿಭಾಗಮಾಡಿದ, ಇಲ್ಲವೆ ಜೋಡಣೆ ಮಾಡಿದ ಬಗ್ಗೆ ಎಲ್ಲ ವಿವರಗಳುಳ್ಳದ್ದಾಗಿರತಕ್ಕದ್ದು ಮತ್ತು ರಜಿಸ್ಟ್ರಾರನಿಂದ ಒಪ್ಪಿಗೆ ಪಡೆದ ಹೊರತು ಇಂತಹ ಯಾವ ಠರಾವು ಯಾವುದೇ ಪರಿಣಾಮ ಉಂಟುಮಾಡತಕ್ಕದ್ದಲ್ಲ.

(೪) ಇಂತಹ ಯಾವುದೇ ಠರಾವನ್ನು ಸಹಕಾರಿ ಸಂಘವು ಪಾಸುಮಾಡಿದಾಗ ಮತ್ತು ರಜಿಸ್ಟ್ರಾರನಿಂದ ಅದು ಒಪ್ಪಿತವಾದಾಗ ಆ ಸಹಕಾರಿ ಸಂಘವು ಆ ಠರಾವಿನ ಬಗ್ಗೆ ಎಲ್ಲ ಧನಕೋಗಳಿಗೆ ಮತ್ತು ಆ ಠರಾವಿಗೆ ಅನುಕೂಲ ಮತಹಾಕಿರದೆ ಇರುವ ಸದಸ್ಯರಿಗೆ ಲಿಖಿತ ನೋಟೀಸನ್ನು ಕೊಡತಕ್ಕದ್ದು, ಮತ್ತು ಯಾವುದೇ ಪೋಟ ನಿಯಮುಗಳಲ್ಲಿ ಇಲ್ಲವೆ ಕರಾರುಪತ್ರದಲ್ಲಿ ಏನೇ ಹೇಳಲಾಗಿದ್ದರೂ ಯಾರಿಗೆ ಇಂತಹ ನೋಟೀಸು ಕೊಡಲ್ಪಟ್ಟಿರುವುದೋ ಅಂತಹ ಯಾವುದೇ ಧನಕೋ ಇಲ್ಲವೆ ಯಾವುದೇ ಸದಸ್ಯನು ಅವನ ಮೇಲೆ ನೋಟೀಸು ಜಾರಿ ಆದ ಒಂದು ತಿಂಗಳ

ಕಾಲಾವಧಿಯಲ್ಲಿ ಸಂದರ್ಭಾನುಸಾರವಾಗಿ ತನ್ನ ಶೇರುಗಳನ್ನು, ಠೇವುಗಳನ್ನು ಇಲ್ಲವೆ ಸಾಲಗಳನ್ನು ಹಿಂತೆಗೆದುಕೊಳ್ಳಲು ಅವಕಾಶ ಇರತಕ್ಕದ್ದು.

(೫) ಉಪಕಲಮು (೪) ರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಯಾವುದೇ ಸದಸ್ಯನು ಇಲ್ಲವೆ ಧನಕೋನು, ತನಗೆ ಕೊಟ್ಟ ಅವಕಾಶದ ಉಪಯೋಗಮಾಡಿ ಹಿಂತೆಗೆದುಕೊಳ್ಳದಿದ್ದರೆ, ಮತ್ತು ಠರಾವಿಗೆ ಅನುಕೂಲ ಮತದಾನ ಮಾಡಿದ ಪ್ರತಿಯೊಬ್ಬ ಸದಸ್ಯನು ಆ ಠರಾವಿನಲ್ಲಿರುವ ಸೂಚನೆಗಳಿಗೆ ಒಪ್ಪಿಕೊಂಡಿದ್ದಾನೆಂದು ಗಣಿಸತಕ್ಕದ್ದು.

(೬) ಈ ಕಲಮಿನನ್ವಯವಾಗಿ ಸಹಕಾರಿ ಸಂಘದಿಂದ ಪಾಸುಮಾಡಿದ ಠರಾವು—

(ಅ) ಎಲ್ಲ ಸದಸ್ಯರ ಮತ್ತು ಧನಕೋಗಳ ಸಮ್ಮತಿಯು ಪಡೆಯಲ್ಪಟ್ಟ ಇಲ್ಲವೆ ಪಡೆಯಲ್ಪಟ್ಟದೆಯೆಂದು ಗಣಿಸಲ್ಪಟ್ಟಹೊರತು; ಇಲ್ಲವೆ

(ಬ) ಉಪಕಲಮು (೪) ರಲ್ಲಿ ಹೇಳಿದ ಆಯ್ಕೆಮಾಡಿಕೊಂಡ ಸದಸ್ಯರ ಮತ್ತು ಧನಕೋಗಳ ಎಲ್ಲ ಮಾಗಣಿಗಳು ಆದರಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿಯಲ್ಲಿ ಪೂರ್ತಿಯಾಗಿ ಪೂರೈಸಲ್ಪಟ್ಟ ಹೊರತು,

ಪರಿಣಾಮಕಾರಿಯಾಗತಕ್ಕದ್ದಲ್ಲ.

(೭) ಈ ಕಲಮಿನನ್ವಯವಾಗಿ ಸಹಕಾರಿ ಸಂಘದಿಂದ ಪಾಸುಮಾಡಲ್ಪಟ್ಟ ಠರಾವಿನಲ್ಲಿ ಯಾವುದೇ ಆಸ್ತಿ ಹಾಗೂ ಹೊಣೆಗಾರಿಕೆಗಳ ಹಸ್ತಾಂತರವು ಒಳಗೊಂಡಿರುವಾಗ, ಆ ಕಾಲದಲ್ಲಿ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಮತ್ತೆ ಯಾವುದೇ ಬೇರೆ ಆಶ್ವಾಸನವಿಲ್ಲದೆ ಆ ಆಸ್ತಿ ಹಾಗೂ ಹೊಣೆಗಾರಿಕೆಗಳು ಪಡೆದವನ ಅಂತರ್ಗತವಾಗಲು ಆ ಠರಾವು ಪೂರ್ಣ ಹಸ್ತಾಂತರವೆಂದು ಆಗತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ತನ್ನ ಸ್ಥಿತಿಯಲ್ಲಿ ಅಂತರಮಾಡಿಕೊಳ್ಳಬೇಕೆಂದು ಬಯಸಿದರೆ ಈ ಕಲಮು ಸಹಾಯಕಾರಿಯಾಗುವುದು. ಒಂದು ಸಂಘ ಇದ್ದದ್ದು ಹೋಗಿ ಎರಡು ಇಲ್ಲವೆ ಹೆಚ್ಚು ಸಂಘಗಳುಂಟಾಗಬಹುದು; ಎರಡು ಇಲ್ಲವೆ ಹೆಚ್ಚು ಸಂಘಗಳು ಕರಗಿ ಒಂದೇ ಆಗುವುದು; ಒಂದರ ಆಸ್ತಿ ಹಾಗೂ ಹೊಣೆಗಾರಿಕೆಗಳು ಇನ್ನೊಂದಕ್ಕೆ ಹಸ್ತಾಂತರಿಸುವುದು; ಈ ಎಲ್ಲ ಸ್ಥಿತ್ಯಂತರಗಳನ್ನು ಮಾಡಲಿಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟು ಅದರ ವಿಧಾನವನ್ನು ಈ ಕಲಮು ಹೇಳುತ್ತದೆ.

ಈ ಯಾವುದೇ ಸ್ಥಿತ್ಯಂತರಕ್ಕೂ ಒಂದೊಂದು ಠರಾವು ಬೇಕು. ಸಂಬಂಧಪಟ್ಟ ಎಲ್ಲ ಸಂಘಗಳ ಸಾಮಾನ್ಯ ಸಭೆಯಲ್ಲಿ ಈ ಠರಾವು ಪಾಸಾಬೇಕು.

ಆ ಸಭೆಯಲ್ಲಿ ಹಾಜರಿದ್ದು ಮತದಾನ ಮಾಡಿದ ಸದಸ್ಯರ ಎರಡು ಮೂರಾಂಶದಷ್ಟು ಬಹುಮತ ಆ ಠರಾವಿಗೆ ಇರಬೇಕು. ಅಂದಾಗ ಆ ಠರಾವಿನಲ್ಲಿ ಕಾಣಿಸಿದಂತೆ ಸ್ಥಿತ್ಯಂತರಗಳು ಆಗಲು ಅಡ್ಡಿಯಿಲ್ಲವೆಂದ ಹಾಗಾಯಿತು. ಇದು ಮೊದಲನೆಯ ಹೆಜ್ಜೆ. ಇಂತಹ ಠರಾವು ರಜಿಸ್ಟ್ರಾರನಿಂದ ಒಪ್ಪಿತವಾಗಬೇಕಾದುದು ಎರಡನೆಯ ಹೆಜ್ಜೆ. ಅವನಿಂದ ಒಪ್ಪಿತವಾಗದಿದ್ದರೆ, ಮುಂದಿನ ಹೆಜ್ಜೆಯೇ ಇಲ್ಲ. ಒಪ್ಪಿತವಾದರೆ ಮುಂದಿನ ವಿಧಾನ. ಸ್ವೀಕೃತವಾದ ಹಾಗೂ ಒಪ್ಪಿತವಾದ ಠರಾವಿನ ಬಗ್ಗೆ ಸಂಬಂಧಪಟ್ಟವರಿಗೆ ಲಿಖಿತ ನೋಟೀಸು ಕೊಡಬೇಕಾದುದು ಮೂರನೆಯ ಹೆಜ್ಜೆ. ಸಂಬಂಧಪಟ್ಟವರು ಯಾರು? ಅನುಕೂಲ ಮತಕೊಡದ ಸದಸ್ಯರು ಹಾಗೂ ಧನಕೋಜನರು; ಅವರಿಗೆ ಠರಾವಿನ ಬಗ್ಗೆ ಒಂದು ಲಖಿತ ನೋಟೀಸು ಕೊಟ್ಟು, ನೋಟೀಸು ಮುಟ್ಟಿದ ಒಂದು ತಿಂಗಳೊಳಗೆ ಅವರು ಸದಸ್ಯರಾಗಿ ಇಲ್ಲವೆ ಧನಕೋ ಆಗಿ ಮೊದಲು ಇದ್ದಂತೆ ಮುಂದುವರೆಯಲು ನಿರ್ಣಯಿಸಬಹುದು ಇಲ್ಲವೆ ತಮ್ಮ ಶೇರು, ಠೇವು ಇಲ್ಲವೆ ಸಾಲಗಳನ್ನು ಹಿಂತೆಗೆದುಕೊಳ್ಳಬಹುದು. ಹೀಗೆ ನೋಟೀಸು ಮುಟ್ಟಿದ ತಿಂಗಳ ಅವಧಿಯ ನಂತರ ತಕರಾರು ಮಾಡಲಿಕ್ಕೆ ಬರುವದಿಲ್ಲವೆಂದು ಸೂಚಿಸಿದಂತೆ.

ಹಿಂತೆಗೆದುಕೊಳ್ಳಬೇಕೆಂದು ನಿರ್ಣಯ ಮಾಡಿದ್ದರೆ ಆ ಸದಸ್ಯರ ಮತ್ತು ಧನಕೋಗಳ ಶೇರುಗಳು, ಠೇವುಗಳು, ಮತ್ತು ಸಾಲಗಳು ಪೂರ್ತಿಯಾಗಿ ಮುಟ್ಟಿದ ಹೊರತು ಠರಾವು ಪರಿಣಾಮಕಾರಿಯಾಗದು. ಅಂದರೆ ಠರಾವಿಗೆ ಸದಸ್ಯರ ಮತ್ತು ಧನಕೋಗಳ ಒಪ್ಪಿಗೆಯಾದರೂ ಬೇಕು. ಇಲ್ಲವೆ ಅವರ ಶೇರು, ಠೇವು, ಸಾಲ ಕೊಟ್ಟು ಅವರ ಸಂಬಂಧವಾದರೂ ಸಂಘವು ಕಡಿದುಕೊಂಡಿರಬೇಕು. ಅಂದರೇನೇ ಠರಾವು ಪರಿಣಾಮಕಾರಿಯಾಗುವುದು. ಸಹಕಾರದಲ್ಲಿ ವಿಷಮ ವಾತಾವರಣಕ್ಕೆ ಆಸ್ಪದವಿಲ್ಲ. ಹೊಂದಿಕೆ ಆದವರು ಉಳಿಯಬೇಕು. ಹೊಂದಿಕೆ ಆಗದವರು ಹೊರಬೀಳಬೇಕು. ಹೊಂದಿಕೆ ಆಗದವರ ಮೇಲೆ ಒತ್ತಾಯದಿಂದ ಯಾವುದನ್ನು ಹೇರಲು ಬರುವುದಿಲ್ಲ. ಏಕೆಂದರೆ ಅದು ಸಹಕಾರದ ತತ್ವಕ್ಕೆ ವಿರೋಧವಾಗುವುದು. ಸ್ವಯಂಸ್ಫೂರ್ತಿಯಿಂದ ಕಾರ್ಯಕ್ಕೆ ಕೈ ಹಚ್ಚುವವರು ಸಹಕಾರಿ ಸಂಘದ ಸದಸ್ಯರು ಆಗಲು ಬರುತ್ತದೆ.

ಆಸ್ತಿ-ಹೊಣೆಗಾರಿಕೆಗಳ ಹಸ್ತಾಂತರದ ಬಗ್ಗೆ ಠರಾವು ಇದ್ದರೆ, ಅದು ಆಸ್ತಿ-ಹೊಣೆಗಾರಿಕೆಗಳನ್ನು ಹಸ್ತಾಂತರಿಸಲು ಸಾಕಷ್ಟು ಆಧಾರವಾದಂತೆ. ಬೇರೆ ಕಾಯಿದೆಯಲ್ಲಿ ಏನೇ ಹೇಳಿದರೂ ಆಸ್ತಿ-ಹೊಣೆಗಾರಿಕೆಗಳ ಹಸ್ತಾಂತರವು ಈ ಠರಾವಿನ ಮೂಲಕವಾಗಿ ಕೊಟ್ಟವನಿಂದ ಪಡೆದವನಿಗೆ ಹಕ್ಕು ಹೊಣೆಗಾರಿಕೆಗಳ ಹಸ್ತಾಂತರ ಆದಂತೆ. ಅದಕ್ಕೆ ಬೇರೆ ಪ್ರತ್ಯೇಕ ಆಧಾರ ಬೇಕಿಲ್ಲ.

## ೧೫. ಕೆಲ ಸಂದರ್ಭಗಳಲ್ಲಿ ಸಹಕಾರಿ ಸಂಘಗಳ ನೋಂದಣಿ ಸರ್ಟಿಫಿಕೇಟುಗಳ ರದ್ದತಿ

(೧) ಕಲಮು ೧೪ ರ ಶರತುಗಳ ಅನುಸಾರವಾಗಿ ಒಂದು ಸಹಕಾರಿ ಸಂಘದ ಇಡಿ ಆಸ್ತಿ ಹಾಗೂ ಹೊಣೆಗಾರಿಕೆಗಳು ಇನ್ನೊಂದು ಸಹಕಾರಿ ಸಂಘಕ್ಕೆ ಹಸ್ತಾಂತರಿಸಿದಾಗ ಮೊದಲಿನ ಸಹಕಾರಿ ಸಂಘದ ನೋಂದಣಿಯು ರದ್ದತಿಯಾಗ ತಕ್ಕದ್ದು ಮತ್ತು ಆ ಸಂಘವು ಮುರಗಡೆ ಮಾಡಲ್ಪಟ್ಟದ್ದೆಂದು ಗಣಿಸತಕ್ಕದ್ದು ಮತ್ತು ಅದು ಸಂಶ್ಲೀಕೃತ ಸಂಸ್ಥೆಯಾಗಿ ಅಸ್ತಿತ್ವದಲ್ಲಿ ಉಳಿಯತಕ್ಕದ್ದಲ್ಲ.

(೨) ಕಲಮು ೧೪ ರ ಶರತುಗಳ ಅನುಸಾರವಾಗಿ ಎರಡು ಇಲ್ಲವೆ ಹೆಚ್ಚು ಸಹಕಾರಿ ಸಂಘಗಳು ಜೋಡಣೆ ಮಾಡಲ್ಪಟ್ಟಾಗ ಹೊಸ ಸಂಘದ ನೋಂದಣಿ ಯಾದಾಗ ಜೋಡಣಿ ಮಾಡಿಕೊಂಡ ಪ್ರತಿಯೊಂದು ಸಂಘದ ನೋಂದಣಿಯು ರದ್ದತಿಯಾಗತಕ್ಕದ್ದು ಮತ್ತು ಇಂತಹ ಒಂದೊಂದು ಸಂಘವೂ ಮುರಗಡೆ ಮಾಡ ಲ್ಪಟ್ಟಿದೆಯೆಂದು ಗಣಿಸತಕ್ಕದ್ದು ಮತ್ತು ಅದು ಸಂಶ್ಲೀಕೃತ ಸಂಸ್ಥೆಯಾಗಿ ಅಸ್ತಿತ್ವ ದಲ್ಲಿ ಉಳಿಯತಕ್ಕದ್ದಲ್ಲ.

(೩) ಕಲಮು ೧೪ ರ ಶರತುಗಳ ಅನುಸಾರವಾಗಿ ಒಂದು ಸಹಕಾರಿ ಸಂಘವು ಎರಡು ಇಲ್ಲವೆ ಹೆಚ್ಚು ಸಹಕಾರಿ ಸಂಘಗಳಾಗಿ ವಿಭಾಗವಾದಾಗ ರದ್ದತಿ ಯಾಗತಕ್ಕದ್ದು. ಹೊಸ ಸಂಘಗಳ ನೋಂದಣಿಯಾದ ಕೂಡಲೆ ಆ ಸಂಘದ ನೋಂದಣಿಯು ಮತ್ತು ಆ ಸಂಘವು ಮುರಗಡೆ ಮಾಡಲ್ಪಟ್ಟಿದೆಯೆಂದು ಗಣಿಸ ತಕ್ಕದ್ದು ಮತ್ತು ಅದು ಸಂಶ್ಲೀಕೃತ ಸಂಸ್ಥೆಯಾಗಿ ಅಸ್ತಿತ್ವದಲ್ಲಿ ಉಳಿಯತಕ್ಕದ್ದಲ್ಲ.

**ವಿವೇಚನೆ**

ಒಂದು ಸಂಘವು ಅಸ್ತಿತ್ವ ಕಳೆದುಕೊಂಡು ಬೇರೆ ಸಂಘವು ಇಲ್ಲವೆ ಸಂಘಗಳು ಅಸ್ತಿತ್ವದಲ್ಲಿ ಬರಲು ಮೂರು ಪ್ರಸಂಗಗಳು ಇವೆ. ಒಂದು, ತನ್ನ ಎಲ್ಲ ಆಸ್ತಿ ಹಾಗೂ ಹೊಣೆಗಾರಿಕೆಗಳನ್ನು ಬೇರೊಂದು ಸಂಘಕ್ಕೆ ಹಸ್ತಾಂತರಿಸಿದಾಗ ಮೂಲ ಸಂಘವು ಅಸ್ತಿತ್ವದಲ್ಲಿ ಉಳಿಯಲಿಕ್ಕೆ ಆಸ್ಪದವೇ ಉಳಿವುದಿಲ್ಲ. ಆದ್ದರಿಂದ ಹಾಗೆ ಹಸ್ತಾಂತರವಾದಾಗ ಹಸ್ತಾಂತರ ಮಾಡಿದ ಸಂಘದ ನೋಂದಣಿಯು ರದ್ದತಿಯಾಗ ತಕ್ಕದ್ದು, ಅದು ಮುರಗಡೆ ಮಾಡಲ್ಪಟ್ಟಿದೆಯೆಂದು ತಿಳಿಯತಕ್ಕದ್ದು, ಅದು ತನ್ನ ಸಂಶ್ಲೀಕೃತ ಸಂಸ್ಥೆಯ ಅಸ್ತಿತ್ವವನ್ನು ಕಳೆದುಕೊಳ್ಳತಕ್ಕದ್ದು.

ಅದರಂತೆ, ಒಂದು ಸಂಘವು ವಿಭಾಗವಾದಾಗ ಇಲ್ಲವೆ ಎರಡು ಇಲ್ಲವೆ ಹೆಚ್ಚು ಸಂಘಗಳು ಜೋಡಣೆ ಆದಾಗ ಕೂಡ ಇದೇ ಪರಿಣಾಮವುಂಟಾಗುವುದು. ಒಂದು ಸಂಘವು ವಿಭಾಗವಾದಾಗ ವಿಭಾಗವಾದ ಹೊಸ ಸಂಘಗಳು ನೋಂದಣಿಯಾಗು ವುದು. ಯಾವ ಸಂಘವು ಹೀಗೆ ವಿಭಾಗವಾಗಿರುವುದೋ ಅದು ಅಸ್ತಿತ್ವ ಕಳೆದು

ಕೊಂಡ ಸಂಘವಾಗುವುದು; ಎರಡು ಇಲ್ಲದೆ ಹೆಚ್ಚು ಸಂಘಗಳು ಕೂಡಿಕೊಂಡು ಹೊಸದೊಂದು ಸಂಘವಾದಾಗ ಮೂಲದ ಸಂಘಗಳು ಅಸ್ತಿತ್ವವನ್ನು ಕಳೆದುಕೊಂಡ ಸಂಘಗಳಾಗುವುವು. ಹೀಗೆ ಅಸ್ತಿತ್ವ ಕಳೆದುಕೊಂಡ ಸಂಘಗಳ ನೋಂದಣಿ ರದ್ದತಿಯಾಗತಕ್ಕದ್ದು ಮತ್ತು ಆ ಸಂಘವು ಮುರಗಡೆ ಮಾಡಲ್ಪಟ್ಟಿದೆಂದು ಗಣಿಸತಕ್ಕದ್ದು ಮತ್ತು ಸಂಸ್ಥೆಯಾಗಿ ಆ ಸಂಘವು ತನ್ನ ಅಸ್ತಿತ್ವವನ್ನು ಕಳೆದುಕೊಳ್ಳತಕ್ಕದ್ದು.

ಈ ಪರಿಣಾಮ ಎಂದು ಆಗುವುದು? ಇದು ಮುಖ್ಯವಾದ ಮಾತಾಗಿದೆ. ಒಂದು ಸಂಘ ಕರಗಿ ಇನ್ನೊಂದು ಉದಯವಾಗುವುದು. ಈ ಸ್ಥಿತ್ಯಂತರದಿಂದ ಯಾವುದೇ ಸಂಘದ ನಿರಂತರತ್ವಕ್ಕೆ ಬಾಧೆ ಬರಲಾರದು ಎಂಬುದನ್ನು ಗಮನಿಸಲಾಗಿದೆ ಆದ್ದರಿಂದ ಹೊಸ ಸಂಘದ ಉದಯವಾಗುವ ತನಕ, ಅದು ಹಳೆಯ ಸಂಸ್ಥೆಯ ವಾರಸಾ ಪಡೆಯುವ ತನಕ ಹಳೆಯ ಸಂಘವು ಅಸ್ತಿತ್ವ ಕಳೆದುಕೊಂಡಿರುವುದಿಲ್ಲ. ಹೊಸ ಸಂಘದ ನೋಂದಣಿಯಾಗುವ ತನಕ ಹಳೆಯ ಸಂಸ್ಥೆಯ ನೋಂದಣಿ ರದ್ದಾಗುವುದಿಲ್ಲ; ಅದು ಮುರಗಡೆ ಮಾಡಲ್ಪಟ್ಟಿತೆಂದು ಗಣಿಸಲಾಗುವುದಿಲ್ಲ. ಹಾಗೂ ಅದು ಅಸ್ತಿತ್ತ ಕಳೆದುಕೊಳ್ಳುವುದಿಲ್ಲ. ಈ ಮಾತನ್ನು ಸರಿಯಾಗಿ ತಿಳಿದುಕೊಳ್ಳಬೇಕು ಮತ್ತೊಂದು ಅಧಿಕಾರ ಪಡೆವ ತನಕ ಮೂಲ ಸಂಘವು ಅಧಿಕಾರ ಇಟ್ಟುಕೊಂಡಿರುತ್ತದೆ. ಎರಡು ಸಂಸ್ಥೆಗಳ ನಡುವೆ-ಅಂತರ-ಉಳಿಯದು. ಅಂತರವಿಲ್ಲದೆ ಮುಂದುವರೆವುದೆಂದ ಕಾರಣಕ್ಕೆ ಅದಕ್ಕೆ ನಿರಂತರ ವಾರಸಾವುಳ್ಳ ಸಂಸ್ಥೆ ಎಂದು ಹೆಸರು. ವಿಭಾಗವಾಗಲೀ, ಜೋಡಣೆಯಾಗಲೀ, ಆಸ್ತಿ ಹೊಣೆಗಾರಿಕೆ ಹಸ್ತಾಂತರವಾಗಲೀ ಒಂದು ಸಂಘದಿಂದ ಮತ್ತೊಂದಕ್ಕೆ ಅಧಿಕಾರ ಹಸ್ತಾಂತರವಾದಂತೆ. ಒಂದು ಕೊಡುವುದು; ಇನ್ನೊಂದು ಸ್ವೀಕರಿಸುವುದು ಸ್ವೀಕರಿಸಲು ಆ ಸಂಸ್ಥೆಯು ಸಿದ್ಧವಾಗುವ ತನಕ ಅಂದರೆ ಅದರ ನೋಂದಣಿ ಆಗುವ ತನಕ ಅಧಿಕಾರ ಕೊಡಲು ಸಿದ್ಧವಾದ ಸಂಘವು ಜೀವಂತವಾಗಿಯೇ ಇರುವುದು. ಸ್ವೀಕಾರ ಕಾರ್ಯ ಮುಗಿದ ನಂತರ ಅದು ಜೀವಂತವಾಗಿ ಉಳಿಯಲು ಕಾರಣ ಉಳಿವುದಿಲ್ಲ. ಆಗ ಅದರ ನೋಂದಣಿ ರದ್ದಾಗುವುದು ಸಂಘ ಮುರಗಡೆಯಾಗುವುದು; ಸಂಸ್ಥೆ ಅಸ್ತಿತ್ವ ಕಳೆದುಕೊಳ್ಳುವುದು.

## ಪ್ರಕರಣ : ೩ ಸಹಕಾರಿ ಸಂಘಗಳ ಸದಸ್ಯರು ಮತ್ತು ಅವರ ಹಕ್ಕುಗಳು ಹಾಗೂ ಹೊಣೆಗಾರಿಕೆಗಳು

### ೧೬. ಸದಸ್ಯರಾಗಬಹುದಾದ ವ್ಯಕ್ತಿಗಳು

(೧) ಈ ಕೆಳಗೆ ಕಾಣಿಸಿದವರನ್ನು ಹೊರತುಪಡಿಸಿ ಸಹಕಾರಿ ಸಂಘದ ಸದಸ್ಯನೆಂದು ಯಾವ ವ್ಯಕ್ತಿಗೂ ಪ್ರವೇಶ ಕೊಡತಕ್ಕದ್ದಲ್ಲ, ಅವರು ಯಾರೆಂದರೆ—

(ಅ) ೧೮೭೨ (ಕೇಂದ್ರ ಕಾಯಿದೆ ನಂ. ix — ೧೮೭೨) ರ ಇಂಡಿಯನ್ ಕಾಂಟ್ರಾಕ್ಟ ಆ್ಯಕ್ಟದ ಕಲಮು ೧೧ ರನ್ವಯವಾಗಿ ಕರಾರುಪತ್ರ ಮಾಡಿಕೊಳ್ಳಲು ಸಮರ್ಥನಾದ ವ್ಯಕ್ತಿಯು;

(ಬ) ಬೇರೆ ಯಾವುದೇ ಸಹಕಾರಿ ಸಂಘವು;

(ಕ) ರಾಜ್ಯ ಸರಕಾರವು; ಮತ್ತು,

(ಡ) ಒಕ್ಕಲುತನ ಹುಟ್ಟುವಳಿಯು ಸಂಗ್ರಹ ಇಲ್ಲವೆ ಸರಕಿನಮನೆ ಇಡುವುದರಲ್ಲಿ ತೊಡಗಿದ ಸಹಕಾರಿ ಸಂಘದ ಸಂದರ್ಭದಲ್ಲಿ, ೧೯೫೬ (ಕೇಂದ್ರ ಕಾಯಿದೆ ನಂ. ೨೮ —೧೯೫೬) ರ ಅಗ್ರಿಕಲ್ಚರಲ್ ಪ್ರೋಡ್ಯೂಸ್ (ಡೆವಲಪಮೆಂಟ ಆ್ಯಂಡ್ ವೇರಹೌಸಿಂಗ ಕಾರ್ಪೋರೇಶನ್) ಆ್ಯಕ್ಟವನ್ವಯ ಸ್ಥಾಪಿತವಾದ ರಾಜ್ಯದ ವೇರಹೌಸಿಂಗ ಕಾರ್ಪೋರೇಶನು.

(೨) ಸಹಕಾರಿ ಸಂಘದಲ್ಲಿ ಸದಸ್ಯನಾಗಲು ಪ್ರವೇಶ ನಿರಾಕರಿಸಲ್ಪಟ್ಟಾಗ ಆ ವ್ಯಕ್ತಿಯ ನಿರಾಕರಣೆಯ ಕಾರಣಗಳ ಸಹಿತವಾಗಿರುವ ಪ್ರವೇಶ ನಿರಾಕರಣೆಯ ನಿರ್ಣಯವು ಆ ಸಂಘದಿಂದ ಆ ವ್ಯಕ್ತಿಗೆ ಆ ನಿರ್ಣಯದ ತಾರೀಖಿನಿಂದ ಏಳು ದಿವಸಗಳಲ್ಲಿ ತಿಳಿಸಲ್ಪಡತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘದ ಸದಸ್ಯತ್ವದ ಬಗ್ಗೆ ಈ ಕಲಮು ಇದೆ ಸಂಘದ ನೋಂದಣಿಯ ಕಾಲಕ್ಕೆ ಅರ್ಜಿಮಾಡಿದವರೂ ಸದಸ್ಯರೇ ಆಗುವರು. ಅವರು ಯಾರು ಎಂತಹರು ಇರಬೇಕೆಂಬ ಬಗ್ಗೆ ಕಲಮು ೬ ರಲ್ಲಿ ಹೇಳಿದೆ. ಅರ್ಜದಾರ ನಾಗಲು ಆ ಅರ್ಹತೆಗಳು ಬೇಕು. ಅರ್ಜದಾರ ಸದಸ್ಯರಲ್ಲದೆ ಬೇರೆ ವ್ಯಕ್ತಿಗಳು ಸದಸ್ಯರಾಗಬೇಕೆಂದು ಬಯಸಿದರೆ, ಅವರಿಗೆ ಯಾವ ಅರ್ಹತೆಗಳು ಇರಬೇಕು ಎಂಬ ಬಗ್ಗೆ ಈ ಕಲಮಿನಲ್ಲಿ ಹೇಳಿದೆ. ಇಲ್ಲಿ ನಮೂದಾದ ವ್ಯಕ್ತಿ ಇಲ್ಲವೆ ಸಂಸ್ಥೆಗಳ ಹೊರತು ಬೇರೆ ಯಾರಿಗೂ ಸದಸ್ಯತ್ವಕ್ಕೆ ಪ್ರವೇಶವಿಲ್ಲ.

ವ್ಯಕ್ತಿಯು ಸಹಕಾರಿ ಸಂಘದ ಸದಸ್ಯತ್ವಕ್ಕೆ ಪ್ರವೇಶ ಬಯಸಿದರೆ ಆವನಿಗೆ ಸದಸ್ಯನಾಗಲು ಕಾಂಟ್ರಾಕ್ಟ ಕಾಯಿದೆಯ ಕಲಮು ೧೧ ರ ಪ್ರಕಾರ ಸಾಮರ್ಥ್ಯವಿರ ಬೇಕು. ಆ ಕಾಯಿದೆಯ ೧೧ ನೆಯ ಕಲಮು ಹೀಗೆ ಹೇಳುತ್ತದೆ,

“ ಅವನು ಯಾವ ಕಾಯಿದೆಗೆ ಅಂಕಿತನಾಗಿರುವನೋ ಆ ಕಾಯಿದೆಯ ಪ್ರಕಾರ ಯಾವನು ವಯಸ್ಸಿಗೆ ಬಂದಿರುವನೋ ಮತ್ತು ಯಾವನು ಬಂಧುರವಾದ ಮನಸ್ಸಿನವನು ಇರುವನೋ ಮತ್ತು ಯಾವ ಕಾಯಿದೆಗೆ ಅವನು ಅಂಕಿತನಾಗಿರುವನೋ ಆ ಕಾಯಿದೆಯಿಂದ ಕರಾರುಪತ್ರ ಮಾಡಿಕೊಳ್ಳಲು ಅನರ್ಹತೆಯುಳ್ಳವನೆಂದು ಆಗಿಲ್ಲವೊ ಅಂತಹ ಪ್ರತಿಯೊಬ್ಬ ವ್ಯಕ್ತಿಯು ಕರಾರುಪತ್ರ ಮಾಡಿಕೊಳ್ಳಲು ಸಮರ್ಥನು. ”

ಅಂದರೆ, ಎಲ್ಲ ವ್ಯಕ್ತಿಗಳಿಗೂ ಒಂದೇ ಕಾಯಿದೆ ಅನ್ವಯಿಸವುದಿಲ್ಲ ಎಂಬುದು ಇಲ್ಲಿ ಹೇಳಿದ ಮಾತು. ಆಯಾ ವ್ಯಕ್ತಿಗೆ ಅನ್ವಯಿಸುವ ಕಾಯಿದೆ ಪ್ರಕಾರ ಅವನು ವಯಸ್ಸಿಗೆ ಬಂದಿರಬೇಕು. ಕೆಲ ಕಾಯಿದೆಯ ಪ್ರಕಾರ ೧೮ ವರುಷ ತುಂಬಿದರೆ ಅವನು ವಯಸ್ಸಿಗೆ ಬಂದಂತೆ ಆಗುತ್ತಿದ್ದರೆ ಇನ್ನು ಕೆಲವು ಕಾಯಿಡೆಯ ಪ್ರಕಾರ, ೨೧ ವರುಷ ಪೂರ್ತಿ ಆಗಬೇಕು; ಕೆಲವೆಡೆಗಳಲ್ಲಿ ೨೪ ವರುಷದ ಮಿತಿಯೂ ಇದೆ. ಆಯಾ ಕಾಯಿದೆಯ ಪ್ರಕಾರ ಅವನು ವಯಸ್ಸಿಗೆ ಬಂದಿರಬೇಕು. ಮತ್ತು ಅವನು ಬಂಧುರ ಮನಸ್ಸಿನವರು ಇರಬೇಕು. ಅಂದರೆ ಹುಚ್ಚು, ಎಡ್ಡ, ಮಡ್ಡ ಮುಂತಾಗಿ ಇರಬಾರದು. ಅಂದರೆ ತಾನು ಯಾವ ಕರಾರಿನಲ್ಲಿ ಭಾಗಿಯಾಗುವನೋ ಅದರ ಬಗ್ಗೆ ತಿಳಿವಳಿಕೆ ಬರುವಂತೆ ಅವನ ಮನಸ್ಸಿನ ಸ್ಥಿತಿ ಇರಬೇಕು. ಅಲ್ಲದೆ, ಅವನು ಅಂಕಿತನಾಗಿರುವ ಕಾಯಿದೆಯ ಪ್ರಕಾರ ಅವನು ಕರಾರು ಮಾಡಿಕೊಳ್ಳಲು ಅನರ್ಹನು ಎಂದು ಆಗಿರಬಾರದು ಈ ಮೂರು ಲಕ್ಷಣಗಳು ಇದ್ದ ವ್ಯಕ್ತಿಯು ಕಾಂಟ್ರಾಕ್ಟ ಕಾಯಿದೆಯ ಕಲಮು ೧೧ ರ ಪ್ರಕಾರ ಕರಾರುಪತ್ರ ಮಾಡಿಕೊಳ್ಳಲು ಸಮರ್ಥನಾಗಿದ್ದ ವ್ಯಕ್ತಿ ಎಂದು ಅರ್ಥವಾಗುತ್ತದೆ.

ವ್ಯಕ್ತಿ ಅಲ್ಲದ ಸದಸ್ಯರು ಸಂಸ್ಥೆಗಳು ಆ ಸಂಸ್ಥೆಗಳು ಯಾರೆಂಬುದನು ಇಲ್ಲಿ ಹೇಳಿದೆ. ಸಹಕಾರಿ ಸಂಘ, ರಾಜ್ಯ ಸರಕಾರ, ರಾಜ್ಯ ವೇರಹೌಸಿಂಗ ಕಾರಪೋರೇಶನು ಈ ಕೊನೆಯ ಸದಸ್ಯನು ಕೇವಲ ಒಕ್ಕಲುತನ ಹುಟ್ಟುವಳಿಯ ಸಂಗ್ರಹ ಹಾಗೂ ಸರಕಿನಮನೆಯ ಕಾರ್ಯದಲ್ಲಿ ತೊಡಗಿದ ಸಂಘಗಳಿಗೆ ಮರ್ಯಾದಿತವಾದುದು. ಈ ವ್ಯಕ್ತಿಗಳು ಹಾಗೂ ಸಂಸ್ಥೆಗಳು ಮಾತ್ರ ಸಹಕಾರಿ ಸಂಘದ ಸದಸ್ಯತ್ವಕ್ಕೆ ಪ್ರವೇಶ ಪಡೆಯಲು ಯೋಗ್ಯತೆಯುಳ್ಳವರು.

ಆದರೆ ಇಂತಹರನ್ನು ಆ ಸಂಘವು ಸದಸ್ಯತ್ವಕ್ಕೆ ಪ್ರವೇಶ ಕೊಡಲು ನಿರಾಕರಿಸ ಬಹುದು ಹಾಗೆ ನಿರಾಕರಿಸಿದರೆ ನಿರಾಕರಣೆಯ ಕಾರಣಗಳನ್ನು ತೋರಿಸಬೇಕು. ನಿರಾಕರಿಸಿದ ನಿರ್ಣಯವನ್ನು ನಿರ್ಣಯಮಾಡಿದ ತಾರೀಖಿನಿಂದ ೭ ದಿವಸಗಳ ಒಳಗೆ ಆ ವ್ಯಕ್ತಿಗೆ ಇಲ್ಲವೆ ಆ ಸಂಸ್ಥೆಗೆ ಆ ಸಂಘವು ತಿಳಿಸಬೇಕು.

ವ್ಯಕ್ತಿ ಎಂಬ ಪದದಲ್ಲಿ ಸಂಸ್ಥೆಯೂ ಬರುವುದೆಂಬ ಹಾಗೆ ಈ ಕಲಮಿನ ರಚನೆ ಇದೆ ಎಂಬುದನ್ನು ನೆನಪಿಡಬೇಕು

## ೧೭. ಸದಸ್ಯತ್ವಕ್ಕೆ ಅನರ್ಹತೆ

(೧) ಸಹಕಾರಿ ಸಂಘದ ಸದಸ್ಯತ್ವಕ್ಕೆ ಪ್ರವೇಶ ಪಡೆಯಲು ಯಾವುದೇ ವ್ಯಕ್ತಿಯು, ಅವನು,

(ಅ) ತಾನು ನಾದಾರಿ ಯಾಗಿರುವನೆಂದು ನಿರ್ಣಯಿಸಿಕೊಳ್ಳಲು ಅರ್ಜಿ ಮಾಡಿದವನಾಗಿದ್ದರೆ, ಇಲ್ಲವೆ ಮುಕ್ತನಾಗದ ನಾದಾರಿಯಾಗಿದ್ದರೆ; ಇಲ್ಲವೆ,

(ಬ) ರಾಜಕೀಯ ಸ್ವರೂಪದ ಅಪರಾಧವಾಗಿರದೆ ಇರುವ ಇಲ್ಲವೆ ನೈತಿಕ ದೋಷವನ್ನು ಒಳಗೊಂಡ ಅಪರಾಧವಾಗಿರದೆ ಇರುವ ಬೇರೆ ಯಾವುದೇ ಅಪರಾಧಕ್ಕಾಗಿ ಅವನು ಶಿಕ್ಷೆಗೆ ಗುರಿಯಾಗಿದ್ದರೆ, ಇಂತಹ ಶಿಕ್ಷೆಯು ರದ್ದಾಗಿರದೆ ಇದ್ದರೆ, ಇಲ್ಲವೆ ಅಪರಾಧವು ಕ್ಷಮಿಸಲ್ಪಡದೆ ಇದ್ದರೆ, ಮತ್ತು ಶಿಕ್ಷೆಯ ಮುಕ್ತಾಯದ ದಿನದಿಂದ ಇನ್ನೂ ಐದು ವರುಷದ ಕಾಲಾವಧಿಯು ಮುಗಿದಿರದಿದ್ದರೆ,

ಅರ್ಹತೆಯುಳ್ಳವನಾಗತಕ್ಕದ್ದಲ್ಲ.

(೨) ಉಪಕಲಮು (೧) ರಲ್ಲಿ ನಿರ್ದಿಷ್ಟ ಪಡಿಸಿದ ಯಾವುದೇ ಅನರ್ಹತೆಗಳಿಗೆ ಯಾವುದೇ ಸದಸ್ಯನು ಅಂಕಿತನಾದರೆ, ಆ ಅನರ್ಹತೆಯು ಉಂಟಾದ ತಾರೀಖಿನಿಂದ ಅವನು ಸದಸ್ಯನಾಗಿ ಉಳಿದಿಲ್ಲವೆಂದು ಗಣಿಸಲ್ಪಡತಕ್ಕದ್ದು.

(೩) ಸಹಕಾರಿ ಪತ್ತಿನ ಸಂಘದ ಸದಸ್ಯನಾಗಿರುವ ಯಾವುದೇ ವ್ಯಕ್ತಿಯು ರಜಿಸ್ಟ್ರಾರನ ಸಾಮಾನ್ಯ ಇಲ್ಲವೆ ವಿಶಿಷ್ಟ ಪರವಾನಗಿ ಇಲ್ಲವೆ ಅಂತಹ ಬೇರೆ ಯಾವುದೇ ಸಂಘದ ಸದಸ್ಯನೆಂದು ಪ್ರವೇಶ ಪಡೆಯಲು ಅರ್ಹನಾಗಿರತಕ್ಕದ್ದಲ್ಲ.

**ವಿವರಣೆ**

ಈ ಕಲಮಿನ ಉದ್ದೇಶಗಳಿಗಾಗಿ "ಸಹಕಾರಿ ಪತ್ತಿನ ಸಂಘವು" ಎಂದರೆ, ಯಾವ ಸಹಕಾರಿ ಸಂಘವು ತನ್ನ ಸದಸ್ಯರಿಗೆ ಹಣದ ರೂಪದಲ್ಲಿಯಾಗಲೀ ಇಲ್ಲವೆ ವಸ್ತುವಿನ ರೂಪದಲ್ಲಿಯಾಗಲೀ ಕೊಡುವುದೋ ಇಲ್ಲವೆ ಸಾಲಕೊಡುವುದೋ ಅಂತಹ ಸಹಕಾರಿ ಸಂಘವೆಂದು ಅರ್ಥವಾಗುತ್ತದೆ.

**ವಿವೇಚನೆ**

ಅನರ್ಹತೆಯು ಸದಸ್ಯತ್ವಕ್ಕಾಗಿ ಹೇಗೆ ಉಂಟಾಗುವುದು ಎಂಬ ಬಗ್ಗೆ ಇಲ್ಲಿ ಹೇಳಿದೆ. ಯಾವನಾದರೂ ತಾನು ನಾದಾರಿಯೆಂದು ನಿರ್ಣಯಿಸಿಕೊಳ್ಳುವುದಕ್ಕೆ ಅರ್ಜಿ ಮಾಡಿಕೊಂಡಿದ್ದರೆ ಅವನು ಸದಸ್ಯನಾಗಲು ಅನರ್ಹನು; ನಾದಾರಿಯೆಂದು ನಿಶ್ಚಿತವಾಗಿ ಆದರಿಂದ ಇನ್ನು ಮುಕ್ತನಾಗದೆ ಇದ್ದವನೂ ಅನರ್ಹನು; ಯಾವನಾದರೂ ಅಪರಾಧ ಮಾಡಿದ್ದು ಅವನಿಗೆ ಶಿಕ್ಷೆಯಾಗಿ, ಶಿಕ್ಷೆಯು ಕಾಯಂ ಆಗಿದ್ದರೆ, ಅವನು ಅನರ್ಹನು, ಮತ್ತು ಶಿಕ್ಷೆಯ ಅವಧಿ ಮುಗಿದು ಇನ್ನು ಐದು ವರುಷವಾಗಿರದಿದ್ದರೆ ಅವನು ಅನರ್ಹನು. ಅಂದರೆ ಐದು ವರುಷ ಮುಗಿದಿದ್ದರೆ ಅನರ್ಹತೆಯು ದೂರಾಗುವುದು ಎಂದು ಅರ್ಥ. ಈ ಶಿಕ್ಷೆಯ ಅಪರಾಧವು ಎಂತಹದು ಇರಬೇಕು ಎಂಬುದನ್ನು ವಿವರಿಸಲಾಗಿದೆ. ರಾಜಕೀಯ ಅಪರಾಧವಾಗಿದ್ದರೆ ಅದು ಅನರ್ಹತೆಯನ್ನು ತರುವುದಿಲ್ಲ. ಆ ಬಗ್ಗೆ ಶಿಕ್ಷೆಯಾಗಿದ್ದರೂ ಅದು ಶಿಕ್ಷೆಯೆಂದು ಅನರ್ಹತೆಗೆ ಅನ್ವಯಿಸುವುದಿಲ್ಲ. ಅದರಂತೆ ನೈತಿಕ ದೋಷವುಳ್ಳ ಅಪರಾಧವಾಗಿರಬಾರದು. ನೈತಿಕ ದೋಷವುಳ್ಳ ಅಪರಾಧವಾಗಿದ್ದರೆ ಅದು ಅನರ್ಹತೆಯನ್ನು ತರುವುದು.

ಸಾರ್ವಜನಿಕ ಸಂಸ್ಥೆಯಲ್ಲಿ ಕೆಲಸ ಮಾಡುವವರು ಆರ್ಥಿಕ ದೃಷ್ಟಿಯಿಂದ ಭದ್ರವಾಗಿದ್ದವರು ಇರಬೇಕಲ್ಲದೆ, ವ್ಯವಹಾರ ನಡೆಸಲು ಸಮರ್ಥರಾಗಿರಬೇಕು. ಈ ಸಮರ್ಥತೆಯು ಕಾಯಿದೆ ದೃಷ್ಟಿಯಿಂದ ಸಮರ್ಥತೆಯಾಗಿರಬೇಕು. ಇದು ಅರ್ಹತೆಯ ವಿಷಯವಾಗಿ ಕಲಮು ೧೬ ರಲ್ಲಿ ಹೇಳಿದೆ. ಯಾರಿಗೆ ಕರಾರುಪತ್ರದಲ್ಲಿ ಭಾಗಿಯಾಗಲು ಸಾಮರ್ಥ್ಯವಿರುವುದೋ-ಅಂತಹರು ಸಮರ್ಥರು. ಆ ದೃಷ್ಟಿಯಿಂದ ನಾದಾರಿಯು ಸಮರ್ಥ ವ್ಯಕ್ತಿಯಲ್ಲ. ಅಪರಾಧ ಮಾಡಿದ ವ್ಯಕ್ತಿಯು ಹೊಣೆಗಾರ ವ್ಯಕ್ತಿಯಾಗಲಾರ. ಆದ್ದರಿಂದ ಹೊಣೆಗಾರಿಕೆಯ ವಿಚಾರದ ಮೂಲಕ ಅವರು ಸಹಕಾರಿ ಸಂಘದ ಸದಸ್ಯತ್ವಕ್ಕೆ ಅನರ್ಹರಾಗುತ್ತಾರೆ.

ಈ ಅನರ್ಹತೆಯು ಸದಸ್ಯನಾಗುವ ಕಾಲಕ್ಕೆಯೂ ಇರಬಾರದು. ಸದಸ್ಯನಾದ ಮೇಲೆ ಅನರ್ಹತೆ ಉಂಟಾದರೆ ಅವನು ಸದಸ್ಯತ್ವವನ್ನು ಕಳೆದುಕೊಳ್ಳುವನು.

ಸಹಕಾರಿ ಪತ್ತಿನ ಸಂಘದ ಸದಸ್ಯನಾಗಿದ್ದ ವ್ಯಕ್ತಿಯು ಬೇರೆ ಮತ್ತೊಂದು ಪತ್ತಿನ ಸಂಘದ ಸದಸ್ಯನಾಗಬೇಕಾದರೆ ರಜಿಸ್ಟ್ರಾರನ ಪರವಾನಗಿ ಬೇಕು. ಪತ್ತಿನ ನೆರವು ಸದಸ್ಯರಿಗೆ ಸಿಕ್ಕುವುದರಿಂದ ಒಂದೇ ವ್ಯಕ್ತಿಯು ಹಲವಾರು ಸಂಘಗಳಲ್ಲಿ ಸದಸ್ಯನಾಗಿದ್ದರೆ ಅವನಿಗೆ ಹೆಚ್ಚು ನೆರವು ದೊರೆತು ಇನ್ನಿತರರಿಗೆ ಅಗತ್ಯವಿದ್ದರೂ ದೊರೆಯದಂತಾಗುವ ಸಂಭವವಿರುವುದರಿಂದ ಈ ರೀತಿಯಾಗಿ ನಿರ್ಬಂಧ ಹಾಕಲಾಗಿದೆ. ರಜಿಸ್ಟ್ರಾರನು ಪರವಾನಗಿ ಕೊಡಬೇಕಾದರೆ ಪರಿಸ್ಥಿತಿ ವಿಚಾರಮಾಡುವನು. ಪರಿಸ್ಥಿತಿಯ ಆವಶ್ಯಕತೆಯು ಬಲವತ್ತರವಾಗಿದ್ದರೆ ಅವನು ಪರವಾನಗಿ ಕೊಡುವನು. ಪತ್ತಿನ ಸಂಘದವರಿಗೆ ಯಾವ ಸಂಘವು ಹಣ ಇಲ್ಲವೆ ವಸ್ತುವನ್ನು ಕೊಡುವುದೋ ಇಲ್ಲವೆ ಸಾಲವಾಗಿ ಕೊಡುವುದೋ ಆ ಸಂಘವೆಂದು ವಿವರಣೆ ಕೊಡಲಾಗಿದೆ.

## ೧೮. ನಾಮ ಮಾತ್ರ ಇಲ್ಲವೆ ಸಹಾಯಕ ಸದಸ್ಯರು

(೧) ಕಲಮು ೧೬ ರಲ್ಲಿ ಏನೇ ಹೇಳಲಾಗಿದ್ದರೂ ಸಹಕಾರಿ ಸಂಘವು ಯಾವುದೇ ವ್ಯಕ್ತಿಗೆ ನಾಮಮಾತ್ರ ಇಲ್ಲವೆ ಸಹಾಯಕ ಸದಸ್ಯನೆಂದು ಪ್ರವೇಶಕೊಡಬಹುದು.

(೨) ಸಂಘದ ಸೊತ್ತು ಇಲ್ಲವೆ ಲಾಭಗಳಲ್ಲಿ ಯಾವುದೇ ಸ್ವರೂಪದಲ್ಲಿ ಯಾವುದೇ ಪಾಲು ಪಡೆಯಲು ಇಲ್ಲವೆ ಸಂಘದಲ್ಲಿ ಯಾವುದೇ ಅಧಿಕಾರಿಯಾಗಲು ನಾಮಮಾತ್ರ ಸದಸ್ಯನು ಬಾಧ್ಯಸ್ಥನಾಗಿರತಕ್ಕದ್ದಲ್ಲ.

(೩) ಸಹಾಯಕ ಸದಸ್ಯನು ಶೇರುಗಳನ್ನು ಧಾರಣಮಾಡಬಹುದು ಆದರೆ ಸಂಘದ ಅಧಿಕಾರ ಪದವನ್ನು ಧಾರಣಮಾಡಲು ಬಾಧ್ಯಸ್ಥನಾಗಿರತಕ್ಕದ್ದಲ್ಲ.

(೪) ಈ ಕಲಮಿನಲ್ಲಿ ಹೇಳಿದುದನ್ನು ಹೊರತುಪಡಿಸಿ, ನಾಮಮಾತ್ರ ಸದಸ್ಯನಿಗೆ ಇಲ್ಲವೆ ಸಹಾಯಕ ಸದಸ್ಯನಿಗೆ ಸಂಘದ ಪೋಟನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತೆ ಸದಸ್ಯರ ಅಂತಹ ಹಕ್ಕು ಹಾಗೂ ಬಾಧ್ಯತೆಗಳು ಇರತಕ್ಕದ್ದು ಮತ್ತು ಅವನು ಸದಸ್ಯರ ಅಂತಹ ಹೊಣೆಗಾರಿಕೆಗಳ ಅಂಕಿತವಾಗಿರತಕ್ಕದ್ದು.

**ವಿವೇಚನೆ**

ಸದಸ್ಯರಲ್ಲಿ ಅನೇಕ ವಿಧವಿದೆ. ಸಂಘದ ಸಾಮಾನ್ಯ ಸದಸ್ಯರು ಮತ್ತು ನಾಮಮಾತ್ರ ಇಲ್ಲವೆ ಸಹಾಯಕ ಸದಸ್ಯನು ಎಂದು. ಸಾಮಾನ್ಯ ಸದಸ್ಯನಿಗೆ ಸದಸ್ಯರ ಎಲ್ಲ ಅಧಿಕಾರ ಹಕ್ಕು ಹೊಣೆಗಾರಿಕೆಗಳು ಇರುವುವು. ಆದರೆ ನಾಮಮಾತ್ರ ಸದಸ್ಯರಿಗೆ ಅಷ್ಟು ಹಕ್ಕುಗಳು ಇಲ್ಲ. ಹೊಣೆಗಾರಿಕೆಯೂ ಇಲ್ಲ. ನಾಮಮಾತ್ರ ಸದಸ್ಯರನ್ನು-ಸಹಾಯಕ ಸದಸ್ಯರನ್ನು ಪ್ರವೇಶಮಾಡಿಸಿಕೊಳ್ಳಲು ಕಲಮು ೧೬ರಲ್ಲಿ ಏನೇ ಹೇಳಲಾಗಿದ್ದರೂ ಈ ೧೭ ನೆಯ ಕಲಮು ಸಂಘಕ್ಕೆ ಅಧಿಕಾರ ಕೊಡುತ್ತದೆ.

ನಾನು ಮಾತ್ರ ಸದಸ್ಯನಿಗೆ ಸಂಘದ ಸೊತ್ತು ಮತ್ತು ಲಾಭಗಳಲ್ಲಿ ಯಾವ ಪಾಲು ದೊರೆಯದು; ಅಧಿಕಾರ ಪದವನ್ನು ಪಡೆಯಲೂ ಅವನಿಗೆ ಬಾಧ್ಯತೆ ಇಲ್ಲ. ಸಹಾಯಕ ಸದಸ್ಯನಿಗೆ ಶೇರುಗಳನ್ನು ಧಾರಣಮಾಡಲು ಬರುವುದು ಆದರೆ ಅವನಿಗೆ ಅಧಿಕಾರ ಪದ ಧಾರಣಮಾಡಲು ಬರುವುದಿಲ್ಲ. ಈ ನಿರ್ಬಂಧಗಳನ್ನು ಹೊರತು ಪಡಿಸಿ ನಾಮಮಾತ್ರ ಸದಸ್ಯನು ಮತ್ತು ಸಹಾಯಕ ಸದಸ್ಯನು ಉಳಿದ ಸಾಮಾನ್ಯ ಸದಸ್ಯರಂತೆ ಎಲ್ಲ ಅಧಿಕಾರಗಳನ್ನು ಮತ್ತು ಬಾಧ್ಯತೆಗಳನ್ನು ಪಡೆಯುವನು. ಅವನ ಹೊಣೆಗಾರಿಕೆಯು ಮಾತ್ರ ಎಷ್ಟೆಂಬುದನ್ನು ಪೋಟನಿಯಮಗಳು ನಿರ್ದಿಷ್ಟ ಪಡಿಸುವುವು.

ಇದರಿಂದ ಒಂದು ಮಾತು ಸ್ಪಷ್ಟವಾಗುವುದು. ಪೂರ್ಣ ಹಕ್ಕು ಹೊಣೆ ಗಾರಿಕೆಗಳನ್ನು ಅಧಿಕಾರ ಬಾಧ್ಯತೆಗಳನ್ನು ಪಡೆವವನು ಸಾಮಾನ್ಯ ಸದಸ್ಯನು. ಇವನು ಸಂಘವನ್ನು ರೂಪಿಸುವಾಗ್ಗೆ, ಇದ್ದವನು ಇಲ್ಲವೆ ನಂತರ ಬಂದವನು. ನಾಮಮಾತ್ರ ಸದಸ್ಯನು ಮತ್ತು ಸಹಾಯಕ ಸದಸ್ಯನು ಪೂರ್ಣ ಅಧಿಕಾರವುಳ್ಳ ಸದಸ್ಯನು ಅಲ್ಲ. ಆದ್ದರಿಂದ ಅವನಿಗೆ ಹೊಣೆಗಾರಿಕೆ ಕಡಿಮೆ. ಸ್ಥಾನಮಾನ ಕಡಿಮೆ.

### ೧೮. ಯೋಗ್ಯವಾಗಿ ಹಣಸಲ್ಲಿಸುವ ತನಕ ಸದಸ್ಯನು ಹಕ್ಕುಗಳನ್ನು ನಿರ್ವಹಿಸತಕ್ಕದ್ದಲ್ಲ.

ಸದಸ್ಯತ್ವದ ಸಂಬಂಧವಾಗಿ ಸಂಘಕ್ಕೆ ಹಣವನ್ನು ಸಲ್ಲಿಸಿದ ಹೊರತು ಇಲ್ಲವೆ ಪೋಟನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಹಾಗೆ ಸಂಘದಲ್ಲಿ ಅಂತಹ ಹಿತಾಸಕ್ತಿ ಪಡೆದ ಹೊರತು ಯಾವುದೇ ಸದಸ್ಯನು ಸದಸ್ಯನ ಹಕ್ಕುಗಳನ್ನು ನಿರ್ವಹಿಸತಕ್ಕದ್ದಲ್ಲ.

**ವಿವೇಚನೆ**

ಇಲ್ಲಿ ಎರಡು ವಿಷಯಗಳು ಇವೆ. ಸದಸ್ಯನೆಂದು ಹಕ್ಕು ನಿರ್ವಹಿಸಬೇಕಾದರೆ ಅವನು ಸದಸ್ಯನಾಗಿರಬೇಕು. ಸದಸ್ಯನಾಗಲು ಸದಸ್ಯತ್ವದ ವಂತಿಗೆಯ ಹಣವನ್ನು ಕೊಟ್ಟಿರಬೇಕು; ಅಲ್ಲದೆ ಸದ್ಯಸನಾಗಲು ಅವಶ್ಯವಾದ ಶೇರುಗಳನ್ನು ಪಡೆದು ಸಂಘದಲ್ಲಿ ಹಿತಾಸಕ್ತಿ ಪಡೆದಿರಬೇಕು ಹೀಗೆ ಮಾಡಿದ ಹೊರತು ಅವನು ಸದಸ್ಯನೆಂದು ಪೂರ್ತಿಯಾಗಿ ಅಧಿಕಾರ ಪಡೆವುದಿಲ್ಲ. ಅಧಿಕಾರ ಬಾರದೆ, ಹಕ್ಕು ನಡಸುವುದಕ್ಕೆ ಅವಕಾಶವಿಲ್ಲವೆಂದು ಈ ಕಲಮು ನಿರ್ಬಂಧಿಸುವುದು. ಅಧಿಕಾರವು ಬಾಧ್ಯತೆಯಾದರೆ ಅದನ್ನು ಪಡೆಯಲು ಮಾಡಬೇಕಾದ ಪೂರ್ವಭಾವಿಯಾದ ಕಾರ್ಯವು ಕರ್ತವ್ಯವಾಗುವುದು. ಕರ್ತವ್ಯಮಾಡದೆ ಹಕ್ಕು ಇಲ್ಲವೆ ಅಧಿಕಾರ ಬಾರದು ಎಂಬುದನ್ನೇ ಇದು ಹೇಳುವುದು.

## ೨೦. ಸದಸ್ಯರ ಮತಗಳು.

ಸಂಘದ ವ್ಯವಹಾರಗಳಲ್ಲಿ ಸಹಕಾರಿ ಸಂಘದ ಪ್ರತಿಯೊಬ್ಬ ಸದಸ್ಯನಿಗೆ ಒಂದು ಮತವು ಇರತಕ್ಕದ್ದು.

ಆದರೆ—

(ಅ) ನಾಮಮಾತ್ರ ಸದಸ್ಯನಿಗೆ ಇಲ್ಲವೆ ಸಹಾಯಕ ಸದಸ್ಯನಿಗೆ ಮತ-ದಾನ ಮಾಡುವ ಹಕ್ಕು ಇರತಕ್ಕದ್ದಲ್ಲ

(ಬ) ಸಹಕಾರಿ ಸಂಘದಲ್ಲಿ ರಾಜ್ಯ ಸರಕಾರವು ಸದಸ್ಯವಾಗಿರುವಾಗ ಸಹಕಾರಿ ಸಂಘದ ಕಮಿಟಿಯ ಮೇಲೆ ನಾಮಕರಣವಾದ ಒಂದೊಂದು ವ್ಯಕ್ತಿಗೂ ಒಂದು ಮತವು ಇರತಕ್ಕದ್ದು.

**ವಿವೇಚನೆ**

ಒಬ್ಬ ಸದಸ್ಯನಿಗೆ ಒಂದು ಮತ: ಸಹಕಾರಿ ಸಂಘದ ಸದಸ್ಯನಿಗೆ-ಸಹಕಾರಿ ಸಂಘದ ವ್ಯವಹಾರದಲ್ಲಿ ಮತಹಾಕುವ ಪ್ರಸಂಗ ಬಂದಾಗ ಸದಸ್ಯನಿಗೆ ಒಂದು ಮತ ಎಂದು ಅರ್ಥ. ಆದರೆ, ನಾಮಮಾತ್ರ ಇಲ್ಲವೆ ಸಹಾಯಕ ಸದಸ್ಯನಿಗೆ ಮತಾಧಿಕಾರ ಇಲ್ಲ. ಅವರು ಸಾಮಾನ್ಯ ಸದಸ್ಯನ ಅಧಿಕಾರ-ಹಕ್ಕು ಬಾಧ್ಯತೆಗಳನ್ನು ಪಡೆದವರಲ್ಲ ಎಂಬುದನ್ನು ಈಗಾಗಲೇ ಸ್ಪಷ್ಟಮಾಡಲಾಗಿದೆ. ಮತದಾನವು ಸದಸ್ಯನ ಮೂಲಭೂತ ಹಕ್ಕು. ಯಾರಿಗೆ ಮತದಾನದ ಅಧಿಕಾರವಿರುವುದೋ ಅವರು ಆ ಸಂಸ್ಥೆಯ ಆಗು-ಹೋಗುಗಳಿಗೆ ಹೊಣೆಗಾರರು. ಇನ್ನಿತರರು ಸಂಘದ ವ್ಯವ-ಹಾರದಲ್ಲಿ ನೆರವಿಗೆ ಬಂದವರು. ಅವರ ಉಪಯೋಗವನ್ನು ಸಂಘವು ಮಾಡಿಕೊಳ್ಳಬಹುದು. ಆದರೆ ಅವರ ಮೇಲೆ ಹೊಣೆಗಾರಿಕೆ ಹಾಕಲು ಬರುವುದಿಲ್ಲ. ಅದ್ದರಿಂದ ಅಂತಹರಿಗೆ ಮತಾಧಿಕಾರವಿಲ್ಲ.

ಸಹಕಾರಿ ಸಂಘದಲ್ಲಿ ರಾಜ್ಯಸರಕಾರವು ಸದಸ್ಯವಾಗಿರುವಾಗ ಸರಕಾರದ ಪರವಾಗಿ ನಾಮಕರಣ ಹೊಂದಿದ ವ್ಯಕ್ತಿಗೆ ಒಂದು ಮತ; ಹೆಚ್ಚು ವ್ಯಕ್ತಿಗಳು ಬೇರೆ ಬೇರೆ ಕಮಿಟಿಗೆ ಇದ್ದರೆ, ಒಂದೊಂದು ವ್ಯಕ್ತಿಗೆ ಒಂದು ಮತ.

ಒಂದು ವ್ಯಕ್ತಿಗೆ ಒಂದು ಮತ ಎಂಬುದು ಇಲ್ಲಿ ಹೇಳಬೇಕಾದ ಮಾತು. ಅಲ್ಲದೆ ನಾಮಮಾತ್ರ ಇಲ್ಲವೆ ಸಹಾಯಕ ಸದಸ್ಯನಿಗೆ ಮತಾಧಿಕಾರ ಇಲ್ಲ ಎಂಬುದನ್ನು ಹೇಳಬೇಕಾಗಿದೆ.

**೨೧. ಮತದಾನ ಮಾಡುವ ಪದ್ಧತಿ**

(೧) ಸಹಕಾರಿ ಸಂಘದ ಪ್ರತಿಯೊಬ್ಬ ಸದಸ್ಯನು ತನ್ನ ಮತವನ್ನು ತಾನೇ ಸ್ವತಃ ಬಂದು ಹಾಕತಕ್ಕದ್ದು ಮತ್ತು ಯಾವ ಸದಸ್ಯನೂ ಪರೋಕ್ಷ ಮತದಿಂದ ಮತದಾನ ಮಾಡುವುದಕ್ಕೆ ಪರವಾನಗಿ ಇರತಕ್ಕದ್ದಲ್ಲ.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ—

(ಅ) ಒಂದು ಸಹಕಾರಿ ಸಂಘವು ಇನ್ನೊಂದು ಸಹಕಾರಿ ಸಂಘದ ಸದಸ್ಯನಾಗಿರುವಾಗ, ಈ ಕಾಯಿದೆಯನ್ವಯವಾಗಿ ಮಾಡಿದ ಯಾವುವೇ ನಿಯಮಗಳ ಅಂಕಿತವಾಗಿ, ತನ್ನ ಸದಸ್ಯರಲ್ಲಿ ಒಬ್ಬನನ್ನು ಆ ಇನ್ನೊಂದು ಸಂಘದ ವ್ಯವಹಾರದಲ್ಲಿ ತನ್ನ ಪರವಾಗಿ ಮತ ಹಾಕಲು ನೇಮಕ ಮಾಡಬಹುದು.

(ಬ) ರಾಜ್ಯದ ಸರಕಿನ ಮನೆ ಕಾರ್ಪೋರೇಶನು ಸಹಕಾರಿ ಸಂಘದ ಸದಸ್ಯನಾಗಿರುವಾಗ ಕಾರ್ಪೋರೇಶನದಿಂದ ನಾಮಕರಣವಾದ ವ್ಯಕ್ತಿಯು ಕಾರ್ಪೋರೇಶನದ ಪರವಾಗಿ ಸಂಘದ ವ್ಯವಹಾರದಲ್ಲಿ ಮತದಾನ ಮಾಡಬಹುದು.

**ವಿವೇಚನೆ**

ಒಂದು ವ್ಯಕ್ತಿಗೆ ಒಂದು ಮತ; ಅದರಂತೆ ಮತದಾನವನ್ನು ಸ್ವತಃ ಮಾಡಬೇಕು. ಈ ಎರಡು ತತ್ವಗಳು ಸಹಕಾರದ ತತ್ವವನ್ನು ತೋರುವುವು. ಸಹಕಾರದಲ್ಲಿ ಸಕಲರೂ ಸಮಾನರು ಎಂಬುದು ಮೂಲ ಮಾತು. ಅದಕ್ಕಾಗಿ ಒಬ್ಬ ಸದಸ್ಯನಿಗೆ ಒಂದೇ ಮತ. ಅದರಂತೆ ಸಹಕಾರವು ವ್ಯಕ್ತಿಗಳ ಸಹಕಾರವೇ ಹೊರತು ಬಂಡವಲಿನ ಸಹಕಾರ ಅಲ್ಲ, ಎಂಬುದನ್ನು ತೋರಿಸಲಾಗಿದೆ. ಆದ್ದರಿಂದ ಸದಸ್ಯನಾಗಿ ಮನೆಯಲ್ಲಿ ಕುಳಿತು ಪರೋಕ್ಷವಾಗಿ ಮತದಾನ ಮಾಡುವಂತಿಲ್ಲ. ಸಂಘದ ವ್ಯವಹಾರಗಳಲ್ಲಿ ಸ್ವತಃ ಆಸ್ಥೆ ವಹಿಸಿ ತಾನೇ ಬಂದು ಮತ ಹಾಕಬೇಕು. ವ್ಯಕ್ತಿಯ ಸಹಕಾರದ ಮಾತು ಇರುವುದರಿಂದ ವ್ಯಕ್ತಿಯು ಮತ ಹಾಕಲು ಬರಬೇಕು. ಆದ್ದರಿಂದ ಸಹಕಾರಿ ಸಂಘದ ವ್ಯವಹಾರವಲ್ಲಿ ಪರೋಕ್ಷ ಮತದಾನದ ಪದ್ಧತಿ ಇಲ್ಲ.

ಆದರೆ ಈ ಮಾತಿಗೆ ಒಂದು ಅಪವಾದವಿದೆ; ಹಾಗೆ ನೋಡಿದರೆ ಅದು ಅಪವಾದವೂ ಅಲ್ಲ. ಕಾಣಲಿಕ್ಕೆ ಅಪವಾದವೆಂಬ ಹಾಗೆ ಕಾಣುವುದು. ಸಂಘದ

ಸದಸ್ಯರಲ್ಲಿ ಸಹಕಾರಿ ಸಂಘವು ಸದಸ್ಯವಾಗಿದ್ದರೆ ಅದು ಪ್ರತ್ಯಕ್ಷ ಮತ ಹಾಕುವುದು ಹೇಗೆ ? ಆದ್ದರಿಂದ ಯಾವ ಸಂಘದ ಸದಸ್ಯವಾಗಿ ಈ ಸಂಘವು ಇರುವುದೋ ಆ ಸಂಘದ ವ್ಯವಹಾರಗಳಲ್ಲಿ ಮತ ಹಾಕಲು ಈ ಸಂಘದ ಸದಸ್ಯರಲ್ಲಿ ಒಬ್ಬನನ್ನು ನೇಮಿಸಬಹುದು. ಈ ನೇಮಕವು ಈ ಕಾಯಿದೆಯನ್ವಯವಾಗಿ ಮಾಡಿದ ನಿಯಮಗಳಿಗೆ ಅಂಕಿತವಾಗಿರತಕ್ಕದ್ದು. ಹೀಗೆ ನೇಮಕವಾದ ವ್ಯಕ್ತಿಯು ಸಂಘದ ಪರವಾಗಿ ಮತದಾನ ಮಾಡುವುದರಿಂದ ಅಕ್ಷರಶಃ ಸಂಘವೇ ಪ್ರತ್ಯಕ್ಷ ಮತದಾನ ಮಾಡಿದಂತಲ್ಲ; ಪ್ರತಿನಿಧಿಯು ಮಾಡಿದ ಹಾಗೆ; ಆದ್ದರಿಂದ ಅದು ಪರೋಕ್ಷ ಮತದಾನವಾಯಿತು ಎಂದು ಅನ್ನುವುದಾದರೆ, ಅದು ಅಪವಾದದಲ್ಲಿ ಬರುವುದು. ಅದಕ್ಕೆ ಉಪಕಲಮು (೧) ರಲ್ಲಿ ಏನೇ ಹೇಳಿದ್ದರೂ ಹಾಗೆ ನೇಮಕವಾದ ಸದಸ್ಯನು ಮತದಾನ ಮಾಡಲಿಕ್ಕೆ ಬರುವುದು. ಸಂಘವು ಕಾಯಿದೇಶೀರ ವ್ಯಕ್ತಿಯೇ ಹೊರತು ಮಾನವ ವ್ಯಕ್ತಿಯಲ್ಲ ಸಂಘವು ಯಾವುದೊಂದು ವ್ಯಕ್ತಿಯ ಮುಖಾಂತರವೇ ಕಾರ್ಯ ಮಾಡಬೇಕಲ್ಲ; ಪ್ರತಿನಿಧಿಯು ಮುಖಾಂತರ ಮಾಡಿದರೂ ಅದು ಹಾಗೆ ನೋಡಿದರೆ ಸ್ವತಃ ಮತದಾನ ಮಾಡಿದಂತೆ. ಆದರೆ ಕಾಯಿದೆಯಲ್ಲಿ ಸ್ಪಷ್ಟತೆ ಇರಬೇಕು; ತಕರಾರುಗಳಿಗೆ ಆಸ್ಪದ ಇರಬಾರದು. ಎಂದು ಅದನ್ನು ಅಪವಾದವಾಗಿ ಹೇಳಿ ಅದಕ್ಕೆ ಕಾಯಿದೆಯ ಮೂಲಕ ಮನ್ನಣೆ ಕೊಡಲಾಗಿದೆ.

ರಾಜ್ಯದ ಸರಕಿನ ಮನೆ ಕಾರ್ಪೋರೇಶನು ಒಂದು ಸಂಘದ ಸದಸ್ಯವಾಗಿರುವಾಗ ಕಾರ್ಪೊರೇಶನ್‌ದಿಂದ ನಾಮಕರಣವಾದ ವ್ಯಕ್ತಿಯು ಕಾರ್ಪೋರೇಶನ್‌ದ ಪರವಾಗಿ ಮತದಾನ ಮಾಡಬಹುದು.

ಸಹಕಾರಿ ಸಂಘದ ಸಂಬಂಧದಲ್ಲಿ "ನೇಮಕವಾದ ಸದಸ್ಯ" ಮತದಾನ ಮಾಡಬಹುದು ಎಂದಿದೆ. ರಾಜ್ಯದ ಸರಕಿನ ಕಾರ್ಪೋರೇಶನು ಸದಸ್ಯನಾಗಿರುವಾಗ "ನಾಮಕರಣವಾದ ವ್ಯಕ್ತಿ" ಎಂದು ಇದೆ. ಅಂದರೆ ಸಂಘದ ಸಂಬಂಧವಾಗಿ ಬೇರೆಯಾದ ವ್ಯಕ್ತಿಯನ್ನು ನೇಮಕಮಾಡಲು ಬರುವುದಿಲ್ಲ; ಅವನು ಸದಸ್ಯನೇ ಆಗಿರಬೇಕು, ಎಂಬುದನ್ನು ಲಕ್ಷಿಸಬೇಕು. ಕಾರ್ಪೋರೇಶನು ಬೇಕಾದ ವ್ಯಕ್ತಿಯನ್ನು ನಾಮಕರಣ ಮಾಡಬಹುದು. ಈ ವಿಷಯವನ್ನು ತಿಳಿಯಬೇಕು.

## ೨೨. ಶೇರುಗಳ ಧಾರಣಮಾಡಲು ನಿರ್ಬಂಧಗಳು

ರಾಜ್ಯ ಸರಕಾರ, ರಾಜ್ಯದ ಸರಕಿನಮನೆ ಕಾರ್ಪೋರೇಶನು, ಇಲ್ಲವೆ ಬೇರೆ ಯಾವುದೇ ಸಹಕಾರಿ ಸಂಘದ ಹೊರತಾಗಿ ಯಾವುವೇ ಸದಸ್ಯನು ಯಾವುದೇ ಸಹಕಾರಿ ಸಂಘದಲ್ಲಿ—

(ಅ) ಸಂಘದ ಒಟ್ಟು ಶೇರು ಬಂಡವಲಿನಲ್ಲಿಯ ಒಂದು ಐದಾಂಶಕ್ಕೆ ಮೀರದಷ್ಟು ಗೊತ್ತುಮಾಡಬಹುದಾದಷ್ಟು ಅಂತಹ ಭಾಗವನ್ನು ಧಾರಣಮಾಡತಕ್ಕದ್ದು; ಇಲ್ಲವೆ,

(ಬ) ಸಂಘದ ಶೇರುಗಳನ್ನು ಹತ್ತು ಸಾವಿರ ರೂಪಾಯಿಗಳಿಗಿಂತ ಹೆಚ್ಚಾಗಿ ಧಾರಣಮಾಡತಕ್ಕದ್ದಲ್ಲ ಇಲ್ಲವೆ ಅದರಲ್ಲಿ ಯಾವುದೇ ಹಿತಾಸಕ್ತಿಯನ್ನು ಅಧಿಕಾರದಿಂದ ಕೇಳತಕ್ಕದ್ದಲ್ಲ.

ಇವುಗಳಲ್ಲಿ ಯಾವುದು ಕಡಿಮೆಯೋ ಅದನ್ನು ಸದಸ್ಯನು ಪಡೆಯತಕ್ಕದ್ದು.

ಆದರೆ, ಶೇರು ಬಂಡವಾಳದ ಒಂದು ಐದಾಂಶದ ಮೇಲ್ಮಿತಿಯಕಿಂತ ಹೆಚ್ಚಾಗಿ ಇಲ್ಲವೆ ಸಂದರ್ಭಾನುಸಾರವಾಗಿ ಹತ್ತುಸಾವಿರ ರೂಪಾಯಿಗಳಿಗಿಂತ ಹೆಚ್ಚು ರಕಮು ಧಾರಣಮಾಡಲು ಯಾವುದೇ ವರ್ಗದ ಸಹಕಾರಿ ಸಂಘಗಳ ಸಂಬಂಧವಾಗಿ ರಾಜ್ಯಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟನೆಯಿಂದ ನಿರ್ದಿಷ್ಟಪಡಿಸಬಹುದು.

**ವಿವೇಚನೆ**

ಸಹಕಾರಿ ಸಂಘದಲ್ಲಿ, ಸಾಮಾನ್ಯ ವ್ಯಕ್ತಿ ಸದಸ್ಯರು, ಸಹಕಾರಿ ಸಂಘ ಸದಸ್ಯ, ರಾಜ್ಯಸರಕಾರ ಸದಸ್ಯ, ರಾಜ್ಯದ ಸರಕಿನ ಮನೆ ಕಾರ್ಪೋರೇಶನು ಸದಸ್ಯ ಎಂದು ಸದಸ್ಯರು ಇರುವರು. ಸಾಮಾನ್ಯ ಸದಸ್ಯನು ಎಷ್ಟು ಶೇರುಗಳನ್ನು ಧಾರಣಮಾಡಬಹುದು ಎಂಬ ಬಗ್ಗೆ ಇಲ್ಲಿ ಹೇಳಲಾಗಿದೆ. ಇಲ್ಲಿ ಹೇಳಿದ ನಿರ್ಬಂಧವು ಸಹಕಾರಿ ಸಂಘ ಸದಸ್ಯ, ರಾಜ್ಯಸರಕಾರ ಸದಸ್ಯ, ಇಲ್ಲವೆ ರಾಜ್ಯದ ಸರಕಿನ ಮನೆ ಕಾರ್ಪೋರೇಶನ ಸದಸ್ಯರಿಗೆ ಅನ್ವಯಿಸುದಿಲ್ಲ. ವೈಯಕ್ತಿಕವಾಗಿ ಯಾರೂ ಹೆಚ್ಚಿನ ಲಾಭ ಇಲ್ಲವೆ ದುರ್ಲಾಭ ಪಡೆಯಬಾರದೆಂದು ವ್ಯಕ್ತಿಗಳಿಗೆ ನಿರ್ಬಂಧ ಹಾಕಲಾಗಿದೆ.

ವ್ಯಕ್ತಿಯಾಗಿದ್ದ ಯಾವುದೇ ಸಹಕಾರಿ ಸಂಘದ ಸದಸ್ಯನು ಆ ಸಂಘದ ಒಟ್ಟು ಶೇರು ಬಂಡವಲಿನ ೧/೫ ಕ್ಕಿಂತ ಹೆಚ್ಚು ಆಗದಷ್ಟು ಆಗುವ ಶೇರು ಬಂಡವಲಿನ ಭಾಗವನ್ನು ಧಾರಣಮಾಡಬಹುದು; ಅದಕ್ಕಿಂತ ಹೆಚ್ಚು ಧಾರಣಮಾಡತಕ್ಕದ್ದಲ್ಲ; ಅಥವಾ ಹಣದ ರೂಪದಲ್ಲಿ ಲೆಕ್ಕಹಾಕಿದರೆ ೧೦,೦೦೦/- ರೂಪಾಯಿಗಳಿಗೆ ಮಿಕ್ಕದಷ್ಟು ಶೇರುಗಳನ್ನು ಇಲ್ಲವೆ ಅವುಗಳಲ್ಲಿಯ ಹಿತಾಸಕ್ತಿಯನ್ನು ಪಡೆಯಬಹುದು; ಅಂದರೆ ಶೇರುಗಳ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯ ಬೆಲೆಯು ೧೦.೦೦೦/- ಮಿಕ್ಕಬಾರದು. ಈ ಎರಡು ರೀತಿಯಲ್ಲಿ ಯಾವುದು ಕಡಿಮೆಯದು ಆಗುವುದೋ ಅಷ್ಟು ಮಾತ್ರ ಧಾರಣಮಾಡಲು ವ್ಯಕ್ತಿ ಸದಸ್ಯನಿಗೆ ಅಧಿಕಾರ ಇರತಕ್ಕದ್ದು.

ಆದರೆ ಕೆಲವೊಂದು ಮಾದರಿಯ ಸಹಕಾರಿ ಸಂಘಗಳಿಗೆ ಈ ನಿರ್ಬಂಧವು ಪ್ರಗತಿದಾಯಕವಾಗಿಲ್ಲವೆಂದು ಅನ್ನಿಸುವ ಸಂಭವವಿದೆ. ಅಂತಹ ಕೆಲ ಸಹಕಾರಿ ಸಂಘಗಳ ಸಂಬಂಧವಾಗಿ ಸರಕಾರವು ಈ ನಿರ್ಬಂಧವನ್ನು ಸಡಿಲಿಸಬಹುದು. ಸಡಿಲಿಸಿದರೆ, ಶೇರು ಬಂಡವಲಿನ ೧/೫ ಕಿಂತ ಹೆಚ್ಚು ಇಲ್ಲವೆ ೧೦,೦೦೦/- ರೂಪಾಯಿಗಳಕಿಂತ ಹೆಚ್ಚಿನ ಬೆಲೆಯ ಶೇರು ಇಲ್ಲವೆ ಹಿತಾಸಕ್ತಿ ಪಡೆಯಲು

ಅನುಕೂಲವಾಗುವುದು. ಸರಕಾರದ ಈ ಪರವಾನಗಿಯು ಅಧಿಕೃತ ಗ್ಯಾಜೆಟ ದಲ್ಲಿ ಪ್ರಕಟವಾಗತಕ್ಕದ್ದು.

ಈಗ ಹಾಕಿದ ಮಿತಿ ಮೀರಬಹುದೆಂದು ಆ ಪ್ರಕಟನೆಯು ಹೇಳುವುದು ಎಷ್ಟು ಮಿತಿಯ ವರೆಗೆ ಎಂಬುದನ್ನು ಅದೇ ಪ್ರಕಟನೆಯು ಹೇಳುವುದೆಂದು ಇದರಿಂದ ಧ್ವನಿತವಾಗುವುದು. ಆಗ ಅದು ನಿರ್ಬಂಧದ ಮೇಲ್ಮಿತಿ ಎಂದು ತಿಳಿವುದು. ಅದ ಕಿಂತ ಹೆಚ್ಚು ಶೇರು ಇಲ್ಲವೆ ಹಿತಾಸಕ್ತಿ ಪಡೆಯಲು ಬರುವುದಿಲ್ಲವೆಂದು ಅರ್ಥ.

## ೨೩. ಶೇರುಗಳನ್ನು ಇಲ್ಲವೆ ಹಿತಸಂಬಂಧಗಳನ್ನು ಹಸ್ತಾಂತರಿಸಲು ನಿರ್ಬಂಧಗಳು

(೧) ಸಹಕಾರಿ ಸಂಘದ ಬಂಡವಲಿನಲ್ಲಿಯ ಸದಸ್ಯನ ಶೇರು ಇಲ್ಲವೆ ಹಿತಾ ಸಕ್ತಿಯ ಹಸ್ತಾಂತರವು ಕಲಮು ೨೨ ರಲ್ಲಿ ನಿರ್ದಿಷ್ಟಪಡಿಸಿದ ಧಾರಣದ ಮೇಲ್ಮಿ ತಿಯ ಕರಾರುಗಳ ಹಾಗೂ ನಿರ್ಬಂಧಗಳ ಅಂಕಿತವಾಗಿರತಕ್ಕದ್ದು.

(೨) ಸದಸ್ಯನಿಂದ ಮಾಡಲ್ಪಟ್ಟ ಸಹಕಾರಿ ಸಂಘದಲ್ಲಿಯ ಅವನ ಶೇರು ಇಲ್ಲವೆ ಹಿತಾಸಕ್ತಿಯ ಯಾವುದೇ ಹಸ್ತಾಂತರವು —

(ಅ) ಅಂತಹ ಶೇರು ಇಲ್ಲವೆ ಹಿತಾಸಕ್ತಿಯನ್ನು ಆ ಸದಸ್ಯನು ಒಂದು ವರುಷಕ್ಕಿಂತ ಕಡಿಮೆ ಆಗದಷ್ಟು ಕಾಲಾವಧಿ ಧಾರಣ ಮಾಡಿದ ಹೊರತು;

(ಬ) ಸಂಘದ ಸದಸ್ಯನಿಗೆ ಹಸ್ತಾಂತರ ಮಾಡಿದ ಹೊರತು; ಮತ್ತು

(ಕ) ಸಂಘದ ಕಮಿಟಿಯಿಂದ ಆ ಹಸ್ತಾಂತರವು ಒಪ್ಪಿದ ಹೊರತು, ಕಾಯಿದೇಶೀರ ಎಂದು ಆಗತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘವು ಒಂದು ವಿಶಿಷ್ಟ ತತ್ವದ ಮೇಲೆ ಒಂದು ವಿಶಿಷ್ಟ ಉದ್ದೇಶ ಕ್ಕಾಗಿ ರಚಿತವಾಗಿರುವುದರಿಂದ ಅವದಲ್ಲಿಯ ಶೇರು ಇಲ್ಲವೆ ಹಿತಾಸಕ್ತಿಯ ಹಸ್ತಾಂತರವು ಯಾವ ನಿರ್ಬಂಧವಿಲ್ಲದೆ ನಡೆದರೆ, ಸಂಘದ ಉದ್ದೇಶಗಳಿಗೆ ಸಹಕಾರಿ ತತ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿದುತ್ತದೆ. ಆದ್ದರಿಂದ ಈ ಹಸ್ತಾಂತರಕ್ಕೆ ನಿರ್ಬಂಧ ಹಾಕಲಾಗಿದೆ.

ಮೊದಲನೆಯ ನಿರ್ಬಂಧವು ಕಲಮು ೨೨ ರಲ್ಲಿ ಹೇಳಿದ ಮೇಲ್ಮಿತಿಯ ನಿರ್ಬಂಧವು. ಒಬ್ಬ ಸದಸ್ಯನು ತನ್ನ ಶೇರು ಇಲ್ಲವೆ ಹಿತಾಸಕ್ತಿಯನ್ನು ಹಸ್ತಾಂತರಿಸಬೇಕೆಂದು ಮಾಡಿದರೆ ಅದನ್ನು ಪಡೆವವನಿಗ ಒಟ್ಟಿನಲ್ಲಿ ಅವನು ಆ ಕಲಮಿನಲ್ಲಿ ಹಾಕಿದ ಮೇಲ್ಮಿತಿಯನ್ನು ಮೀರುವಷ್ಟು ಪ್ರಮಾಣದಲ್ಲಿ ಧಾರಣ ಮಾಡಿದಂತೆ ಆಗಿರಬಾರದು. ಈ ಕರಾರು ಪೂರೈಸಲ್ಪಟ್ಟಮೇಲೆ ಮುಂದಿನ ಕೆಲವು ಸಂಗತಿಗಳನ್ನು ಗಮನಿಸಬೇಕು. ಅಂದರೆ ಯಾರು ಹಸ್ತಾಂತರ ಪಡೆಯುವರೋ

ಅವನಿಗೆ ಮೊದಲು ಇದ್ದುದೆಷ್ಟು, ನಂತರ ಈ ಹಸ್ತಾಂತರದಿಂದ ಪಡೆಯುವದೆಷ್ಟು; ಎರಡೂಕೂಡಿ ಮೇಲ್ಮಿತಿಯ ಒಳಗೆ ಆಗುವದೊ ಹೇಗೆ ನೋಡಬೇಕು.

ಹಸ್ತಾಂತರ ಮಾಡುವ ವ್ಯಕ್ತಿಯು ಅದನ್ನು ಒಂದು ವರುಷದ ಕಾಲಾವಧಿಯ ವರೆಗಾದರೂ ಧಾರಣ ಮಾಡಿರಬೇಕು. ಅಂದರೆ ಬೇಕಾದಾಗ ಹಸ್ತಾಂತರ ಮಾಡಲಿಕ್ಕೆ ಬರುವುದಿಲ್ಲ ಎಂದು ಹೇಳಿದ ಹಾಗೆ; ಇಂದು ಪಡೆದು ನಾಳೆ ಹಸ್ತಾಂತರ ಮಾಡಲಿಕ್ಕೆ ಬರುವುದಿಲ್ಲ; ಹಸ್ತಾಂತರ ಮಾಡುವ ವ್ಯಕ್ತಿಯು ಅವನ್ನು ಒಂದು ವರುಷದ ವರೆಗಾದರೂ ಧಾರಣ ಮಾಡಿರಬೇಕು. ಪಡೆವವನು ಸಂಘದ ಸದಸ್ಯನೇ ಆಗಿರಬೇಕು. ಅಂದರೆ ಹೊರಗಿನವರಿಗೆ ಹಸ್ತಾಂತರ ಮಾಡಲಿಕ್ಕೆ ಬರುವುದಿಲ್ಲ. ಹಸ್ತಾಂತರ ಪಡೆವವನು ಆ ಸಂಘದ ಸದಸ್ಯನು ಆಗಿರಲಿಕ್ಕೆಬೇಕು. ಅಂದರೆ ಮೇಲ್ಮಿತಿಯ ಮಾತೂ ಅನ್ವಯಿಸುವುದು; ಸಂಬಂಧವಿಲ್ಲದವರಿಗೆ ಶೇರು ಇಲ್ಲವೆ ಹಿತಾಸಕ್ತಿ ಹೋಗಬಾರದು. ಪಡೆವವನು ಆ ಸಂಘದ ಸದಸ್ಯನಾಗಿರಲೇಬೇಕು.

ಮತ್ತು ಈ ಹಸ್ತಾಂತರವನ್ನು ಆ ಸಂಘದ ಕಮಿಟಿಯು ಒಪ್ಪಬೇಕು. ಇದು ಮುಖ್ಯವಾದುದು. ಕಾಯಿದೆಯ ಪ್ರಕಾರ ಎಲ್ಲ ಅಗತ್ಯತೆಗಳು ಪೂರೈಸಿವೆಯೋ ಎಂಬುದನ್ನು ಕಮಿಟಿ ನೋಡಿ ಅದು ಒಪ್ಪಿದನಂತರ ಹಸ್ತಾಂತರವು ನಡೆಯುವುದು.

**೨೪. ಸದಸ್ಯನ ಮರಣದ ಮೂಲಕ ಹಿತಾಸಕ್ತಿಯ ಹಸ್ತಾಂತರ**

(೧) ಸಹಕಾರಿ ಸಂಘದ ಸದಸ್ಯನು ಮರಣ ಹೊಂದಿದಾಗ ಮರಣ ಹೊಂದಿದ ಸದಸ್ಯನ ಶೇರು ಇಲ್ಲವೆ ಹಿತಾಸಕ್ತಿಯನ್ನು ಸಂಘವು—

(ಅ) ನಿಯಮಗಳ ಅನುಸಾರವಾಗಿ ನಾಮಕರಣ ಮಾಡಲ್ಪಟ್ಟ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಗೆ ಮತ್ತು ಆನಾಮಕರಣವು ಜಾರಿಯಲ್ಲಿದ್ದರೆ ಮಾತ್ರ ಹಸ್ತಾಂತ ರಿಸತಕ್ಕದ್ದು; ಇಲ್ಲವೆ

(ಬ) ಹೀಗೆ ಯಾವ ವ್ಯಕ್ತಿಯನ್ನು ನಾಮಕರಣ ಮಾಡಿರದಿದ್ದರೆ,ಇಲ್ಲವೆ ನಾಮಕರಣವು ಜಾರಿಯಲ್ಲಿ ಇರದಿದ್ದರೆ,

(i) ಮರಣ ಹೊಂದಿದ ಸದಸ್ಯನ ಶೇರು ಇಲ್ಲವೆ ಹಿತಾಸಕ್ತಿಯು ಐದು ನೂರು ರೂಪಾಯಿಗಳಿಗೆ ಮಿಕ್ಕದಿರುವಾಗ, ಮರಣಹೊಂದಿದ ಸದಸ್ಯನ ವಾರಸ ದಾರರೆಂದು ಇಲ್ಲವೆ ಕಾಯಿದೆಶೀರ ಪ್ರತಿನಿಧಿಯೆಂದು ಕಮಿಟಿಗೆ ಅನ್ನಿಸಬಹುದಾ-ದಂತಹ ವ್ಯಕ್ತಿಗಳಿಗೆ ಅವರಿಂದ ಅಗತ್ಯವಿದ್ದ ಜಾಮೀನೇದಾರರ ಸಹಿತವಾಗಿರುವ ಅಭಯಪತ್ರವನ್ನು ಮಾಡಿಕೊಟ್ಟ ನಂತರ ಹಸ್ತಾಂತರಿಸತಕ್ಕದ್ದು;

(ii) ಮರಣ ಹೊಂದಿದ ಸದಸ್ಯನ ಶೇರು ಇಲ್ಲವೆ ಹಿತಾಸಕ್ತಿಯು ಐದು ನೂರು ರೂಪಾಯಿಗಳಕಿಂತ ಹೆಚ್ಚಾದಾಗ, ಸಮರ್ಥ ನ್ಯಾಯಾಲಯದಿಂದ ದಯ ಪಾಲಿಸಲಾದ ವಾರಸಾ ಸರ್ಟಿಫಿಕೇಟನ್ನು ಇಲ್ಲವೆ ಇತರ ಕಾಯಿದೇಶೀರ ಅಧಿಕಾರ ಪತ್ರವನ್ನು ಹಾಜರು ಮಾಡುವಂತಹ ವ್ಯಕ್ತಿ ಇಲ್ಲವೆ ವ್ಯಕ್ತಿಗಳಿಗೆ ಹಸ್ತಾತರಿಸಕ್ಕದ್ದು.

ಆದರೆ, ಸಂದರ್ಭಾನುಸಾರವಾಗಿ, ಇಂತಹ ನಾಮಕರಣ ಮಾಡಲ್ಪಟ್ಟವನು ವಾರಸದಾರನು, ಇಲ್ಲವೆ ಕಾಯಿದೇಶೀರ ಪ್ರತಿನಿಧಿಯು ಸಂಘದ ಸದಸ್ಯನೆಂದು ಪ್ರವೇಶ ಕೊಡಲ್ಪಟ್ಟವನು ಆಗಿರಬೇಕು,

ಆದರೆ, ಮರಣಹೊಂದಿದ ಸದಸ್ಯನ ಸಹಕಾರಿ ಸಂಘದಲ್ಲಿಯ ಶೇರು ಇಲ್ಲವೆ ಹಿತಾಸಕ್ತಿಯನ್ನು ವಾರಸಾದಿಂದ ಇಲ್ಲವೆ ಬೇರೆ ರೀತಿಯಿಂದ ಅಲ್ಪವಯಿಯು ಇಲ್ಲವೆ ಅ-ಬಂಧುರ ಮನಸ್ಸಿನವನು ಪಡೆದುಕೊಳ್ಳಲು ಈ ಉಪಕಲಮಿನಲ್ಲಿ ಹೇಳಿದ ಯಾವುದೂ ಅಡ್ಡಿಯಾಗತಕ್ಕದ್ದಲ್ಲ.

(೨) ಉಪಕಲಮು (೧) ರಲ್ಲಿ ಯಾವುದೇ ಮಾತು ಹೇಳಲಾಗಿದ್ದರೂ ಸಂದರ್ಭಾನುಸಾರವಾಗಿ ಇಂತಹ ನಾಮಕರಣ ಮಾಡಲ್ಪಟ್ಟವನು, ವಾರಸದಾರನು ಇಲ್ಲವೆ ಕಾಯಿದೇಶೀರ ಪ್ರತಿನಿಧಿಯು ಮರಣ ಹೊಂದಿದ ಸದಸ್ಯನ ಶೇರು ಇಲ್ಲವೆ ಹಿತಾಸಕ್ತಿಯ ಬೆಲೆಯನ್ನು ನಿಯಮಗಳ ಅನುಸಾರವಾಗಿ ನಿರ್ದಿಷ್ಟಪಡಿಸಿದುದನ್ನು ತನಗೆ ಕೊಡಲು ಸಂಘವನ್ನು ಬೇಡಬಹುದು.

(೩) ಮರಣ ಹೊಂದಿದ ಸದಸ್ಯನಿಗೆ ಸಂಘದಿಂದ ಸಲ್ಲಬೇಕಾಗಿದ್ದ ಎಲ್ಲ ರಕಮುಗಳು ಸಂದರ್ಭಾನುಸಾರವಾಗಿ ಅಂತಹ ನಾಮಕರಣ ಮಾಡಲ್ಪಟ್ಟವನಿಗೆ, ವಾರಸದಾರನಿಗೆ ಇಲ್ಲವೆ ಕಾಯಿದೇಶೀರ ಪ್ರತಿನಿಧಿಗೆ, ಸಹಕಾರಿ ಸಂಘವು ಕೊಡಬಹುದು.

(೪) ಈ ಕಲಮಿನ ಶರತುಗಳ ಅನುಸಾರವಾಗಿ ಸಹಕಾರಿ ಸಂಘದಿಂದ ಮಾಡಲ್ಪಟ್ಟ ಎಲ್ಲ ಹಸ್ತಾಂತರಗಳು ಮತ್ತು ಹಣ ಸಲ್ಲಿಸುವಿಕೆಯು ಬೇರೆ ಯಾವುದೇ ವ್ಯಕ್ತಿಯಿಂದ ಸಂಘದ ಮೇಲೆ ಮಾಡಿದ ಯಾವುದೇ ಬೇಡಿಕೆಯ ವಿರುದ್ಧವಾಗಿ ಕಾಯಿದೇಶೀರ ಹಾಗೂ ಪರಿಣಾಮಕಾರಿ ಆಗಿರತಕ್ಕದ್ದು.

**ವಿವರಣೆ**

ಸಹಕಾರಿ ಸಂಘದ ಸದಸ್ಯನು ಮರಣ ಹೊಂದಿದರೆ ಅವನ ಶೇರು ಇಲ್ಲವೆ ಹಿತಾಸಕ್ತಿಯನ್ನು ಹೇಗೆ ಹಸ್ತಾಂತರಿಸಬೇಕೆಂಬ ಬಗ್ಗೆ ಈ ಕಲಮಿನಲ್ಲಿ ಹೇಳಿದೆ.

ಸದಸ್ಯನು ತನ್ನ ಮರಣದ ಪೂರ್ವದಲ್ಲಿ ಯಾರನ್ನಾದರೂ ನಾಮಕರಣ ಮಾಡಿದ್ದರೆ ಅವನ ಶೇರು ಇಲ್ಲವೆ ಹಿತಾಸಕ್ತಿಯು ಆ ಸದಸ್ಯನ ಮರಣದ ನಂತರ ಅವನು ನಾಮಕರಣ ಮಾಡಿದ ವ್ಯಕ್ತಿಯ ಹೆಸರಿಗೆ ಸಂಘವು ಹಸ್ತಾಂತರ ಮಾಡತಕ್ಕದ್ದು. ಹೀಗೆ ಹಸ್ತಾಂತರ ಮಾಡುವ ಕಾಲಕ್ಕೆ ಆ ನಾಮಕರಣವು ಜಾರಿಯಲ್ಲಿ ಇರತಕ್ಕದ್ದು. ನಾಮಕರಣ ಮಾಡದೆ ಇಲ್ಲವೆ ಮಾಡಿದ ನಾಮಕರಣವು ಜಾರಿಯಲ್ಲಿ ಇರದೆ ಇರುವಾಗ ಸದಸ್ಯನು ಮರಣ ಹೊಂದಿದರೆ ಈ ಕೆಳಗಿನಂತೆ ಹಸ್ತಾಂತರ ಮಾಡತಕ್ಕದ್ದು.

ಹಸ್ತಾಂತರ ಮಾಡತಕ್ಕ ಶೇರು ಇಲ್ಲವೆ ಹಿತಾಸಕ್ತಿಯ ಬೆಲೆಯು ೫೦೦/- ರೂಪಾಯಿಗಳಿಗೆ ಮಿಕ್ಕದಷ್ಟು ಇದ್ದರೆ, ಸಂಘದ ಕಮಿಟಿಗೆ ಅಧಿಕಾರವಿದೆ. ಮರಣ ಹೊಂದಿದ ಸದಸ್ಯನ ವಾರಸದಾರರು ಯಾರು ಎಂದು ಸಂಘದ ಕಮಿಟಿಗೆ ಕಂಡು ಬರುವುದೋ ಅಂತಹ ವಾರಸದಾರರು ಇಲ್ಲವೆ ಕಾಯಿದೇಶೀರ ಪ್ರತಿನಿಧಿಯ ಕಡೆಯಿಂದ ಜಾಮೀನು ಸಹಿತವಾಗಿ ಅಭಯ ಪತ್ರವನ್ನು ಬರೆಯಿಸಿಕೊಂಡು ಆ ವ್ಯಕ್ತಿಗಳಿಗೆ ಶೇರುಗಳನ್ನು ಇಲ್ಲವೆ ಹಿತಾಸಕ್ತಿಯನ್ನು ಹಸ್ತಾಂತರಿಸತಕ್ಕದ್ದು, ಶೇರು ಇಲ್ಲವೆ ಹಿತಾಸಕ್ತಿಯ ಬೆಲೆಯು ೫೦೦/- ರೂಪಾಯಿ ಮಿಕ್ಕಿದರೆ, ಆಗ ಸಮರ್ಥ ನ್ಯಾಯಾಲಯದಿಂದ ವಾರಸಾಪತ್ರ ಇಲ್ಲವೆ ಅಧಿಕಾರ ಪತ್ರವನ್ನು ಹಾಜರ ಪಡಿಸಿದ ಹೊರತು ಸಂಘವು ಯಾವ ವ್ಯಕ್ತಿಯ ಹೆಸರಿಗೆ ಶೇರು ಇಲ್ಲವೆ ಹಿತಾಸಕ್ತಿಯನ್ನು ಹಸ್ತಾಂತರ ಮಾಡತಕ್ಕದ್ದಲ್ಲ.

ಆದರೆ, ಹೀಗೆ ಹಸ್ತಾಂತರ ಪಡೆಯುವಂತಹ ನಾಮಕರಣ ಮಾಡಲ್ಪಟ್ಟ, ವ್ಯಕ್ತಿಯು ವಾರಸದಾರನು ಇಲ್ಲವೆ ಕಾಯಿದೇಶೀರ ಪ್ರತಿನಿಧಿಯು ಸಂಘದ ಸದಸ್ಯ ನಾಗಿ ಪ್ರವೇಶವನ್ನು ಪಡೆದಿರತಕ್ಕದ್ದು. ಹಸ್ತಾಂತರ ಪಡೆಯುವವನು ಅಲ್ಪವಯಿ ಯಾಗಿದ್ದರೆ ಇಲ್ಲವೆ ಅ-ಬಂಧುರ ಮನಸ್ಸಿನವನು ಆಗಿದ್ದರೆ, ಅದು ಯಾವ ರೀತಿ ಯಿಂದಲೂ ಅಡ್ಡಿಯಾಗತಕ್ಕದ್ದಲ್ಲವೆಂದು ಈ ಕಲಮು ಸಂರಕ್ಷಣೆ ಕೊಟ್ಟಿದೆ.

ಮರಣ ಹೊಂದಿದ ಸದಸ್ಯನ ವಾರಸದಾರ ಇಲ್ಲವೆ ಕಾಯಿದೇಶೀರ ಪ್ರತಿನಿಧಿ ಇಲ್ಲವೆ ನಾಮಕರಣ ಮಾಡಲ್ಪಟ್ಟವನು ತಾನು ಸದಸ್ಯನಾಗಲು ಇಚ್ಛಿಸದೆ ಇದ್ದರೆ ಅವನಿಗೆ ಹಸ್ತಾಂತರ ಮಾಡಲಿಕ್ಕೆ ಬರುವುದಿಲ್ಲ, ಆಗ ಆಸ್ತಿಯ ಇಲ್ಲವೆ ಹಿತಾಸ- ಕ್ತಿಯ ಬೆಲೆಯನ್ನು ಪಡೆಯಲು ಬರುವುದೆಂದು ಈ ಕಲಮು ಹೇಳುತ್ತದೆ. ಬೆಲೆ ಯನ್ನು ನಿರ್ಧರಿಸಲು ನಿಯಮಗಳು ನೆರವಾಗುವುವು. ಹೀಗೆ ನಿರ್ಧಾರವಾದ ಬೆಲೆಯ ಹಣವನ್ನು ಇಲ್ಲವೆ ಮರಣ ಹೊಂದಿದ ಸದಸ್ಯನಿಗೆ ಸಲ್ಲಿಸಬೇಕಾಗಿದ್ದ ಹಣ ವನ್ನು ಸಂದರ್ಭಾನುಸಾರವಾಗಿ ವಾರಸದಾರನಿಗೆ, ನಾಮಕರಣಮಾಡಲ್ಪಟ್ಟವನಿಗೆ ಇಲ್ಲವೆ ಕಾಯಿದೇಶೀರ ಪ್ರತಿನಿಧಿಗೆ ಸಂಘವು ಕೊಡಬಹುದು. ಒಮ್ಮೆ ಹಾಗೆ ಎಲ್ಲ ದೃಷ್ಟಿಯಿಂದ ವಿಚಾರಮಾಡಿ ಹಣವನ್ನು ಸಲ್ಲಿಸಿದ ನಂತರ ಬೇರೆ ಯಾರಾದರೂ ಬಂದು ಮರಣ ಹೊಂದಿದ ಸದಸ್ಯನ ಹೆಸರಿನಲ್ಲಿ ಬೇಡಿಕೆ ಮಂಡಿಸಿದರೆ, ಅಂತಹ ಯಾವುದೇ ಬೇಡಿಕೆಯು ಪರಿಣಾಮಕಾರಿಯಾಗುವುದಿಲ್ಲ. ಏಕೆಂದರೆ ಸಹಕಾರಿ ಸಂಘವು ಮಾಡಿದ ಹಸ್ತಾಂತರ ಇಲ್ಲವೆ ಹಣವನ್ನು ಸಲ್ಲಿಸುವುದು ಕಾಯಿದೆಬದ್ಧ ವ್ಯವಹಾರವಾಗಿರುವುದು. ಎಲ್ಲ ವಿಚಾರಣೆ ಮಾಡಿದ ನಂತರ ಮಾಡಿದ ಹಸ್ತಾಂತರಕ್ಕೆ ಕೊಟ್ಟ ರಕಮಿನ ವಿರುದ್ಧ ಬೇರೆ ಯಾರ ತಕರಾರು ನಡೆವುದಿಲ್ಲ ಎಂಬುದೇ ಇದರ ಅರ್ಥ.

## ೨೫. ಹಿಂದಿನ ಸದಸ್ಯನ ಮತ್ತು ಮರಣ ಹೊಂದಿದ ಸದಸ್ಯನ ಆಸ್ತಿಯ ಹೊಣೆಗಾರಿಕೆ

(೧) ಉಪಕಲಮು (೨) ರ ಶರತುಗಳಿಗೆ ಅಂಕಿತವಾಗಿ ಸಹಕಾರಿ ಸಂಘದ ಹಿಂದಿನಸದಸ್ಯನ ಇಲ್ಲವೆ ಮರಣ ಹೊಂದಿದ ಸದಸ್ಯನ ಆಸ್ತಿಯ ಹೊಣೆಗಾರಿಕೆಯು ಆಗ ಇದ್ದ ಸಂಘದ ಋಣಗಳ ಸಲುವಾಗಿ—

(ಅ) ಹಿಂದಿನ ಸದಸ್ಯನ ಸಂದರ್ಭದಲ್ಲಿ ಅವನು ಸದಸ್ಯನಾಗಿ ಉಳಿಯದೆ ಇದ್ದ ತಾರೀಖಿಗೆ, ಮತ್ತು

(ಬ) ಮರಣ ಹೊಂದಿದ ಸದಸ್ಯನ ಸಂದರ್ಭದಲ್ಲಿ ಅವನ ಮರಣದ ತಾರೀಖಿಗೆ ಅಂತಹ ತಾರೀಖಿನಿಂದ ಎರಡು ವರುಷಗಳ ಕಾಲಾವಧಿಯ ವರೆಗೆ ಮುಂದುವರೆಯತಕ್ಕದ್ದು.

(೨) ಕಲಮು ೭೨ ರನ್ವಯವಾಗಿ ಸಹಕಾರಿ ಸಂಘವು ದುಂಡು ಸುತ್ತಲ್ಪಡ ಬೇಕೆಂದು ಹುಕುಮು ಮಾಡಲ್ಪಟ್ಟಿರುವಾಗ ದುಂಡು ಸುತ್ತಲ್ಪಡಬೇಕೆಂಬ ಹುಕು ಮಿನ ತಾರೀಖಿನಿಂದ ತತ್‌ಕ್ಷಣ ಮುಂಚಿತ ಎರಡು ವರುಷಗಳ ಒಳಗೆ ಸದಸ್ಯನಾಗಿ ಉಳಿಯದೆ ಇದ್ದ ಸದಸ್ಯನ ಇಲ್ಲವೆ ಮರಣ ಹೊಂದಿದ ಸದಸ್ಯನ ಆಸ್ತಿಯ ಹೊಣೆ ಗಾರಿಕೆಯು ಲಿಕ್ವಿಡೇಶನ್ ಪ್ರಕರಣಗಳು ಪೂರ್ತಿಯಾಗುವ ತನಕ ಮುಂದುವರೆಯ ತಕ್ಕದ್ದು, ಆದರೆ ಇಂತಹ ಹೊಣೆಗಾರಿಕೆಯು ಆ ಸದಸ್ಯನು ಸದಸ್ಯನಾಗಿ ಉಳಿಯದೆ ಇದ್ದ ತಾರೀಖಿಗೆ ಇಲ್ಲವೆ ಸಂದರ್ಭಾನುಸಾರವಾಗಿ ಆ ಸದಸ್ಯನು ಮರಣ ಹೊಂದಿದ ತಾರೀಖಿಗೆ ಇದ್ದ ಸಂಘದ ಋಣಗಳ ಮಟ್ಟಿಗೆ ಮಾತ್ರ ವ್ಯಾಪಿಸ ತಕ್ಕದ್ದು.

**ವಿವೇಚನೆ**

ಈ ಕಲಮಿನಲ್ಲಿ ಸದಸ್ಯನು ಸದಸ್ಯನಾಗಿ ಉಳಿಯದೆ ಇದ್ದ ಸ್ಥಿತಿಯಲ್ಲಿ ಅವನ ಹೊಣೆಗಾರಿಕೆಯು ಎಷ್ಟು, ಎಷ್ಟು ಸಮಯದ ವರೆಗೆ ಎಂಬ ಬಗ್ಗೆ ಹೇಳಿದೆ. ಸದಸ್ಯನಾಗಿ ಉಳಿಯದೆ ಇರಲು ಎರಡು ದಾರಿ : ಒಂದು ಸದಸ್ಯತ್ವ ಹಿಂತೆಗೆದು ಕೊಳ್ಳುವುದು; ಇನ್ನೊಂದು ಸದಸ್ಯನಾಗಿದ್ದಾಗ ಮರಣ ಹೊಂದುವುದು. ಆದಕ್ಕೆ ಹಿಂದಿನ ಸದಸ್ಯ ಎಂದಾಗ ಸದಸ್ಯನಾಗಿ ಇದ್ದು ಸದಸ್ಯತ್ವದಿಂದ ದೂರವಾಗಿದ್ದರೂ ಬದುಕಿದ್ದ ಸದಸ್ಯ ಎಂದು ಅರ್ಥ. ಹಿಂದಿನ ಸದಸ್ಯ ಅಂದರೆ ಮರಣ ಹೊಂದಿದ ಸದಸ್ಯ ಎಂದು ಅರ್ಥ ಅಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಯಬೇಕು. ಹಿಂದಿನ ಸದಸ್ಯನು ಸ್ವತಃ ಹೊಣೆಗಾರನಾಗುತ್ತಾನೆ; ಮರಣ ಹೊಂದಿದ ಸದಸ್ಯನ ಹೊಣೆ ಗಾರಿಕೆಯು ಅವನ ಆಸ್ತಿಯ ಮೇಲೆ ಇರುವುದು. ಆದ್ದರಿಂದ ಅವೆರಡರಲ್ಲಿ ಇರುವ ಅಂತರವನ್ನು ತಿಳಿಯಬೇಕು.

ಹೊಣೆಗಾರಿಕೆ ಸದಸ್ಯನದು ಎಷ್ಟು ಎಂಬುದನ್ನು ಅವನು ಯಾವ ಮಾದರಿಯ ಸಂಘದ—ಅಂದರೆ ನಿಯಮಿತ ಇಲ್ಲವೆ ಅನಿಯಮಿತ ಹೊಣೆಗಾರಿಕೆಯ ಸಂಘದ ಸದಸ್ಯನಾಗಿದ್ದಾನೆಂಬುದರಿಂದ ಮೊದಲು ನಿರ್ಣಯವಾಗುವುದು. ಅದು ಅವನ ಹೊಣೆಗಾರಿಕೆಯ ಪರಿವ್ಯಾಪ್ತಿ.

ಅದು ಅವನು ಸದಸ್ಯನಾಗಿ ಉಳಿದಿದ್ದರೆ ಇರುವ ಹೊಣೆಗಾರಿಗೆ. ಇಲ್ಲಿ ಹೇಳಿದ ಹೊಣೆಗಾರಿಕೆಯು ಬೇರೆ ರೀತಿಯದು. ಸಂಘವು ಮುಂದುವರೆದರೂ ಸದಸ್ಯನು ಸದಸ್ಯನಾಗಿ ಉಳಿಯದೆ ಇರುವಾಗಿನ ಹೊಣೆಗಾರಿಕೆ ಇದು. ಈ ಹೊಣೆಗಾರಿಕೆಯು ಎಷ್ಟು? ಮತ್ತು ಎಷ್ಟು ಸಮಯದ ವರೆಗೆ? ಎಂಬುವು ಇಲ್ಲಿ ಬಂದಿರುವ ಪ್ರಶ್ನೆಗಳು.

ಅವನು ಸದಸ್ಯನಾಗಿ ಉಳಿಯದೆ ಇದ್ದ ತಾರೀಖು ಮುಖ್ಯವಾದುದು. ಅಂದರೆ ಸದಸ್ಯತ್ವ ಬಿಟ್ಟ ತಾರೀಖು ಇಲ್ಲವೆ ಸದಸ್ಯನು ಮರಣ ಹೊಂದಿದ ತಾರೀಖು. ಈ ತಾರೀಖಿಗೆ ಸಂಘದ ಋಣವು ಎಷ್ಟಿರುವುದೋ ಅಷ್ಟರ ಮಟ್ಟಿಗೆ ಸದಸ್ಯನ ಹೊಣೆಗಾರಿಕೆ. ಮತ್ತು ಆ ತಾರೀಖಿನಿಂದ ಮುಂದೆ ಎರಡು ವರುಷಗಳ ವರೆಗೆ ಆ ಹೊಣೆಗಾರಿಕೆಯು ಮುಂದುವರೆಯುವದು. ಋಣವು ಆ ತಾರೀಖಿಗೆ ಇರದೇ ಇದ್ದರೆ ಹೊಣೆಗಾರಿಕೆಯ ಪ್ರಶ್ನೆಯೇ ಬರುವದಿಲ್ಲ ಎಂಬುದನ್ನು ಗಮನಿಸ ಬೇಕು. ಋಣವು ಆ ತಾರೀಖಿಗೆ ಇದ್ದರೆ ಆ ಬಗ್ಗೆ ಸಂಘದ ಹೊಣೆಗಾರಿಕೆಯಲ್ಲಿ ಆ ಸದಸ್ಯನ ಹೊಣೆಗಾರಿಕೆಯು ಮುಂದೆ ಎರಡು ವರುಷಗಳ ವರೆಗೆ ಉಳಿವುದು ಈ ಎರಡು ವರುಷಗಳ ಅವಧಿಯಲ್ಲಿ ಸಂಘವು ಆ ಸದಸ್ಯನಿಂದ ಋಣದ ಸಲುವಾಗಿ ಏನನ್ನೂ ಪಡೆಯದೆ ಹೋದರೆ ಸದಸ್ಯನ ಹೊಣೆಗಾರಿಕೆ ಮುಗಿದಂತೆ. ಮುಂದೆ ಸಂಘವು ಏನೂ ಮಾಡಲು ಬಾರದು. ಸದಸ್ಯನು ಹೊಣೆಗಾರಿಕೆಯಿಂದ ಮುಕ್ತನಾದಂತೆ

ಈ ಎರಡು ವರುಷದ ಕಾಲಾವಧಿಯಲ್ಲಿ ಸಂಘವು ದುಂಡುಸುತ್ತಲ್ಪಡುವ ಪ್ರಸಂಗ ಬಂದರೆ, ಲಿಕ್ವಿಡೇಶನ ಪ್ರಕರಣಗಳು ಆ ಅವಧಿಯಲ್ಲಿ ಪ್ರಾರಂಭವಾದರೆ ಹೊಣೆಗಾರಿಕೆಯು ೨ ವರುಷಗಳ ಕಾಲಾವಧಿಗೆ ಮುಗಿಯದೆ ದುಂಡುಸುತ್ತುವ ಕಾರ್ಯ ಪೂರ್ತಿ ಮುಗಿವ ತನಕ ಹೊಣೆಗಾರಿಕೆ ಮುಂದುವರೆವುದು. ಆದ್ದರಿಂದ ಎರಡು ವರುಷದ ಕಾಲಾವಧಿಯು ಸಂಘವು ದುಂಡುಸುತ್ತಲ್ಪಡುವ ಪ್ರಸಂಗ ಬಾರದೆ ಇದ್ದರೆ ಮಾತ್ರ ಎಂಬುದನ್ನು ತಿಳಿಯಬೇಕು.

## ಪ್ರಕರಣ : ೪ ಸಹಕಾರಿ ಸಂಘಗಳ ಸಂಚಾಲನ

### ೨೬. ಸಹಕಾರಿ ಸಂಘದಲ್ಲಿ ಕೊನೆಯ ನಿರ್ಣಾಯಕ ಅಧಿಕಾರ

ಸಹಕಾರಿ ಸಂಘದಲ್ಲಿಯ ನಿರ್ಣಾಯಕ ಅಧಿಕಾರವು ಸದಸ್ಯರ ಸಾಮಾನ್ಯ ಸಭೆಯ ಅಂತರ್ಗತವಾಗಿರತಕ್ಕದ್ದು.

ಆದರೆ, ನಿಯಮಗಳಿಂದ ಇಲ್ಲವೆ ಪೋಟ ನಿಯಮಗಳಿಂದ ಸಹಕಾರಿ ಸಂಘದ ಕಮಿಟಿಯ ಇಲ್ಲವೆ ಯಾವುದೇ ಅಧಿಕಾರಿಗೆ ದಯಪಾಲಿಸಲಾದ ಅಧಿಕಾರಗಳನ್ನು ಈ ಕಲಮಿನಲ್ಲಿ ಹೇಳಿದ ಯಾವುದೂ ಬಾಧಿಸತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘಕ್ಕೆ ಒಂದು ಸಾಮಾನ್ಯ ಸಭೆ ಇರುವುದು. ಇದು ಸಂಘದ ಸದಸ್ಯರ ಸಾಮಾನ್ಯ ಸಭೆಯು. ಆ ಸಹಕಾರಿ ಸಂಘಕ್ಕೆ ಸಂಬಂಧಿಸಿದ ಯಾವುದೇ ಕೊನೆಯ ನಿರ್ಣಾಯಕ ಅಧಿಕಾರವು ಈ ಸಾಮಾನ್ಯ ಸಭೆಯ ಅಧಿಕಾರಕ್ಕೆ ಒಳ ಪಟ್ಟಿರತಕ್ಕದ್ದು. ಎಂದರೆ ಈ ಸಾಮಾನ್ಯ ಸಭೆಯು ತೆಗೆದುಕೊಂಡ ನಿರ್ಣಯದ ಮೇಲೆ ಬೇರೆ ಯಾರ ನಿರ್ಣಯವೂ ಇಲ್ಲ ಎಂಬುದು ಒಂದು ಅರ್ಥವಾದರೆ, ಅದರ ಅಧೀನವಾಗಿರುವ ಅಧಿಕಾರಿಗಳ ಹಾಗೂ ಕಮಿಟಿಯ ನಿರ್ಣಯದ ಮೇಲೆ ಕೊನೆಯ ನಿರ್ಣಯ ತೆಗೆದುಕೊಳ್ಳುವ ಅಧಿಕಾರವು ಸಾಮಾನ್ಯ ಸಭೆಗೆ ಇವೆ ಎಂದು ಇನ್ನೊಂದು ಅರ್ಥ.

ಆದರೆ ಇದಕ್ಕೆ ಒಂದು ಅಪವಾದವಿದೆ. ನಿಯಮಗಳಲ್ಲಿ ಇಲ್ಲವೆ ಪೋಟ ನಿಯಮಗಳಲ್ಲಿ ಕಮಿಟಿಯ ನಿರ್ಣಯವು ಕೊನೆಯದು; ಯಾವುದೇ ಅಧಿಕಾರಿಯ ನಿರ್ಣಯವು ಕೊನೆಯದು ಎಂದು ಹೇಳಿ ಆ ವಿಷಯಗಳ ಸಂಬಂಧವಾಗಿ ಕಮಿಟಿಗೆ ಇಲ್ಲವೆ ಆ ಅಧಿಕಾರಿಗೆ ನಿಯಮಗಳು ಇಲ್ಲವೆ ಪೋಟನಿಯಮಗಳು ಅಧಿಕಾರ ಕೊಟ್ಟಿದ್ದರೆ ಆ ಅಧಿಕಾರಕ್ಕೆ ಈ ಕಲಮಿನಿಂದ ಬಾಧೆ ಬರುವುದಿಲ್ಲ. ಹಾಗೆ ನಿಯಮಗಳು ಇಲ್ಲವೆ ಪೋಟನಿಯಮಗಳು ಹೇಳದೆ ಇದ್ದರೆ, ಕೊನೆಯ ನಿರ್ಣಯದ ಅಧಿಕಾರವು ಸಹಕಾರಿ ಸಂಘದ ಸದಸ್ಯರ ಸಾಮಾನ್ಯ ಸಭೆಯ ಅಧಿಕಾರಕ್ಕೆ ಒಳ ಪಟ್ಟಿದ್ದು ಎಂದು ತಿಳಿಯತಕ್ಕದ್ದು.

## ೨೭. ವಾರ್ಷಿಕ ಸಾಧಾರಣ ಸಭೆ

(೧) ಆ ಕಾಲಕ್ಕೆ ಜಾರಿಯಲ್ಲಿದ್ದ ನಿಯಮಗಳ ಇಲ್ಲವೆ ಪೋಟನಿಯಮಗಳ ಅನ್ವಯವಾಗಿ ಆ ವರುಷದ ಲೆಕ್ಕ ಪತ್ರಗಳನ್ನು ಪೂರ್ತಿ ಮಾಡಬೇಕೆಂದು ಗೊತ್ತು ಮಾಡಿದ ತಾರೀಖಿನಿಂದ ನಂತರ ಮೂರು ತಿಂಗಳ ಕಾಲಾವಧಿಯಲ್ಲಿ ವರುಷಕ್ಕೆ ಒಮ್ಮೆ ಸಹಕಾರಿ ಸಂಘದ ಸಾಧಾರಣ ಸಭೆಯು ಈ ಕೆಳಗಿನ ಉದ್ದೇಶಗಳಿಗಾಗಿ ಸೇರತಕ್ಕದ್ದು—

(ಅ) ಮುಂದಿನ ವರುಷಕ್ಕಾಗಿ ಕಮಿಟಿಯಿಂದ ತಯಾರಿಸಲ್ಪಟ್ಟ ಸಂಘದ ಚಟುವಟಿಕೆಗಳ ಕಾರ್ಯಕ್ರಮಕ್ಕೆ ಒಪ್ಪಿಗೆ ಕೊಡುವುದು;

(ಬ) ನಾಮಕರಣ ಮಾಡಲ್ಪಟ್ಟ ಸದಸ್ಯರನ್ನು ಬಿಟ್ಟು ಕಮಿಟಿಯ ಬೇರೆ ಸದಸ್ಯರ ಚುನಾವಣೆ ಯಾವುದಾದರೂ ಇದ್ದರೆ, ಅದನ್ನು ಗೊತ್ತು ಮಾಡಿದ ರೀತಿ ಯಲ್ಲಿ ನಡೆಸುವುದು.

(ಕ) ವಾರ್ಷಿಕ ವರದಿಯು, ತೀರ ಇತ್ತೀಚಿಗೆ ದೊರಕಿದ ಲೆಕ್ಕ ತಪಾಸಣೆ ವರದಿಯ ಸಮಾಲೋಚನೆ ಮತ್ತು ಸಿಕ್ಕ ಲಾಭದ ವಿಲೇವಾಟ; ಮತ್ತು

(ಡ) ಪೋಟ ನಿಯಮಗಳ ಅನುಸಾರವಾಗಿ ಮಂಡಿಸಬಹುದಾದ ಬೇರೆ ಯಾವುದೇ ವಿಷಯದ ಸಮಾಲೋಚನೆ.

ಆದರೆ ರಜಿಸ್ಟ್ರಾರನು ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಇಂತಹ ಸಭೆ ಸೇರುವುದರ ಕಾಲಾವಧಿಯನ್ನು ಆರು ತಿಂಗಳಿಗೆ ಮಿಕ್ಕದ ಕಾಲಾವಧಿಯಿಂದ ಹೆಚ್ಚಿಸಬಹುದು.

(೨) ಉಪಕಲಮು (೧) ರ ಶರತುಗಳ ಅನುಸಾರವಾಗಿ ಸಾಧಾರಣ ಸಭೆಯನ್ನು ಕರೆಯಲು ತಪ್ಪಿದರೆ, ಇಂತಹ ಸಭೆಯನ್ನು ಕರೆಯುವುದು ಯಾರ ಕರ್ತವ್ಯವಾಗಿದ್ದಿತೋ ಮತ್ತು ಯಾರು ಯೋಗ್ಯಕಾರಣವಿಲ್ಲದೆ ಇಂತಹ ಸಭೆಯನ್ನು ಕರೆಯಲು ತಪ್ಪಿದರೋ, ಅಂತಹ ಯಾವುದೇ ಅಧಿಕಾರಿಯನ್ನು ಇಲ್ಲವೆ ಕಮಿಟಿಯ ಸದಸ್ಯನನ್ನು ರಜಿಸ್ಟ್ರಾರನು ಹುಕುಮಿನಿಂದ, ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದಂತಹ ಮೂರು ವರುಷಗಳಲ್ಲಿ ಮಿಕ್ಕದಷ್ಟು ಕಾಲಾವಧಿಯ ವರೆಗೆ ಕಮಿಟಿಯ ಸದಸ್ಯನೆಂದು ಚುನಾಯಿಸಲ್ಪಡಲು ಇಲ್ಲವೆ ಅಧಿಕಾರಿಯಾಗಲು ಅನರ್ಹನಾಗಿದ್ದಾನೆಂದು ಘೋಷಿಸಬಹುದು ಮತ್ತು ಆ ಅಧಿಕಾರಿಯು ಸಂಘದ ಸೇವಕನಾಗಿದ್ದರೆ ಒಂದು ನೂರು ರೂಪಾಯಿಗಳಿಗೆ ಮಿಕ್ಕದಷ್ಟು ಹಣದ ದಂಡವನ್ನು ಅವನ ಮೇಲೆ ಹಾಕಬಹುದು; ಮತ್ತು ಇಂತಹ ಯಾವುದೇ ದಂಡವು ಗೊತ್ತುಮಾಡಲ್ಪಡಬಹುದಾದಂತಹ ರೀತಿಯಲ್ಲಿ ವಸೂಲ ಮಾಡಲ್ಪಡಬಹುದು.

ಆದರೆ, ಯಾರ ವಿರುದ್ಧವಾಗಿ ಈ ಹುಕುಮು ಮಾಡಲ್ಪಡುವುದಿದೆಯೋ ಆ ವ್ಯಕ್ತಿಗೆ ಅವನ ವಾದವನ್ನು ಮಂಡಿಸಲು ಯೋಗ್ಯ ಅವಕಾಶ ಕೊಟ್ಟ ಹೊರತು ಈ ಉಪಕಲಮಿನನ್ವಯವಾಗಿ ಯಾವುದೇ ಹುಕುಮನ್ನು ಮಾಡತಕ್ಕದ್ದಲ್ಲ.

**ವಿವೇಚನೆ**

ವಾರ್ಷಿಕ ಸಾಧಾರಣ ಸಭೆಯನ್ನು ಕರೆಯುವುದರ ಸಲುವಾಗಿ ವಿಧಾನವನ್ನು ಸೂಚಿಸುವುದಕ್ಕೆ ಈ ಕಲಮು ಇದೆ.

ನಿಯಮಗಳು ಇಲ್ಲವೆ ಪೋಟನಿಯಮಗಳು ಆ ಸಂಘದ ಲೆಕ್ಕಪತ್ರಗಳು ಯಾವ ತಾರೀಖಿಗೆ ಪೂರ್ತಿಗೊಳ್ಳಬೇಕೆಂದು ಹೇಳುವುವು. ಆಯಾ ಕಾಲದಕ್ಕೆ ಜಾರಿಯಲ್ಲಿದ್ದ ನಿಯಮಗಳ ಇಲ್ಲವೆ ಪೋಟನಿಯಮಗಳ ಪ್ರಕಾರ ಯಾವ ತಾರೀಖಿಗೆ ವಾರ್ಷಿಕ ಲೆಕ್ಕಪತ್ರಗಳನ್ನು ಪೂರ್ತಿಗೊಳಿಸಬೇಕೆಂದು ಗೊತ್ತುಮಾಡಿದೆಯೋ ಆ ತಾರೀಖು ಮುಖ್ಯ. ಆ ತಾರೀಖಿನಿಂದ ಮುಂದೆ ೩ ತಿಂಗಳದ ವರೆಗೆ ಸಹಕಾರಿ ಸಂಘದ ವಾರ್ಷಿಕ ಸಾಧಾರಣ ಸಭೆಯು ಸೇರತಕ್ಕದ್ದು. ಈ ಅವಧಿಯಲ್ಲಿ ಸಭೆ

ಯನ್ನು ಸೇರಿಸುವುದು ಮುಂದುರೆಯಬೇಕಾದರೆ, ರಜಿಸ್ಟ್ರಾರನ ಹುಕುಮು ಬೇಂಬ ಲಕ್ಕೆ ಇರಬೇಕು. ರಜಿಸ್ಟ್ರಾರನು ಸಾಮಾನ್ಯ ಹುಕುಮನ್ನು ಎಲ್ಲ ಸಂಘಗಳಿಗೆ ಅನ್ವಯಿಸುವಂತೆ ಹೊರಡಿಸಬಹುದು ವಿಶಿಷ್ಟವಾಗಿ ಯಾವುದೇ ಸಂಘ—ಇಲ್ಲವೆ ಸಂಘಗಳಿಗೆ ಅನ್ವಯಿಸುವಂತೆ ಹೊರಡಿಸಬಹುದು. ಅವನಾದರೂ ಆರು ತಿಂಗಳ ಮಿಕ್ಕುವಷ್ಟು ಕಾಲಾವಧಿಯನ್ನು ಮುಂದುವರೆಸಲು ಕೊಡಲು ಬರುವುದಿಲ್ಲ. ಅಂದರೆ ವಾರ್ಷಿಕ ಸಾಧಾರಣ ಸಭೆಯು ಲೆಕ್ಕಪತ್ರ ಪೂರ್ತಿಯಾಗಲು ಗೊತ್ತುಪಡಿಸಿದ ತಾರೀಖಿನಿಂದ ಮೂರು ತಿಂಗಳ ಒಳಗೆ ರಜಿಸ್ಟ್ರಾರನ ಈ ಹುಕುಮು ಇದ್ದರೆ ಮುಂದೆ ಆರು ತಿಂಗಳ ಒಳಗೆ ಸೇರಲೇಬೇಕು. ಲೆಕ್ಕಪತ್ರ ಪೂರ್ತಿಯಾದ ತಾರೀಖಿನಿಂದ ೯ ತಿಂಗಳಲ್ಲಿ ಸಭೆಯು ಯಾವುದೇ ಕಾರಣವಿದ್ದರೂ ಸೇರಲೇಬೇಕು ಎಂದು ಸ್ಪಷ್ಟವಾಯಿತು.

ರಜಿಸ್ಟ್ರಾರನ ಹುಕುಮು ಇಲ್ಲದಿದ್ದರೆ ಸಭೆಯು ೩ ತಿಂಗಳ ಒಳಗೆ ಸೇರಲೇ ಬೇಕು. ಹಾಗೆ ಸೇರುವಂತೆ ಸಭೆಯನ್ನು ಕರೆಯಬೇಕಾಗುವುದು. ರಜಿಸ್ಟ್ರಾರನು ಕಾಲಾವಧಿ ಹೆಚ್ಚಿಸಿದ್ದರೆ ಹೆಚ್ಚಿಸಿದ ಕಾಲಾವಧಿಯಲ್ಲಿ ಸಭೆಯನ್ನು ಕರೆಯಬೇಕಾಗುವುದು. ಹೀಗೆ ಸಭೆಯನ್ನು ಕರೆಯುವ ಅಧಿಕಾರಿಯು ಯಾವ ಯೋಗ್ಯ ಕಾರಣ ವಿಲ್ಲದೆ ಸಭೆಯನ್ನು ಕರೆಯುವುದನ್ನು ಬಿಡುವುದು ಅಪರಾಧವಾಗುವುದು. ಈ ಅಪರಾಧಕ್ಕಾಗಿ, ಅವನು ಸಂಘದ ಸೇವಕನಿದ್ದರೆ ಅವನಿಗೆ ೧೦೦/- ರೂಪಾಯಿಗಳ ವರೆಗೆ ದಂಡ; ಇಲ್ಲವಾದರೆ ಅವನು ಬೇರೆ ಅಧಿಕಾರಿ ಇಲ್ಲವೆ ಕಮಿಟಿಯ ಸದಸ್ಯ ನಾಗಿದ್ದರೆ ಹಾಗೆ ಅಧಿಕಾರಿಯಾಗಲು ಇಲ್ಲವೆ ಸದಸ್ಯನೆಂದು ಚುನಾಯಿಸಿಕೊಳ್ಳಲು ಅವನಿಗೆ ಅನರ್ಹತೆ ಬಂದಿದೆಯೆಂದು ರಜಿಸ್ಟ್ರಾರನು ಹುಕುಂ ಹೊರಡಿಸಿ ಘೋಷಿಸ ಬಹುದು. ಎಷ್ಟುಕಾಲ ಅನರ್ಹತೆಯು ಉಳಿಯುವುದೆಂಬುದನ್ನು ಹುಕುಂ ನಿರ್ದಿಷ್ಟ ಪಡಿಸುವುದು; ಆ ಅವಧಿ ಮೂರು ವರುಷಕ್ಕೆ ಮಿಕ್ಕಬಾರದು. ಈ ರೀತಿಯಾಗಿ ಹುಕುಮು ಹೊರಡಿಸುವ ಪ್ರಸಂಗ ಬಂದರೆ ಅಲ್ಲಿ ಇನ್ನೊಂದು ಮಾತು ಹೇಳಿದೆ. ಯಾರ ವಿರುದ್ಧ ಇಂತಹ ಅನರ್ಹತೆಯ ಇಲ್ಲವೆ ದಂಡದ ಹುಕುಮು ಹೊರಡಿಸುವುದು ಇದೆಯೋ ಅಂತಹ ವ್ಯಕ್ತಿಗೆ ತನ್ನ ವಿರುದ್ಧ ಮಂಡಿಸಿದ ಅಪಾದನೆಗಳಿಗೆ ಉತ್ತರ ಕೊಡಲು ಅವಕಾಶ ಕೊಡಬೇಕು. ಏಕೆಂದರೆ ಸಭೆಯನ್ನು ಕರೆಯದಿರಲು ಯೋಗ್ಯ ಕಾರಣಗಳಿದ್ದರೆ, ಆ ಕಾರಣಗಳು ಯೋಗ್ಯ ಕಾರಣಗಳಾಗಿವೆಯೆಂದು ಬಿಂಬಿಸಿ ತೋರಿಸಲು ಅವನಿಗೆ ಅವಕಾಶ ಕೊಡಬೇಕು. ಅವಕಾಶ ಕೊಡದೆ ಹುಕುಮು ಹೊರಡಿಸತಕ್ಕದ್ದಲ್ಲ.

ವಾರ್ಷಿಕ ಸಾಧಾರಣ ಸಭೆಯಲ್ಲಿ ಯಾವ ವಿಷಯಗಳು ಚರ್ಚೆಯಾಗಬೇಕು ಎಂಬ ಬಗ್ಗೆಯೂ ಹೇಳಿದೆ.

ಮುಂದಿನ ವರುಷವು ಸಂಘವು ಕೈಕೊಳ್ಳಬೇಕೆಂದು ಮಾಡಿದ ಕಾರ್ಯಕ್ರಮ ವನ್ನು ಕಮಿಟಿಯು ಸಿದ್ಧಮಾಡಿರುತ್ತದೆ. ಅದಕ್ಕೆ ಒಪ್ಪಿಗೆ ಕೊಡುವುದು ಸಾಧಾರಣ

ಸಭೆಯ ಕಾರ್ಯ. ಕಮಿಟಿಯಲ್ಲಿ ನಾಮಕರಣ ಸದಸ್ಯರು, ಚುನಾಯಿತ ಸದಸ್ಯರು ಇರುವರು. ಚುನಾಯಿತ ಸದಸ್ಯರ ಸ್ಥಳವು ಖಾಲಿಯಾದರೆ ಅದರ ಚುನಾವಣೆ ನಡೆಯಬೇಕು. ಗೊತ್ತುಮಾಡಿದ ರೀತಿಯಲ್ಲಿ ಅದು ನಡೆಯಬೇಕು. ಆ ಉದ್ದೇಶಕ್ಕಾಗಿ ಸಾಧಾರಣ ಸಭೆಯು ಸೇರಬೇಕಾಗುವುದು. ಆ ವಿಷಯವೂ ಸಾಧಾರಣ ಸಭೆಯ ಮುಂದೆ ಬರಬೇಕು. ವಾರ್ಷಿಕ ವರದಿ, ಲೆಕ್ಕಪತ್ರಗಳನ್ನು ತಪಾಸಿಸಿದ ಆ ಕಾಲಕ್ಕೆ ದೊರೆತ ವರದಿ ಇವುಗಳ ಸಮಾಲೋಚನೆ, ಮತ್ತು ನಿಕ್ಕಿ ಲಾಭದ ವಿಲೇವಾಟ ಹೇಗೆ ಆಗಬೇಕು ಎಂಬ ಬಗೆ ನಿರ್ಣಯ ತೆಗೆದುಕೊಳ್ಳಲು ಆ ವಿಷಯವು ಸಭೆಯ ಮುಂದೆ ಬರಬೇಕು. ಇವಲ್ಲದೆ ಪೋಟ ನಿಯಮಗಳ ಅನುಸಾರವಾಗಿ ಯಾವ ಯಾವ ವಿಷಯಗಳು ಸಾಧಾರಣ ಸಭೆಯ ಎದುರು ಬರಬೇಕೆಂದು, ಹೇಳಲಾಗಿರುವುದೋ ಅವೆಲ್ಲ ವಿಷಯಗಳೂ ಸಾಧಾರಣ ಸಭೆಯ ಎದುರು ಬರಬೇಕು.

ಸಾಧಾರಣ ಸಭೆಯೆದುರು ವಿಷಯಗಳು ಬಂದು ಚರ್ಚಿತವಾಗಿ ನಿರ್ಣಯ ಸ್ವೀಕಾರವಾದರೆ ಅದಕ್ಕೆ ಎಲ್ಲ ಬಗೆಯ ಅಧಿಕಾರ ಮುದ್ರೆ ಬಿದ್ದಂತೆ. ಸಂಘದ ಕೊನೆಯ ನಿರ್ಣಾಯಕ ಅಧಿಕಾರವು ಸಾಮಾನ್ಯ ಸಭೆಯಲ್ಲಿ ಅಂತರ್ಗತವಾಗಿದೆಯೆಂದು ಕಲಮು ೨೬ ಸಾರಿ ಹೇಳಿದೆ.

## ೨೮. ವಿಶೇಷ ಸಾಧಾರಣ ಸಭೆ

(೧) ಸಹಕಾರಿ ಸಂಘದ ಕಮಿಟಿಯು ಯಾವುದೇ ಕಾಲಕ್ಕೆ ಸಂಘದ ವಿಶೇಷ ಸಾಧಾರಣ ಸಭೆಯನ್ನು ಕರೆಯಬಹುದು ಮತ್ತು ರಜಿಸ್ಟ್ರಾರನಿಂದ ಇಲ್ಲವೆ ಗೊತ್ತು ಮಾಡಬಹುದಾದ ಇಂತಿಷ್ಟು ಸದಸ್ಯರಿಂದ ಇಲ್ಲವೆ ಒಟ್ಟು ಸಂಖ್ಯೆಯ ಇಂತಿಷ್ಟು ಪ್ರಮಾಣದ ಸದಸ್ಯರಿಂದ ಲಿಖಿತ ಬೇಡಿಕೆ ಬಂದ ನಂತರದ ಒಂದು ತಿಂಗಳಲ್ಲಿ ವಿಶೇಷ ಸಾಧಾರಣ ಸಭೆಯನ್ನು ಕಮಿಟಿಯು ಕರೆಯತಕ್ಕದ್ದು.

(೨) ಉಪಕಲಮು (೧) ರಲ್ಲಿ ಹೇಳಲಾದ ಬೇಡಿಕೆಯ ಅನುಸಾರವಾಗಿ ಸಹಕಾರಿ ಸಂಘದ ವಿಶೇಷ ಸಾಧಾರಣ ಸಭೆಯು ಕರೆಯಲ್ಪಡದಿದ್ದರೆ, ಇಂತಹ ಸಭೆಯನ್ನು ಕರೆಯಲು ರಜಿಸ್ಟ್ರಾರನಿಗೆ ಇಲ್ಲವೆ ಈ ಸಂಬಂಧದಲ್ಲಿ ಅವನಿಂದ ಅಧಿಕರಿಸಲ್ಪಟ್ಟ ಬೇರೆ ಯಾವುದೇ ವ್ಯಕ್ತಿಗೆ ಅಧಿಕಾರ ಇರತಕ್ಕದ್ದು ಮತ್ತು ಅಂತಹ ಸಭೆಯು ಕಮಿಟಿಯಿಂದ ಕರೆಯಲ್ಪಟ್ಟಿದ್ದೆಂದು ಗಣಿಸತಕ್ಕದ್ದು ಮತ್ತು ಸಂಘದ ಪೋಟನಿಯಮಗಳನ್ವಯವಾಗಿ ವಾರ್ಷಿಕ ಸಾಧಾರಣ ಸಭೆಯಲ್ಲಿ ನಡೆಯಬಹುದಾದ ಎಲ್ಲ ವ್ಯವಹಾರವು ಮತ್ತು ರಜಿಸ್ಟ್ರಾರನಿಂದ ಮಾಡಲಾದ ಬೇಡಿಕೆಯಲ್ಲಿ ವಿಶಿಷ್ಟವಾಗಿ ನಮೂದಿಸಲಾದಂತಹ ಬೇರೆ ವ್ಯವಹಾರವು ನಡೆಸಲ್ಪಡಲು ಅಧಿಕಾರ ಇರತಕ್ಕದ್ದು.

**ವಿವೇಚನೆ**

ಈ ಕಲಮು ವಿಶೇಷ ಸಾಧಾರಣ ಸಭೆಯಬಗ್ಗೆ ಇದೆ. ಸಾಧಾರಣ ಸಭೆಯು ವಾರ್ಷಿಕವಾಗಿ ಒಮ್ಮೆ ಸೇರುವುದು. ಸಾಮಾನ್ಯ ಸಾಧಾರಣ ಸಭೆಯು ಅದು. ಈ ಕಾಯಿದೆಯ ಪ್ರಕಾರ ವರುಷಕ್ಕೊಮ್ಮೆ ಕಲಮು ೨೭ ರ ಪ್ರಕಾರ ಸೇರುವ ಸಭೆಯು. ಆದರೆ, ಅದನ್ನು ಹೊರತುಪಡಿಸಿ ಬೇರೆ ಕಾಲಕ್ಕೆ ಸೇರುವ ಸಾಧಾರಣ ಸಭೆಯು ವಿಶೇಷ ಸಾಧಾರಣ ಸಭೆಯೆಂದು ಕರೆಯಲ್ಪಡುವುದು; ಇದನ್ನು ಕರೆಯುವುದಕ್ಕೆ ಎರಡು ಮಾರ್ಗಗಳು.

ಕಮಿಟಿಯು ತನಗೆ ಯೋಗ್ಯವೆನಿಸಿದಾಗ ತಾನೇ ಕರೆಯಬಹುದಾದ ವಿಶೇಷ ಸಾಧಾರಣ ಸಭೆಯು ಒಂದು ರೀತಿಯದು. ಕಮಿಟಿಯು ಕರೆಯದೆ ಇದ್ದರೆ, ರಜಿಸ್ಟ್ರಾರನಾಗಲೀ ಕೆಲವು ಸದಸ್ಯರು ಕೂಡಿ ಲಿಖಿತವಾಗಿ ಇಂತಹ ಉದ್ದೇಶಕ್ಕಾಗಿ ಈ ವಿಶೇಷ ಸಭೆಯನ್ನು ಕರೆಯಬೇಕು ಎಂದು ಬೇಡಿಕೆಯನ್ನು ಕಳಿಸಿದಾಗ ಕಮಿಟಿ ವಿಶೇಷ ಸಾಧಾರಣ ಸಭೆಯನ್ನು ಕರೆಯುವುದು ಇನ್ನೊಂದು ದಾರಿ. ಇಲ್ಲಿ ಮೊದಲನೆಯ ಪ್ರಸಂಗವಿದ್ದಾಗ ಕಮಿಟಿ **ಕರೆಯಬಹುದು** ಎಂದು ಹೇಳಿದೆ; ಎರಡನೆಯ ಪ್ರಸಂಗವಿದ್ದಾಗ **ಕರೆಯತಕ್ಕದ್ದು**, ಎಂದು ಹೇಳಿದೆ. ಮೊದಲನೆಯದು ಕಮಿಟಿಯ ವಿವೇಕಕ್ಕೆ ಸಂಬಂಧಿಸಿದ್ದುದು. ಎರಡನೆಯದು ಹಾಗಲ್ಲ. ಆದು ಆಜ್ಞೆ ಇದ್ದಂತೆ ಅದನ್ನು ಪಾಲಿಸಲೇಬೇಕು. ಅದಕ್ಕೆ ಹಾಗೆ ಬೇಡಿಕೆ ಬಂದ ತಾರೀಖಿನಿಂದ ಒಂದು ತಿಂಗಳ ಒಳಗೆ ಕರೆಯಲೇಬೇಕು ಎಂದು ಹೇಳಲಾಗಿದೆ.

ಬೇಡಿಕೆ ಕಳಿಸುವವರು ರಜಿಸ್ಟ್ರಾರ ಇಲ್ಲವೆ ಸಂಘದ ಸದಸ್ಯರು. ಸದಸ್ಯರ ಸಂಖ್ಯೆ ಎಷ್ಟಿರಬೇಕು; ಇಲ್ಲವೆ ಒಟ್ಟು ಸಂಖ್ಯೆಯಲ್ಲಿ ಎಷ್ಟು ಪ್ರಮಾಣ ಇರಬೇಕು ಎಂಬ ಬಗ್ಗೆ ನಿಯಮಗಳು ಗೊತ್ತುಮಾಡುವುವು.

ಹೀಗೆ ಬೇಡಿಕೆ ಸರಿಯಾಗಿ ಕಳಿಸಲಾದರೂ ಕಮಿಟಿಯು ವಿಶೇಷ ಸಾಧಾರಣ ಸಭೆಯನ್ನು ಕರೆಯಲು ತಪ್ಪಿದರೆ, ಆ ಸಭೆಯನ್ನು ಕರೆಯಲು ರಜಿಸ್ಟ್ರಾರನಿಗೆ ಅಧಿಕಾರವಿದೆ. ಈ ಅಧಿಕಾರವನ್ನು ರಜಿಸ್ಟ್ರಾರನು ಈ ಸಂಬಂಧವಾಗಿ ಬೇರೆ ಅಧಿಕಾರಿಗೂ ಕೊಡಬಹುದು. ಹೀಗೆ ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯು ಕರೆದ ಸಭೆಯು ಕಮಿಟಿಯು ಕರೆದ ಸಭೆಯೆಂದೇ ಗಣಿಸತಕ್ಕದ್ದು.

ವಿಶೇಷ ಸಾಧಾರಣ ಸಭೆಯಲ್ಲಿ ಯಾವ ವಿಷಯಗಳು ಚರ್ಚಿಸಲ್ಪಡಬೇಕು? ವಾರ್ಷಿಕ ಸಾಧಾರಣ ಸಭೆಯಲ್ಲಿ ಬರಬಹುದಾದ ಯಾವುದೇ ವಿಷಯವು ಚರ್ಚಿಸಲ್ಪಡಬಹುದು. ಅಲ್ಲದೆ ರಜಿಸ್ಟ್ರಾರನಿಂದ ಬೇಡಿಕೆ ಬಂದಾಗ ಆ ಬೇಡಿಕೆಯಲ್ಲಿ ಹೇಳಿದ ವಿಷಯವನ್ನು ಚರ್ಚಿಸಬಹುದು.

## ೨೯. ಸಹಕಾರಿ ಸಂಘದ ಕಮಿಟಿಗೆ ಸರಕಾರದಿಂದ ನಾಮಕರಣ ಮಾಡಲ್ಪಟ್ಟವರು

(೧) ರಾಜ್ಯ ಸರಕಾರವು—

(ಅ) ಸಹಕಾರಿ ಸಂಘದ ಶೇರು ಬಂಡವಲಿಗೆ ವಂತಿಗೆ ಸಲ್ಲಿಸಿರುವಾಗ; ಇಲ್ಲವೆ

(ಬ) ಪ್ರಕರಣ ೬ ರಲ್ಲ ಅನುಕೂಲಿಸಲಾದಂತೆ ಸಹಕಾರಿ ಸಂಘದ ಶೇರು ಬಂಡವಲಿನ ರಚನೆಯಲ್ಲಿ ಇಲ್ಲವೆ ಸಂವರ್ಧನೆಯಲ್ಲಿ ಅಪ್ರತ್ಯಕ್ಷವಾಗಿ ಸಹಾಯ ಸಲ್ಲಿಸಿದಾಗ, ಇಲ್ಲವೆ

(ಕ) ಸಹಕಾರಿ ಸಂಘವು ಹೊರಡಿಸಿದ ಡಿಬೆಂಚರುಗಳ ಮೂಲಹಣವನ್ನು ಮತ್ತು ಅದರ ಮೇಲಿನ ಬಡ್ಡಿಯನ್ನು ಕೊಡುವುದರ ಬಗ್ಗೆ ಆಶ್ವಾಸನವನ್ನು ಕೊಟ್ಟಿರುವಾಗ ಇಲ್ಲವೆ,

(ಡ) ಸಹಕಾರಿ ಸಂಘಕ್ಕೆ ಕೊಟ್ಟ ಸಾಲಗಳ ಮತ್ತು ಮುಂಗಡ ಮೂಲ ಹಣವನ್ನು ಮತ್ತು ಅದರ ಮೇಲಿನ ಬಡ್ಡಿಯನ್ನು ಕೊಡುವುದರ ಬಗ್ಗೆ ಆಶ್ವಾಸನ ಕೊಟ್ಟಿರುವಾಗ,

ಸಹಕಾರಿ ಸಂಘದ ಕಮಿಟಿಗೆ ಮೂರರಕಿಂತ ಹೆಚ್ಚು ಆಗದಷ್ಟು ಇಲ್ಲವೆ ಒಟ್ಟು ಸದಸ್ಯ ಸಂಖ್ಯೆಯ ಒಂದು ಮೂರಾಂಶದಕಿಂತ ಹೆಚ್ಚು ಆಗದಷ್ಟು ಇವೆರಡರಲ್ಲಿ ಯಾವುದು ಕಡಿಮೆ ಸಂಖ್ಯೆಯಾಗುವುದೋ ಅಷ್ಟು ಸದಸ್ಯರನ್ನು ನಾಮಕರಣ ಮಾಡಲು ರಾಜ್ಯಸರಕಾರಕ್ಕೆ ಇಲ್ಲವೆ ಈ ಸಂಬಂಧದಲ್ಲಿ ರಾಜ್ಯ ಸರಕಾರದಿಂದ ನಿರ್ದಿಷ್ಟವಾಗಿ ಅಧಿಕರಿಸಲ್ಪಟ್ಟ ಯಾವುದೇ ಅಧಿಕಾರಕ್ಕೆ ಹಕ್ಕು ಇರತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಸಹಕಾರಿ ಸಂಘದ ಕಮಿಟಿಗೆ ನಾಮಕರಣ ಮಾಡಲ್ಪಟ್ಟ ಸದಸ್ಯನು ರಾಜ್ಯಸರಕಾರದ ಇಲ್ಲವೆ ಸಂದರ್ಭಾನುಸಾರ ವಾಗಿ ನಿರ್ದಿಷ್ಟಪಡಿಸಿದ ಅಧಿಕಾರದ ಇಚ್ಛೆಯ ಕಾಲಾವಧಿಯ ವರೆಗೆ ಅಧಿಕಾರ ಪದದಲ್ಲಿ ಇರತಕ್ಕದ್ದು.

### ವಿವೇಚನೆ

ಸಹಕಾರಿ ಸಂಘದ ಕಮಿಟಿಯಲ್ಲಿ ಚುನಾಯಿತ ಸದಸ್ಯರು ಹಾಗೂ ನಾಮ ಕರಣ ಮಾಡಲ್ಪಟ್ಟ ಸದಸ್ಯರು ಇರುವರು. ನಾಮಕರಣ ಮಾಡುವ ಹಕ್ಕು ರಾಜ್ಯಸರಕಾದ್ದು. ಇಲ್ಲವೆ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ಬೇರೆ ಅಧಿಕಾರದ್ದು ಈ ನಾಮಕರಣದ ಅಧಿಕಾರ ಉಂಟಾಗಬೇಕಾದರೆ ಕೆಲವೊಂದು ಪರಿಸ್ಥಿತಿ ಉಂಟಾ ಗಿರಬೇಕು. ಅಂದರೆ ಸಹಕಾರಿ ಸಂಘಕ್ಕೆ ಸರಕಾರವು ಸಹಾಯ ಮಾಡಿದ್ದರೆ ಅದರ ಶೇರು ಬಂಡವಲಿನಲ್ಲಿ ಪಾಲು ಇದ್ದರೆ, ಅದರ ಸಾಲ-ಋಣಗಳಿಗಾ

ಆಶ್ವಾಸನ ಕೊಟ್ಟಿದ್ದರೆ, ಮಾತ್ರ ಸರಕಾರಕ್ಕೆ ನಾಮಕರಣ ಮಾಡುವ ಹಕ್ಕು ಇರುತ್ತದೆ. ಅಂದರೆ ಸರಕಾರದ ಹಿತಸಂಬಂಧ ಇದ್ದಾಗ ನಾಮಕರಣ ಮಾಡುವ ಅಧಿಕಾರ-ಹಕ್ಕು ಉಂಟಾಗುತ್ತದೆ ಎಂದು ಹೇಳಿದಂತೆ.

ಎಷ್ಟು ಸದಸ್ಯರನ್ನು ನಾಮಕರಣ ಮಾಡಬಹುದು? ಮೂರರಕಿಂತಲೂ ಹೆಚ್ಚುಆಗಬಾರದು; ಇಲ್ಲವೆ ಒಟ್ಟು ಸದಸ್ಯ ಸಂಖ್ಯೆಯು ೩ ದಕಿಂತಲೂ ಹೆಚ್ಚು ಆಗಬಾರದು. ಒಟ್ಟು ಸದಸ್ಯ ಸಂಖ್ಯೆಯ ೩ ದಷ್ಟು ಸದಸ್ಯ ಸಂಖ್ಯೆಯು ೩ ರ ಕಿಂತ ಹೆಚ್ಚಿದರೆ, ಮೂರೇ ಸದಸ್ಯರನ್ನು ನಾಮಕರಣ ಮಾಡಬೇಕಾಗುತ್ತದೆ. ೩ ದಷ್ಟು ಸದಸ್ಯರ ಸಂಖ್ಯೆಯು ಮೂರರಕಿಂತ ಕಡಿಮೆಯಾದರೆ ಆಗ ೩ ದಿಂದ ಆಗುವ ಸದಸ್ಯರಷ್ಟೇ ಸದಸ್ಯರ ನಾಮಕರಣ ಮಾಡತಕ್ಕದ್ದು. ಈ ಎರಡೂ ನಿರ್ಬಂಧಗಳನ್ನು ಸರಕಾರವು ಪಾಲಿಸಬೇಕಾಗುವುದು. ಈ ಎರಡರಲ್ಲಿ ಯಾವುದು ಕಡಿಮೆ ಸದಸ್ಯರನ್ನು ಉಂಟುಮಾಡುವುದೋ ಅಷ್ಟೇ ನಾಮಕರಣ ಮಾಡಲು ಸರಕಾರಕ್ಕೆ ಹಕ್ಕು ಇವೆ. ಹೆಚ್ಚು ಸದಸ್ಯರನ್ನು ನಾಮಕರಣ ಮಾಡಲು ಹಕ್ಕು ಇಲ್ಲ.

ಈ ನಾಮಕರಣ ಸದಸ್ಯನು ಯಾರಿಂದ ನಾಮಕರಣ ಮಾಡಲ್ಪಟ್ಟಿರುವನೋ ಅವರಿಂದ ದೂರಮಾಡಲ್ಪಡುವ ತನಕ ಅಧಿಕಾರಪದದಲ್ಲಿ ಇರತಕ್ಕದ್ದು. ಇದರಿಂದ ಎರಡು ಸಂಗತಿ ಕಂಡು ಬರುವುವು. ಈ ನಾಮಕರಣ ಸದಸ್ಯನ ಅಧಿಕಾರ ಕಾಲಾವಧಿಯು ನಿಶ್ಚಿತಗೊಳಿಸಿದ ಕಾಲಾವಧಿಯಲ್ಲ. ಮತ್ತೊಂದು ಯಾರು ನಾಮಕರಣ ಮಾಡಿರುವರೋ ಅವರೇ ಅವನನ್ನು ದೂರಮಾಡಬಲ್ಲರು ಎಂದು ಅರ್ಥ. ಆದ್ದರಿಂದ ನಾಮಕರಣ ಮಾಡಿದವರ ಇಚ್ಛೆಯೆ ಅಧಿಕಾರ ಕಾಲಾವಧಿ. ಅಂದರೆ ಈ ನಾಮಕರಣದ ಸದಸ್ಯನಿಗೆ ಸ್ವತಂತ್ರ ಅಸ್ತಿತ್ವವಿಲ್ಲ. ಸರಕಾರಕ್ಕೆ ನಾಮಕರಣ ಮಾಡುವ ಅಧಿಕಾರ ಹುಟ್ಟಬೇಕು. ನಾಮಕರಣ ಮಾಡಬೇಕು. ನಾಮಕರಣದ ಅವಶ್ಯಕತೆ ಉಳಿಯಬೇಕು. ಸರಕಾರವು ಅವನನ್ನು ದೂರಮಾಡಿರಬಾರದು. ಈ ವ್ಯಾಪ್ತಿಯಲ್ಲಿ ಅವನ ಅಧಿಕಾರ ಕಾಲಾವಧಿಯು ಉಂಟಾಗುವುದು.

## ೩೦. ಕಮಿಟಿಯ ಅಧಿಕಾರ ಹೀನತೆ (ಸುಪರ ಸೇಶನ್)

(೧) ಯಾವುದೇ ಸಹಕಾರಿ ಸಂಘದ ಕಮಿಟಿಯು ಪದೇ ಪದೇ ತಪ್ಪು ಮಾಡುತ್ತಿದೆಯೆಂದು ಇಲ್ಲವೆ ಈ ಕಾಯಿದೆಯು ಇಲ್ಲವೆ ನಿಯಮಗಳು ಇಲ್ಲವೆ ಪೋಟನಿಯಮಗಳು ಹಾಕಿಕೊಟ್ಟ ಕರ್ತವ್ಯಗಳ ನಿರ್ವಹಣೆಯಲ್ಲಿ ದುರ್ಲಕ್ಷ್ಯ ತೋರಿದೆಯೆಂದು ಇಲ್ಲವೆ ಸಂಘದ ಇಲ್ಲವೆ ಅದರ ಸದಸ್ಯರ ಹಿತಾಸಕ್ತಿಗಳಿಗೆ ವ್ಯತ್ಯಯ ಬರುವಂತೆ ಯಾವುದೇ ಕಾರ್ಯಮಾಡಿದೆಯೆಂದು ಇಲ್ಲವೆ ಬೇರೆ ರೀತಿಯಿಂದ ಅದು ಯೋಗ್ಯವಾಗಿ ಕಾರ್ಯಮಾಡುವದಿಲ್ಲವೆಂದು ರಜಿಸ್ಟ್ರಾರನ ಅಭಿಪ್ರಾಯವಾದರೆ, ಆ ಕಮಿಟಿಗೆ ತಕರಾರುಗಳನ್ನು, ಯಾವುದಾದರೂ ಇದ್ದರೆ, ಮಂಡಿಸಲು ಅವಕಾಶ

ಮಾಡಿಕೊಟ್ಟ ನಂತರ, ರಜಿಸ್ಟ್ರಾರನು ಲಿಖಿತ ಹುಕುಮಿನಿಂದ ಕಮಿಟಿಯನ್ನು ತೆಗೆದು ಹಾಕಬಹುದು; ಮತ್ತು ರಜಿಸ್ಟ್ರಾರನ ಹುಕುಮಿನಿಂದ ನಿರ್ದಿಷ್ಟಪಡಿಸಬಹುದಾ-ದಂತಹ ಎರಡು ವರುಷಗಳನ್ನು ಮಿಕ್ಕದಷ್ಟು ಕಾಲಾವಧಿ ಇಲ್ಲವೆ ಕಾಲಾವಧಿಯ ವರೆಗೆ ಸಂಘದ ವ್ಯವಹಾರಗಳನ್ನು ಸಂಚಾಲನ ಮಾಡಲು,

(ಅ) ಅದರ ಸ್ಥಳದಲ್ಲಿ ಸಂಘದ ಒಬ್ಬ ಇಲ್ಲವೆ ಹೆಚ್ಚು ಸದಸ್ಯರುಳ್ಳ ಹೊಸ ಕಮಿಟಿಯನ್ನು ನೇಮಿಸಬಹುದು, ಇಲ್ಲವೆ

(ಬ) ಸಂಘದ ಸದಸ್ಯರಾಗಿರಬೇಕಾಗಿ ಇರದೇ ಇದ್ದಂತಹ ಒಬ್ಬ ಇಲ್ಲವೆ ಹೆಚ್ಚು ಆಡಳಿತಗಾರರನ್ನು ನೇಮಿಸಬಹುದು;

ಮತ್ತು ಆ ಎರಡು ವರುಷಗಳ ಅವಧಿಯು ನಂತರ ಉಪಕಲಮು (೨)ರ ಶರತುಗಳ ಅನುಸಾರವಾಗಿ, ಹುಕುಮಿನಿಂದ ರಜಿಸ್ಟ್ರಾರನು ಕಾಲಕಾಲಕ್ಕೆ ಆ ಅವಧಿಯನ್ನು ಒಟ್ಟಿನಲ್ಲಿ ನಾಲ್ಕು ವರುಷ ಮೀರದಂತೆ ಹೆಚ್ಚಿಸಬಹುದು.

(೨) (ಅ) ಸಹಕಾರಿ ಸಂಘದ ಹಿತಾಸಕ್ತಿಗಳಿಗಾಗಿ, ಉಪಕಲಮು (೧) ರನ್ವಯವಾಗಿ ನೇಮಕವಾದ ಕಮಿಟಿಯು ಇಲ್ಲವೆ ಆಡಳಿತಗಾರರು ಅಂತಹ ಸಂಘದ ವ್ಯವಹಾರಗಳ ಸಂಚಾಲನವನ್ನು ಎರಡು ವರುಷಗಳಕಿಂತ ಹೆಚ್ಚು ಮುಂದುವರೆಸುವುದು ಆವಶ್ಯಕವೆಂದು ರಜಿಸ್ಟ್ರಾರನಿಗೆ ಕಂಡು ಬಂದರೆ, ಆ ಎರಡು ವರುಷಗಳ ಕಾಲಾವಧಿಯು ಮುಗಿಯುವ ಮುಂಚೆ ಆ ಸಂಘದ ಸಾಮಾನ್ಯ ಸಭೆಯನ್ನು ಗೊತ್ತು ಮಾಡಿದ ರೀತಿಯಲ್ಲಿ ಸೇರಿಸಿ ಮುಂದುವರೆಸಬೇಕೆಂಬ ತನ್ನ ಸೂಚನೆಯನ್ನು, ಅದಕ್ಕಾಗಿ ಇರುವ ಕಾರಣಗಳು ಸಹಿತವಾಗಿ, ರಜಿಸ್ಟ್ರಾರನು ಅದರ ಎದುರು ಮಂಡಿಸತಕ್ಕದ್ದು. ಮತ್ತು ಸಾಮಾನ್ಯ ಸಭೆಯ ಅಭಿಪ್ರಾಯಗಳನ್ನು ತಿಳಿದುಕೊಂಡು ರಜಿಸ್ಟ್ರಾರನು ತನಗೆ ಆವಶ್ಯಕ ಇಲ್ಲವೆ ಯೋಗ್ಯವೆಂದು ಕಂಡರೆ, ಆ ಎರಡು ವರುಷದ ಅವಧಿಯನ್ನು, ಒಟ್ಟಿನಲ್ಲಿ ಒಂದು ವರುಷದಕಿಂತ ಹೆಚ್ಚಾಗದ ಹಾಗೆ ಅಂತಹ ಕಾಲಾವಧಿ ಇಲ್ಲವೆ ಕಾಲಾವಧಿಗಳಿಂದ ಹೆಚ್ಚಿಸಬಹುದು.

(ಬ) ವಾಕ್ಯಾವಳಿ (ಅ) ದಲ್ಲಿ ಹೇಳಲಾದ ಮೂರು ವರುಷದ ಕಾಲಾವಧಿಯು ಮುಗಿಯುವ ಮುಂಚೆ, ಸಹಕಾರಿ ಸಂಘದ ಸಾಮಾನ್ಯ ಸಭೆಯು ಅದೇ ಸಭೆಯಲ್ಲಿ ಹಾಜರಿದ್ದ ಹಾಗೂ ಮತದಾನ ಮಾಡಿದ ಸದಸ್ಯರ ಬಹುಮತದಿಂದ ಠರಾವು ಪಾಸು ಮಾಡಿ ಉಪಕಲಮು (೧) ರನ್ವಯವಾಗಿ ನೇಮಕವಾದ ಕಮಿಟಿಯಿಂದ ಇಲ್ಲವೆ ಆಡಳಿತಗಾರರಿಂದ ಅಂತಹ ಸಂಘದ ವ್ಯವಹಾರಗಳ ಸಂಚಾಲನವು ಮೂರು ವರುಷಗಳ ನಂತರವೂ ಮುಂದುವರೆಯಬೇಕೆಂದು ಒಪ್ಪಿಗೆ ಕೊಟ್ಟರೆ ರಜಿಸ್ಟ್ರಾರನು ಆ ಮೂರು ವರುಷಗಳ ಅವಧಿಯನ್ನು ಮತ್ತೊಂದು ವರುಷದ ಕಾಲಾವಧಿಯ ವರೆಗೆ ಹೆಚ್ಚಿಸಬಹುದು.

(೩) ಹೀಗೆ ನೇಮಕವಾದ ಕಮಿಟಿ ಇಲ್ಲವೆ ಆಡಳಿತಗಾರರು ರಜಿಸ್ಟ್ರಾರನ ನಿಯಂತ್ರಣದ ಅಂಕಿತವಾಗಿ ಮತ್ತು ಅವನು ಕಾಲ ಕಾಲಕ್ಕೆ ಕೊಡಬಹುದಾದ ಆದೇಶಗಳ ಅಂಕಿತವಾಗಿ ಕಮಿಟಿಯು ಇಲ್ಲವೆ ಸಂಘದ ಯಾವುದೇ ಅಧಿಕಾರಿಯ ಎಲ್ಲ ಇಲ್ಲವೆ ಯಾವುದೇ ಕಾರ್ಯಗಳನ್ನು ನಿರ್ವಹಿಸಲು ಅಧಿಕಾರ ಇರತಕ್ಕದ್ದು. ಮತ್ತು ಸಂಘದ ಹಿತಾಸಕ್ತಿಗಳ ದೃಷ್ಟಿಯಿಂದ ಆವಶ್ಯಕವಾಗಬಹುದಾದಂತಹ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(೪) ಕಮಿಟಿಯು ಇಲ್ಲವೆ ಆಡಳಿತಗಾರರು ತನ್ನ ಇಲ್ಲವೆ ತಮ್ಮ ಅಧಿಕಾರ ಕಾಲಾವಧಿಯು ಮುಗಿಯುವಾಗ ಸಂಘದ ಪೋಟನಿಯಮಗಳ ಅನುಸಾರವಾಗಿ ಹೊಸ ಕಮಿಟಿಯ ರಚನೆಗಾಗಿ ವ್ಯವಸ್ಥೆ ಮಾಡತಕ್ಕದ್ದು.

(೫) ಉಪಕಲಮು (೧) ರನ್ವಯವಾಗಿ ಸಹಕಾರಿ ಸಂಘದ ಸಂಬಂಧವಾಗಿ ಯಾವುದೇ ಕ್ರಮವನ್ನು ತೆಗೆದುಕೊಳ್ಳುವ ಮುಂಚೆ ಸಂಘವು ಋಣಿ ಯಾಗಿರುವ ಯಾವುದೇ ಆರ್ಥಿಕ ಸಹಾಯ ಸಲ್ಲಿಸಿದ ಸಂಸ್ಥೆಯೊಡನೆ ರಜಿಸ್ಟ್ರಾರನು ವಿಚಾರವಿನಿಯಮ ಮಾಡತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘದ ಆಡಳಿತ ನಡಸುವುದಕ್ಕೆ ಒಂದು ಕಮಿಟಿ ಇರುವುದು. ಆದರೆ ಆ ಕಮಿಟಿಯು ಸರಿಯಾಗಿ ಕಾರ್ಯ ಮಾಡದೆ ಇದ್ದರೆ, ಪದೇ ಪದೇ ತಪ್ಪಿದರೆ, ಇಲ್ಲವೆ ಈ ಕಾಯಿದೆ, ನಿಯಮ ಮತ್ತು ಪೋಟನಿಯಮಗಳು ಹೇಳಿದ ಕರ್ತವ್ಯ ಮಾಡುವುದರಲ್ಲಿ ಅಲಕ್ಷ್ಯ ಮಾಡಿದರೆ, ಆ ಕಮಿಟಿ ಆಡಳಿತ ಮುಂದುವರೆಸುವುದು ಸಂಘದ ಹಿತದ ದೃಷ್ಟಿಯಿಂದ ಅಪಾಯಕಾರಕ-ಹಾನಿಕಾರಕವಾಗುವುದು. ಈ ಸ್ಥಿತಿಯು ಬಂದೊದಗಿದೆಯೆಂದೂ ಮತ್ತು ಸಂಘದ ಸದಸ್ಯರ ಹಿತಾಸಕ್ತಿಗೆ ವ್ಯತ್ಯಯ ವುಂಟಾಗಿದೆಯೆಂದು ರಜಿಸ್ಟ್ರಾರನ ಅಭಿಪ್ರಾಯವಾಗಬೇಕು. ಆಗ ಅವನು ಕಮಿಟಿಯ ಅಧಿಕಾರವನ್ನು ಕಸಿದುಕೊಳ್ಳಲು ತೊಡಗುವನು. ಅಧಿಕಾರ ಕಸಿದು ಕೊಳ್ಳುವ ಮೊದಲು ಕಮಿಟಿಗೆ ತನ್ನ ತಕರಾರು ಮಂಡಿಸಲು ಅವಕಾಶ ಮಾಡಿ ಕೊಡಬೇಕು. ನಂತರ ಆ ಕಮಿಟಿಯನ್ನು ಅಧಿಕಾರದಿಂದ ರಜಿಸ್ಟ್ರಾರನು ತೆಗೆಯಬಹುದು.

ಕಮಿಟಿಯು ಅಧಿಕಾರದಿಂದ ತೆಗೆದು ಹಾಕಲ್ಪಟ್ಟಾಗ ರಜಿಸ್ಟ್ರಾರನು ಬೇರೆ ಆಡಳಿತ ವ್ಯವಸ್ಥೆ ಮಾಡಲು ಹುಕುಮು ಹೊರಡಿಸುವನು. ಆ ಹುಕುಮಿನಲ್ಲಿ ಈ ವ್ಯವಸ್ಥೆಯು ಎಷ್ಟು ಸಮಯದ ವರೆಗೆ ನಡೆಯಬೇಕೆಂಬ ಬಗ್ಗೆ ಹೇಳಬೇಕು. ಆ ಅವಧಿಯು ೨ ವರುಷ ಮಿಕ್ಕಬಾರದು. ಹಾಗೆ ನಿರ್ದಿಷ್ಟ ಪಡಿಸಿದ ಅವಧಿಯ ವರೆಗೆ ಸಂಘದ ವ್ಯವಹಾರಗಳನ್ನು ಸಂಚಾಲನ ಮಾಡಲು ರಜಿಸ್ಟ್ರಾರನು ಒಬ್ಬ ಇಲ್ಲವೆ ಹೆಚ್ಚು ಸದಸ್ಯರ ಕಮಿಟಿಯನ್ನು ನೇಮಿಸಬಹುದು. ಈ ಸದಸ್ಯರು ಸಂಘದ

ಸದಸ್ಯರು. ಇಲ್ಲವೆ ಕಮಿಟಿಯ ನೇಮಕದ ಬದಲು ಒಬ್ಬ ಇಲ್ಲವೆ ಹೆಚ್ಚು ಆಡಳಿತಗಾರರನ್ನು ನೇಮಿಸಬಹುದು. ಈ ಆಡಳಿತಗಾರರಾಗುವವರು ಸದಸ್ಯರೇ ಆಗಿರಬೇಕೆಂದಿಲ್ಲ.

ಇದ್ದ ಕಮಿಟಿಯ ಬದಲು ಸಂಚಾಲನದ ಹೊಣೆಗಾರಿಕೆ ಪಡೆದ ಹೊಸ ಕಮಿಟಿ ಇಲ್ಲವೆ ಆಡಳಿತಗಾರರು ಕಾರ್ಯವನ್ನು ಎರಡು ವರುಷಕ್ಕಿಂತ ಹೆಚ್ಚು ಮುಂದುವರೆಸಬೇಕೆಂದು ಅವಶ್ಯವಾದರೆ ರಜಿಸ್ಟ್ರಾರನು ಮತ್ತೆ ಎರಡು ವರುಷ, ಅಂದರೆ ಒಟ್ಟಿನಲ್ಲಿ ನಾಲ್ಕು ವರುಷ ಮಿಕ್ಕದಷ್ಟು ಅವಧಿಯ ವರೆಗೆ ಮುಂದುವರಿಸಲು ಹುಕುಮು ಮಾಡಬಹುದು. ಆದರೆ ಎರಡು ವರುಷದಕಿಂತ ಅವಧಿಯನ್ನು ಹೆಚ್ಚಿಸಬೇಕಾದರೆ ವಿಧಾನವಿದೆ. ಮೊದಲು ಒಂದು ವರುಷ ಹೆಚ್ಚಿಸಬಹುದು. ಅದಕ್ಕಾಗಿ ರಜಿಸ್ಟ್ರಾರನು ಸಂಘದ ಸಾಮಾನ್ಯ ಸಭೆಯನ್ನು ಕರೆದು ಅದರ ಮುಂಡೆ ಒಂದು ಸೂಚನೆಯನ್ನು ಇಡಬೇಕು. ಅವಧಿಯನ್ನು ಹೆಚ್ಚಿಸುವ ಬಗ್ಗೆ ಕಾರಣವನ್ನು ಕೊಡಬೇಕು. ಆ ಸಾಮಾನ್ಯ ಸಭೆಯ ಅಭಿಪ್ರಾಯವನ್ನು ತಿಳಿದುಕೊಂಡು ಅವಧಿ ಹೆಚ್ಚಿಸುವುದು ಅವಶ್ಯವೆಂದು ಇಲ್ಲವೆ ಯೋಗ್ಯವೆಂದು ರಜಿಸ್ಟ್ರಾರನಿಗೆ ಅನಿಸಿದರೆ ಒಂದು ವರುಷದ ವರೆಗೆ ಆಗುವಷ್ಟು ಕಾಲಾವಧಿಯನ್ನು ಹೆಚ್ಚಿಸಬಹುದು.

ಮೂರು ವರುಷಗಳಕಿಂತಲೂ ಹೆಚ್ಚಿಗೆ ಇನ್ನೂ ಒಂದು ವರುಷಕಾಲ ಈ ಆಡಳಿತದ ಅವಧಿಯನ್ನು ಹೆಚ್ಚಿಸಬೇಕಾದರೆ ಸಾಮಾನ್ಯ ಸಭೆಯ ಒಪ್ಪಿಗೆ ಕೊಟ್ಟ ಬಗ್ಗೆ ಸಾಮಾನ್ಯ ಸಭೆಯು ಠರಾವು ಸ್ವೀಕರಿಸಬೇಕು. ಆ ನಂತರ ರಜಿಸ್ಟ್ರಾರನು ಅವಧಿಯನ್ನು ಹೆಚ್ಚಿಸಬಹುದು.

ಮೊದಲಸಲ ಕಮಿಟಿಯ ಅಧಿಕಾರ ಕಸಿದುಕೊಳ್ಳುವಾಗ ಕಮಿಟಿಯ ತಕರಾರು ಕೇಳಿಕೊಳ್ಳಬೇಕು. ನಂತರ ೨ ವರುಷ ಹೊಸ ಆಡಳಿತ ವ್ಯವಸ್ಥೆ ರಜಿಸ್ಟ್ರಾರನು ಮಾಡಬಹುದು. ಮೂರನೆಯ ವರುಷದ ಕಾಲಾವಧಿ ಬೆಳೆಸುವಾಗ ಅದನ್ನು ಸಂಘದ ಸಾಮಾನ್ಯ ಸಭೆಯೆದುರು ಮಂಡಿಸಿ ಅದರ ಅಭಿಪ್ರಾಯ ತಿಳಿದುಕೊಳ್ಳಬೇಕು. ಅಭಿಪ್ರಾಯ ಏನೇ ಇದ್ದರೂ ಅವಶ್ಯವೆನ್ನಿಸಿದರೆ ರಜಿಸ್ಟ್ರಾರನು ಅವಧಿ ಹೆಚ್ಚಿಸಬಹುದು. ಆದರೆ ನಾಲ್ಕನೆಯ ವರುಷದ ಅವಧಿಯನ್ನು ಹೆಚ್ಚಿಸಬೇಕಾದರೆ ಸಂಘದ ಸಾಮಾನ್ಯ ಸಭೆಯು ಸಮ್ಮತಿಸಿದ ಠರಾವು ಬೇಕು. ಇದರಿಂದ ರಜಿಸ್ಟ್ರಾರನ ಹಾಗೂ ಸಾಮಾನ್ಯಸಭೆಯ ಅಧಿಕಾರಗಳು ಎಷ್ಟು ಎಂಬುದು ತಿಳಿವುದು. ಹೀಗೆ ನೇಮಕವಾದ ಹೊಸ ಸಮಿತಿ ಇಲ್ಲವೆ ಆಡಳಿತಗಾರರಿಗೆ ಸಂಘದ ಕಮಿಟಿಯ ಎಲ್ಲ ಅಧಿಕಾರಗಳು ಬರುವುವು. ಈ ಹೊಸ ಕಮಿಟಿ ಇಲ್ಲವೆ ಆಡಳಿತಗಾರರ ಅಧಿಕಾರ ಕಾಲಾವಧಿಯು ಮುಗಿಯುವ ಕಾಲಕ್ಕೆ ಅವರಿಗೆ ಒಂದು ಹೊಣೆ ಇದೆ. ಸಂಘದ ಪೋಟನಿಯಮಗಳ ಅನುಸಾರವಾಗಿ ಹೊಸ ಕಮಿಟಿಯು ರಚಿತ

ವಾಗುವ ಹಾಗೆ ವ್ಯವಸ್ಥೆ ಮಾಡತಕ್ಕದ್ದು. ಅಂದರೆ ಸಂಸ್ಥೆಯು ಯಾವ ಅಂತರ ವಿಲ್ಲದೆ ನಡೆಯುವ ವ್ಯವಸ್ಥೆ ಇರಬೇಕು.

ಮೂಲತಃ ಇದ್ದ ಕಮಿಟಿಯ ಅಧಿಕಾರವನ್ನು ರಜಿಸ್ಟ್ರಾರನು ಕಸಿದುಕೊಳ್ಳ ಬೇಕೆಂದು ನಿರ್ಣಯಮಾಡುವ ಮೊದಲು ಸಂಘಕ್ಕೆ ಸಾಲಕೊಟ್ಟ ಸಂಸ್ಥೆಯೊಡನೆ ವಿಚಾರ ವಿನಿಮಯ ಮಾಡಬೇಕು. ಅಂದರೆ ಸಾಲ ಕೊಟ್ಟ ಸಂಸ್ಥೆಯ **ಹಿತಾಸಕ್ತಿ** ಯನ್ನು ರಕ್ಷಿಸುವುದು ಕರ್ತವ್ಯವಾದ್ದರಿಂದ ಅದರ ಅಭಿಪ್ರಾಯ ಏನಿದೆ ಎಂಬುದನ್ನು ತಿಳಿಯಬೇಕು.

## ೩೧. ದಾಖಲೆ ಪತ್ರ ಮುಂತಾದವುಗಳ ಸ್ವಾಧೀನತೆಯನ್ನು ಪಡೆಯುವಿಕೆ.

(೧) ಸಹಕಾರಿ ಸಂಘದ ಕಮಿಟಿಯು ಸಂಘದ ಸಾಧಾರಣ ಸಭೆಯಲ್ಲಿ ಪುನಾ ರಚಿತವಾದರೆ, ಇಲ್ಲವೆ ಕಲಮು ೩೦ ರನ್ವಯವಾಗಿ ಸಹಕಾರಿ ಸಂಘದ ಕಮಿಟಿಯು ರಜಿಸ್ಟ್ರಾರನಿಂದ ತೆಗೆದು ಹಾಕಲ್ಪಟ್ಟರೆ, ಇಲ್ಲವೆ ಕಲಮು ೭೨ ರನ್ವಯವಾಗಿ ಸಂಘವು ದುಂಡುಸತ್ತಲ್ಪಡಬೇಕೆಂದು ಹುಕುಮು ಮಾಡಲ್ಪಟ್ಟರೆ ಕಮಿಟಿಯ ನಿವೃತ್ತರಾಗುವ ಸದಸ್ಯರು ಸಂಘದ ದಾಖಲೆಪತ್ರಗಳನ್ನು ಮತ್ತು ಆಸ್ತಿಗಳನ್ನು ಸಂದರ್ಭಾನುಸಾರವಾಗಿ ಹೊಸ ಕಮಿಟಿಗೆ, ಇಲ್ಲವೆ ಆಡಳಿತಗಾರರಿಗೆ ಇಲ್ಲವೆ ಲಿಕ್ವಿಡೇಟರನಿಗೆ, ಅಧಿಕಾರವಹಿಸಿಕೊಡತಕ್ಕದ್ದು.

(೨) ನಿವೃತ್ತರಾಗುವ ಕಮಿಟಿಯ ಸದಸ್ಯರು ಅಧಿಕಾರವಹಿಸಿಕೊಡದಿದ್ದರೆ, ಇಲ್ಲವೆ ಸಂಘದ ದಾಖಲೆ ಪತ್ರಗಳ ಹಾಗೂ ಆಸ್ತಿಗಳ ಅಧಿಕಾರವನ್ನು ಹೊಸ ಕಮಿಟಿಯು ಇಲ್ಲವೆ ಆಡಳಿತಗಾರನು ಇಲ್ಲವೆ ಲಿಕ್ವಿಡೇಟರನು ವಹಿಸಿಕೊಳ್ಳುವುದನ್ನು ಯಾವುದೇ ರೀತಿಯಿಂದ ತಡೆಗಟ್ಟಿದರೆ, ಆಗ ಉಳಿದ ಯಾವುದೇ ಕ್ರಮವನ್ನು ತೆಗೆದುಕೊಳ್ಳಲು ವ್ಯತ್ಯಯ ಬಾರದೆ ಹೊಸ ಕಮಿಟಿಯು ಇಲ್ಲವೆ, ಆಡಳಿತಗಾರರು ಇಲ್ಲವೆ ಲಿಕ್ವಿಡೇಟರನು ಯಾರ ಅಧಿಕಾರ ಕ್ಷೇತ್ರದಲ್ಲಿ ಸಂಘವು ಕೆಲಸಮಾಡುತ್ತಿರು ವುದೋ ಆ ಅಧಿಕಾರ ಕ್ಷೇತ್ರದಲ್ಲಿರುವ ಮ್ಯಾಜಿಸ್ಟ್ರೇಟನಿಗೆ ಸಂಘದ ದಾಖಲೆಪತ್ರ ಗಳನ್ನು ಮತ್ತು ಆಸ್ತಿಯನ್ನು ಕೊಡಿಸಲು ಅರ್ಜಿ ಮಾಡಬಹುದು. ಹೀಗೆ ಅರ್ಜಿ ಮಾಡಲ್ಪಟ್ಟ ಮೇಲೆ ಮ್ಯಾಜಿಸ್ಟ್ರೇಟನು ವಾರಂಟದಿಂದ ಸಬ್ ಇನಸ್ಪೆಕ್ಟರನ ಸ್ಥಾನದ ಕಿಂತ ಕಡಿಮೆಯಲ್ಲದ ಸ್ಥಾನದಲ್ಲಿದ್ದ ಯಾವುದೇ ಪೋಲೀಸು ಅಧಿಕಾರಿಗೆ ಆ ದಾಖಲೆ ಪತ್ರಗಳು ಹಾಗೂ ಆಸ್ತಿಯು ಇಟ್ಟಿರುವ ಇಲ್ಲವೆ ಇಡಲ್ಪಟ್ಟಿವೆಯೆಂದು ಸಂಬಾಲದ ಸ್ಥಳವನ್ನು ಪ್ರವೇಶಮಾಡಲು ಹಾಗೂ ಶೋಧಮಾಡಲು ಮತ್ತು ಇಂತಹ ದಾಖಲೆ ಪತ್ರಗಳನ್ನು ಹಾಗೂ ಆಸ್ತಿಯನ್ನು ಜಪ್ತಮಾಡಲು ಅಧಿಕರಿಸಬಹುದು; ಮತ್ತು ಹೀಗೆ ಜಪ್ತಮಾಡಲಾದ ದಾಖಲೆಪತ್ರಗಳನ್ನು ಹಾಗೂ ಆಸ್ತಿಯನ್ನು, ಸಂದರ್ಭಾನು

ಸಾರವಾಗಿ, ಹೊಸ ಕಮಿಟಿಗೆ ಇಲ್ಲವೆ ಆಡಳಿತಗಾರರಿಗೆ ಇಲ್ಲವೆ ಲಿಕ್ವಿಡೇಟರನಿಗೆ ಒಪ್ಪಿಸಿಕೊಡತಕ್ಕದ್ದು.

ಹಳೆಯ ಕಮಿಟಿಯ ಕಾಲಾವಧಿ ಮುಗಿದು ಹೊಸ ಕಮಿಟಿಯ ರಚನೆ ಆಗಬಹುದು. ಈ ರೀತಿಯ ಪುನಾರಚನೆಯು ಕಾಲಾನುಕ್ರಮದಲ್ಲಿ ಆಗುವಂತಹದು. ಇದನ್ನು ಸಂಘದ ಸಾಧಾರಣ ಸಭೆಯಲ್ಲಿ ಮಾಡಲಾಗುವುದು. ಹೀಗೆ ಪುನಾರಚಿತವಾಗಿ ಹೊಸ ಕಮಿಟಿಯ ರಚನೆಯಾದಾಗ ಇಲ್ಲವೆ ಕಲಮು ೩೦ ರ ಪ್ರಕಾರ ಹಳೆಯ ಕಮಿಟಿಯು ತೆಗೆದು ಹಾಕಲ್ಪಟ್ಟಾಗ ಇಲ್ಲವೆ ಕಲಮು ೭೨ ರ ಪ್ರಕಾರ ಸಂಘವು ದುಂಡು ಸುತ್ತಲ್ಪಡಬೇಕೆಂದು ಹುಕುಮು ಮಾಡಲ್ಪಟ್ಟಾಗ ಹಳೆಯ ಕಮಿಟಿಯ ಬದಲು ಹೊಸ ಕಮಿಟಿ ಇಲ್ಲವೆ ಆಡಳಿತಗಾರರು ಇಲ್ಲವೆ ಲಿಕ್ವಿಡೇಟರನು ಸಂಘದ ವ್ಯವಹಾರಗಳ ಬಗ್ಗೆ ಅಧಿಕಾರ ವಹಿಸಿಕೊಳ್ಳುವರು. ಆಗ ಹಳೆಯ ಕಮಿಟಿಯವರು ದಾಖಲೆ ಪತ್ರ ಹಾಗೂ ಆಸ್ತಿಯನ್ನು ಹೊಸ ಕಮಿಟಿಗೆ ಇಲ್ಲವೆ ಆಡಳಿತಗಾರರಿಗೆ ಇಲ್ಲವೆ ಲಿಕ್ವಿಡೇಟರನಿಗೆ ಅಧಿಕಾರ ವಹಿಸಿಕೊಡತಕ್ಕದ್ದು.

ಆದರೆ, ಒಮ್ಮೊಮ್ಮೆ ಹೀಗೆ ಪ್ರಸಂಗ ಬರಬಹುದು. ನಿವೃತ್ತರಾಗುವ ಕಮಿಟಿಯ ಸದಸ್ಯರು ಅಧಿಕಾರ ವಹಿಸಿಕೊಡಲು ನಿರಾಕರಿಸಬಹುದು; ಬೇರೆ ರೀತಿಯಿಂದ ಅಡ್ಡಿ ಆತಂಕಗಳನ್ನು ಉಂಟುಮಾಡಬಹುದು. ಈ ಪ್ರಸಂಗಗಳನ್ನು ಎದುರಿಸಲು ಮತ್ತು ಅಂತಹ ಆತಂಕವೊಡ್ಡುವ ಸದಸ್ಯರ ಮೇಲೆ ಬೇರೆ ಕ್ರಮ ಕೈಕೊಳ್ಳಬಹುದಾಗಿದ್ದರೂ ಹೊಸ ಕಮಿಟಿ, ಇಲ್ಲವೆ ಆಡಳಿತಗಾರರು ಇಲ್ಲವೆ ಲಿಕ್ವಿಡೇಟರನು ಮ್ಯಾಜಿಸ್ಟ್ರೇಟನಿಗೆ ಅರ್ಜಿ ಮಾಡಬಹುದು. ಯಾರ ಅಧಿಕಾರ ಕ್ಷೇತ್ರದಲ್ಲಿ ಆ ಸಂಘವು ಕೆಲಸ ಮಾಡುತ್ತಿರುವುದೋ ಆ ಮ್ಯಾಜಿಸ್ಟ್ರೇಟನಿಗೆ ಅರ್ಜಿ ಮಾಡತಕ್ಕದ್ದು. ಅಂತಹ ಅರ್ಜಿ ಬಂದ ಮೇಲೆ ಮ್ಯಾಜಿಸ್ಟ್ರೇಟನು ವಾರಂಟು ಹೊರಡಿಸಿ ಪೋಲೀಸು ಸಬ್ ಇನ್‌ಸ್ಪೆಕ್ಟರನಿಗಿಂತ ಕೆಳಗೆ ಇರದೆ ಇರುವ ಅಧಿಕಾರಿಗೆ ಅಧಿಕಾರ ಕೊಟ್ಟು ಆ ದಾಖಲೆ ಪತ್ರಗಳನ್ನು ಆಸ್ತಿಯನ್ನು ಜಪ್ತ ಮಾಡಿಸಬಹುದು. ನಂತರ ಅವುಗಳನ್ನು ಸಂಬಂಧಪಟ್ಟ ಹೊಸ ಕಮಿಟಿಗೆ ಇಲ್ಲವೆ ಆಡಳಿತಗಾರರಿಗೆ ಇಲ್ಲವೆ ಲಿಕ್ವಿಡೇಟರನಿಗೆ ಒಪ್ಪಿಸತಕ್ಕದ್ದು.

ನಿವೃತ್ತಿಯಾಗುವವರು ಸರಲವಾಗಿ ಅಧಿಕಾರ ಹಾಗೂ ದಾಖಲೆ ಪತ್ರ ಮತ್ತು ಆಸ್ತಿಯನ್ನು ಒಪ್ಪಿಸಿಕೊಡದಿದ್ದರೆ ಮ್ಯಾಜಿಸ್ಟ್ರೇಟನ ನೆರವಿನಿಂದ ಪಡೆಯುವ ಅನುಕೂಲತೆಯನ್ನು ಈ ಕಲಮು ಒದವಿಸುವುದು. ಈ ಕ್ರಮ ಕೈಕೊಂಡ ನಂತರವೂ ನಿವೃತ್ತಿಯಾಗುವವರ ಈ ವರ್ತನಕ್ಕಾಗಿ ಬೇರೆ ಕ್ರಮವನ್ನು ಕೈಕೊಳ್ಳಬಹುದು. ಅದಕ್ಕೆ ಅವಕಾಶವಿದೆ.

## ಪ್ರಕರಣ ೫. ಸಹಕಾರಿ ಸಂಘಗಳ ಬಾಧ್ಯತೆಗಳು

### ೩೨. ಕೆಲ ಸೊತ್ತುಗಳ ಮೇಲೆ ಸಹಕಾರಿ ಸಂಘದ ಪ್ರಥಮ ಅಧಿಕಾರಭಾರ

(೧) ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಆದರೆ, ಭೂಕಂದಾಯದ ಇಲ್ಲವೆ ಭೂಕಂದಾಯದ ಹಾಗೆ ವಸೂಲ ಮಾಡಲ್ಪಡುವ ಯಾವುದೇ ಹಣದ ಸಂಬಂಧವಾಗಿ ಸರಕಾರದ ಯಾವುದೇ ಪ್ರಥಮ ಮಾಗಣಿಯು ಅಂಕಿತವಾಗಿ, ಯಾವುದೇ ಸದಸ್ಯನು ಇಲ್ಲವೆ ಹಿಂದಿನ ಸದಸ್ಯನು ಇಲ್ಲವೆ ಮರಣಹೊಂದಿದ ಸದಸ್ಯನು ಯಾವುದೇ ಋಣವನ್ನು ಇಲ್ಲವೆ ಬಾಕಿ ಹಣವನ್ನು ಸಹಕಾರಿ ಸಂಘಕ್ಕೆ ಕೊಡಬೇಕಾಗಿದ್ದರೆ, ಆ ಬಗ್ಗೆ ಸಂದರ್ಭಾನುಸಾರವಾಗಿ ಇಂತಹ ಸದಸ್ಯನ ಇಲ್ಲವೆ ಹಿಂದಿನ ಸದಸ್ಯನ ಇಲ್ಲವೆ ಮರಣಹೊಂದಿದ ಸದಸ್ಯನ ಆಸ್ತಿಯ ಭಾಗವಾಗಿದ್ದ ಬೆಳೆಯು, ಮತ್ತು ಇತರ ಒಕ್ಕಲುತನ ಹುಟ್ಟುವಳಿಯು, ದನ, ದನಕ್ಕಾಗಿ ಮೇವು, ಒಕ್ಕಲುತನದ ಇಲ್ಲವೆ ಔದ್ಯಮಿಕ ಉಪಕರಣಗಳು ಇಲ್ಲವೆ ಯಂತ್ರಗಳು, ಸಿದ್ಧ ಸರಕಿಗಾಗಿ ಕಚ್ಚಾ ಮಾಲುಗಳು ಮತ್ತು ಇಂತಹ ಕಚ್ಚಾ ಮಾಲುಗಳಿಂದ ತಯಾರಿಸಲಾದ ಸಿದ್ಧ ಸರಕುಗಳು ಇವುಗಳ ಮೇಲೆ ಸಂಘದ ಪ್ರಥಮ ಅಧಿಕಾರಭಾರ ಇರತಕ್ಕದ್ದು.

(೨) ಉಪಕಲಮು (೧)ರನ್ವಯವಾಗಿ ಅಧಿಕಾರಭಾರದ ಅಂಕಿತವಾಗಿರುವ ಯಾವುದೇ ಆಸ್ತಿಯು ಯಾವ ಸಹಕಾರಿ ಸಂಘದ ಅಧಿಕಾರಕ್ಕೆ ಆ ಆಸ್ತಿಯು ಒಳಪಟ್ಟಿರುವುದೋ ಅದರ ಲಿಖಿತ ಪರವಾನಗಿ ಇದ್ದ ಹೊರತು ಯಾವ ವ್ಯಕ್ತಿಯೂ ಹಸ್ತಾಂತರಿಸತಕ್ಕದ್ದಲ್ಲ.

(೩) ಆ ಕಾಲದಲ್ಲಿ ಜಾರಿಯಲ್ಲಿದ್ದ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಉಪಕಲಮು (೨) ರ ಶರತುಗಳಿಗೆ ವಿರುದ್ಧವಾಗಿ ಮಾಡಿದ ಆಸ್ತಿಯ ಯಾವುದೇ ಹಸ್ತಾಂತರವು ರದ್ದಾಗತಕ್ಕದ್ದು.

(೪) ಉಪಕಲಮು (೧) ರನ್ವಯವಾಗಿ ನಿರ್ಮಾಣವಾದ ಅಧಿಕಾರಭಾರವು ಸಂಘವು ಸಾಲಕೊಟ್ಟನಂತರ ಸರಕಾರವು ೧೮೮೩ (ಕೇಂದ್ರ ಕಾಯಿದೆ ಸಂ. ೧೯—೧೮೮೩) ರ ಲ್ಯಾಂಡ ಇಂಪ್ರೂವಮೆಂಟ ಲೋನ್ಸ ಆ್ಯಕ್ಟದ ಅನ್ವಯವಾಗಿ ಇಲ್ಲವೆ ೧೮೮೪ (ಕೇಂದ್ರ ಕಾಯಿದೆ ೧೨—೧೮೮೪) ರ ದಿ. ಅಗ್ರಿಕಲ್ಚರಲ್ ಲೋನ್ಸ ಆ್ಯಕ್ಟದ ಅನ್ವಯವಾಗಿ ದಯಪಾಲಿಸಿದ ಸಾಲದ ಮಾಗಣಿಯ ವಿರುದ್ಧವೂ ದೊರಕತಕ್ಕದ್ದು.

**ವಿವೇಚನೆ**

ಸಂಘಕ್ಕೆ ಸಲ್ಲಬೇಕಾಗಿದ್ದ ಸಾಲ ಇಲ್ಲವೆ ಬಾಕಿ ಹಣ ಇರುವುದು. ಇದು ಸದಸ್ಯನಿಂದ ಇಲ್ಲವೆ ಹಿಂದಿನ ಸದಸ್ಯನಿಂದ ಇಲ್ಲವೆ ಮರಣಹೊಂದಿದ ಸದಸ್ಯನಿಂದ

ಬರುವಂತಹದು ಇರುವಾಗ ಅದರ ಬಗ್ಗೆ ಯಾರ ಅಧಿಕಾರ ಪ್ರಾಥಮಿಕತೆ ಎಷ್ಟು
ಎಂಬ ಬಗ್ಗೆ ಈ ಕಲಮು ಇದೆ.

ಮೊದಲನೆಯ ಮಾತು; ಜಾರಿಯಲ್ಲಿದ್ದ ಯಾವುದೇ ಕಾಯಿದೆಯಲ್ಲಿ ಬೇ
ಏನೇ ಹೇಳಿದ್ದರೂ ಈ ಕಲಮಿನ ಮಾತುಗಳಿಗೆ ಅದು ಬಾಧೆ ತರುವುದಿಲ್ಲ. ಎರಡ
ಯದು, ಮಾಗಣಿ ಮಾಡುವವರಲ್ಲಿ ಸರಕಾರ ಹಾಗೂ ಸಹಕಾರಿಸಂಘ ಹೀ
ಇದ್ದಾಗ, ಸರಕಾರದ ಭೂಕಂದಾಯ ಇಲ್ಲವೆ ಭೂಕಂದಾಯದ ಹಾಗೆ ವಸೂ
ಆಗುವ ಹಣ ಇದಕ್ಕೆ ಪ್ರಾಶಸ್ತ್ಯ ಕೊಡತಕ್ಕದ್ದು. ನಂತರ ಸಹಕಾರಿ ಸಂಘ
ಅಧಿಕಾರ. ಸರಕಾರದ ಎಲ್ಲ ಮಾಗಣಿಗೆ ಪ್ರಾಶಸ್ತ್ಯ ಇಲ್ಲ. ಕೇವಲ ಭೂಕಂದಾಯ
ಇಲ್ಲವೆ ಭೂಕಂದಾಯದಂತೆ ವಸೂಲಿ ಮಾಡಲ್ಪಡಬೇಕಾದ ಹಣಗಳು.

ಸಹಕಾರಿ ಸಂಘವು ಮೊದಲು ಸಾಲ ಕೊಟ್ಟಿರುವಾಗ ನಂತರ ಸರಕಾರ
ಸಾಲವನ್ನು ಭೂ ಸುಧಾರಣೆ ಸಾಲದ ಕಾಯಿದೆ ಇಲ್ಲವೆ ಒಕ್ಕಲುತನ ಸಾಲ
ಕಾಯಿದೆಯ ಪ್ರಕಾರ ಸಾಲ ಕೊಟ್ಟಿದ್ದರೆ, ಆಗ ಸರಕಾರದ ಮಾಗಣಿಯ ವಿರುದ
ವಾಗಿ ಸಂಘದ ಮಾಗಣಿಯು ಪ್ರಾಥಮಿಕತೆ ಪಡೆಯುವುದು. ಆಗ ಸರಕಾರಕ
ಪ್ರಾಶಸ್ತ್ಯ ದೊರೆವುದಿಲ್ಲ.

ಈ ಅಧಿಕಾರವು ಆ ಸದಸ್ಯನ, ಇಲ್ಲವೆ ಹಿಂದಿನ ಸದಸ್ಯನ ಇಲ್ಲವೆ ಮರ
ಹೊಂದಿದ ಸದಸ್ಯನ ಆಸ್ತಿಯ ಮೇಲೆ ಭಾರಹಾಕಿದ ಅಧಿಕಾರ. ಆ ಆಸ್ತಿಯೆಂದ
ಬೆಳೆ, ಒಕ್ಕಲುತನದ ಹುಟ್ಟುವಳಿ, ದನ, ಮೇವು, ಯಂತ್ರ, ಉಪಕರಣಗಳು, ಕಚ್ಚಾ
ಮಾಲು, ಸಿದ್ಧಸರಕು ಮುಂತಾದ ಎಲ್ಲವೂ ಆಸ್ತಿ ಎನ್ನಿಸುವುದು. ಈ ಆಸ್ತಿ
ಮೇಲೆ ಸಂಘದ ಅಧಿಕಾರ ಭಾರ ಇದ್ದಾಗ ಅದನ್ನು ಹಸ್ತಾಂತರ ಮಾಡಲಾಗದ
ಮಾಡಬೇಕಾದರೆ ಲಿಖಿತ ಪರವಾನಗಿ ಬೇಕು. ಲಿಖಿತ ಪರವಾನಗಿ ಇಲ್ಲದೆ ಮಾಡಿ
ಹಸ್ತಾಂತರ ರದ್ದು.

ಸರಕಾರ, ಸಹಕಾರಿ ಸಂಘ, ಹಾಗೂ ಸಾರ್ವಜನಿಕರು ಒಬ್ಬ ವ್ಯಕ್ತಿ
ಆಸ್ತಿಯ ಮೇಲೆ ಅಧಿಕಾರ ಸ್ಥಾಪಿಸಿರುವಾಗ ಆ ವ್ಯಕ್ತಿಯು ಸಂಘದ ಸದಸ್ಯ, ಇಲ್ಲ
ಹಿಂದಿನ ಸದಸ್ಯ ಇಲ್ಲವೆ ಮರಣ ಹೊಂದಿದ ಸದಸ್ಯನಾಗಿದ್ದರೆ, ಸರಕಾರ
ಮಾಗಣಿಯು ಭೂಕಂದಾಯಕ್ಕೆ ಇಲ್ಲವೆ ಭೂಕಂದಾಯದ ಹಾಗೆ ವಸೂಲಾಗು
ಹಣಕ್ಕೆ ಸಂಬಂಧಿಸಿದ್ದರೆ ಮೊದಲ ಭಾರ ಸರಕಾರದ್ದು, ನಂತರ ಸಂಘದ್ದು. ಇಲ್ಲ
ಹೋದರೆ, ಸಂಘದ ಅಧಿಕಾರವೇ ಮೊದಲು ನಂತರ ಸರಕಾರ ಆ ನಂತರ ಸಾರ್ವ
ಜನಿಕರು ಎಂದು ಅರ್ಥವಾಗುತ್ತದೆ.

## ೩೩. ಕೆಲ ಸಹಕಾರಿ ಸಂಘಗಳಿಂದ ಸಾಲವಾಗಿ ಪಡೆಯುವ ಸದ್ಯಸರ ಒಡೆತನವಿದ್ದ ಇಲ್ಲವೆ ಬಾಡಿಗೆದಾರನೆಂದು ಧಾರಣ ಮಾಡಿದ ಭೂಮಿಯ ಮೇಲೆ ಅಧಿಕಾರ

(೧) ಈ ಕಾಯಿದೆಯಲ್ಲಿ ಇಲ್ಲವೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ—

(i) ಯಾವ ಸಹಕಾರಿ ಸಂಘದ ಸದಸ್ಯನು ಅವನು ಆಗಿರುವನೋ ಆ ಸಹಕಾರಿ ಸಂಘಕ್ಕೆ ಯಾವುದೇ ವ್ಯಕ್ತಿಯು ಸಾಲಕ್ಕಾಗಿ ಅರ್ಜಿ ಮಾಡಿದಾಗ ಅವನು ಯಾವುದೇ ಭೂಮಿಯ ಒಡೆಯನಾಗಿದ್ದರೆ, ಇಲ್ಲವೆ ಬಾಡಿಗೆದಾರನೆಂದು ಧಾರಣ ಮಾಡಿದ್ದರೆ, ಗೊತ್ತುಮಾಡಿದ ನಮೂನೆಯಲ್ಲಿ ಹೇಳಿಕೆಯನ್ನು ಕೊಡತಕ್ಕದ್ದು. ತನ್ನ ಒಡೆತನದಲ್ಲಿದ್ದ ಇಲ್ಲವೆ ತಾನು ಬಾಡಿಗೆದಾರನೆಂದು ಆಗಿರುವ ಭೂಮಿಯ ಮೇಲೆ ಅಧಿಕಾರ ಭಾರವನ್ನು ಅರ್ಜದಾರನು ನಿರ್ಮಾಣ ಮಾಡುವುದಾಗಿ ಹೇಳಿಕೆಯಲ್ಲಿ ಬರೆದಿರಬೇಕು. ಮತ್ತು ಅವನ ಅರ್ಜಿಯ ಮೂಲಕವಾಗಿ ಆ ಸದಸ್ಯನಿಗೆ ಸಂಘವು ಕೊಡಬಹುದಾದ ಸಾಲದ ಸಲುವಾಗಿ ಮತ್ತು ಸಂಘವು ನಿರ್ಧರಿಸಬಹುದಾದಂತಹ ಮೇಲ್ಮಿತಿಗೆ ಅಂಕಿತವಾಗಿ, ಆ ಸಾಲ ಹಾಗೂ ಮುಂಗಡಗಳ ಹಣದ ಮೇಲಿನ ಹಿತಾಸಕ್ತಿ ಸಹಿತವಾಗಿ, ಸದಸ್ಯನಿಗೆ ಸದಸ್ಯನೆಂದು ಸಂಘವು ಸದಸ್ಯನ ಬೇಡಿಕೆಯಂತೆ ಕೊಡಬಹುದಾದ ಎಲ್ಲ ಮುಂದಿನ ಮುಂಗಡಗಳ. ಅವು ಯಾವುದಾದರೂ ಇದ್ದರೆ, ಸಲುವಾಗಿ ಅಧಿಕಾರ ಭಾರವು ಇರುವುದೆಂದು ನಿರ್ದಿಷ್ಟಪಡಿಸತಕ್ಕದ್ದು.

(ii) ವಾಕ್ಯಾವಳಿ (೧) ರನ್ವಯವಾಗಿ ಮಾಡಲಾದ ಹೇಳಿಕೆಯು ಯಾವ ಸಂಘದ ಪರವಾಗಿ ಅಧಿಕಾರ ಭಾರವು ನಿರ್ಮಿತವಾಗಿದುವುದೋ ಆ ಸಹಕಾರಿ ಸಂಘದ ಸಮ್ಮತಿಯಿಂದ ಸದಸ್ಯನಿಂದ ಯಾವುದೇ ಕಾಲಕ್ಕೆ ಬದಲಾವಣೆ ಮಾಡಲ್ಪಡಬಹುದು;

(iii) ಸದಸ್ಯನಿಂದ ಸಾಲವಾಗಿ ತೆಗೆದುಕೊಳ್ಳಲ್ಪಟ್ಟ ಹಣ, ಅದರ ಮೇಲಿನ ಬಡ್ಡಿ ಸಹಿತವಾಗಿ ಪೂರ್ತಿಯಾಗಿ ಕೊಡಲ್ಪಡುವ ತನಕ ವಾಕ್ಯಾವಳಿ (i) ರಲ್ಲಿಯ ಹೇಳಿಕೆಯಲ್ಲಿ ನಿರ್ದಿಷ್ಟಪಡಿಸಿದ ಇಲ್ಲವೆ ವಾಕ್ಯಾವಳಿ (ii) ರಲ್ಲಿಯಂತೆ ಬದಲಾವಣೆ ಮಾಡಿದ ಭೂಮಿಯಲ್ಲಿಯ ತನ್ನ ಯಾವುದೇ ಹಿತಾಸಕ್ತಿಯನ್ನು ಇಲ್ಲವೆ ಇಡಿ ಭೂಮಿಯನ್ನು ಇಲ್ಲವೆ ಅದರ ಯಾವುದೇ ಭಾಗವನ್ನು ಯಾವುದೇ ಸದಸ್ಯನು ಹಸ್ತಾಂತರಿಸತಕ್ಕದ್ದಲ್ಲ.

ಆದರೆ, ಇಂತಹ ಭೂಮಿಯಲ್ಲಿ ಇರುವ ನಿಂತ ಬೆಳೆಯು ಸಂಘದ ಲಿಖಿತ ಪೂರ್ವ ಸಮ್ಮತಿಯಿಂದ ಹಸ್ತಾಂತರಿಸಲ್ಪಡಬಹುದು.

(iv) ವಾಕ್ಯಾವಳಿ (iii) ರ ಶರತುಗಳ ವಿರುದ್ಧವಾಗಿ ಮಾಡಲಾದ ಯಾವುದೇ ಹಸ್ತಾಂತರವು ರದ್ದಾಗತಕ್ಕದ್ದು.

(v) ಭೂಕಂದಾಯದ ಸಂಬಂಧವಾಗಿ ಇಲ್ಲವೆ ಭೂಕಂದಾಯವೆಂದು ವಸೂಲ ಮಾಡಲ್ಪಡುವ ಯಾವುದೇ ಹಣದ ಸಂಬಂಧವಾಗಿ ಸರಕಾರದ ಮೊದಲಿನ ಮಾಗಣಿಗಳ ಅಂಕಿತವಾಗಿ ಮತ್ತು ಸಂಘದಿಂದ ಸಾಲವು ದಯಪಾಲಿಸಲ್ಪಡುವ ತಾರೀಖಿನ ಮುಂಚೆ ಯಾವ ವ್ಯಕ್ತಿಯ ಪರವಾಗಿ ಆ ಭೂಮಿ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯು ಹಸ್ತಾಂತರಿತವಾಗಿ ಮತ್ತು ಯೋಗ್ಯರೀತಿಯಲ್ಲಿ ನೋಂದಣಿಯಾಗಿ ಇರುವ ಯಾವುದೇ ವ್ಯಕ್ತಿಯು ಮುಂಚಿನ ಮಾಗಣಿಗಳ ಅಂಕಿತವಾಗಿ, ವಾಕ್ಯಾವಳಿ (i) ರನ್ವಯ ಮಾಡಿದ ಹೇಳಿಕೆಯಲ್ಲಿ ನಿರ್ದಿಷ್ಟಪಡಿಸಿದ ಇಲ್ಲವೆ ವಾಕ್ಯಾವಳಿ (ii) ರನ್ವಯ ಬದಲಾವಣೆ ಮಾಡಿದಂತೆ ಇರುವ ಭೂಮಿಯ ಮೇಲೆ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯ ಮೇಲೆ ಸಾಲದ ಸಲುವಾಗಿ ಅವನಿಂದ ಸಲ್ಲಬೇಕಾಗಿದ್ದು ಹಣದ ಸಲುವಾಗಿ ಮತ್ತು ಅಷ್ಟರಮಟ್ಟಿಗೆ ಸಂಘದ ಪರವಾಗಿ ಪ್ರಥಮ ಅಧಿಕಾರಭಾರ ಇರತಕ್ಕದ್ದು.

(೨) ೧೯೫೮ (ಮೈಸೂರ ಕಾಯಿದೆ ನಂ ೧೭—೧೯೫೮) ರ ಮೈಸೂರ ಲ್ಯಾಂಡ ರಿಕಾರ್ಡ ಆಫ್ ರಾಯಿಟ್ಸ್ ಆ್ಯಕ್ಟದಲ್ಲಿ ಏನೇ ಹೇಳಲಾಗಿದ್ದರೂ—

(i) ಆ ಕಾಯಿದೆಯನ್ವಯವಾಗಿ ಇಡಲ್ಪಟ್ಟ ಹಕ್ಕುಗಳ ದಾಖಲೆಪತ್ರವು ಉಪಕಲಮು (೧) ರನ್ವಯವಾಗಿ ನಿರ್ಮಾಣವಾದ ಭೂಮಿಯ ಮೇಲಿನ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯ ಮೇಲಿನ ಪ್ರತಿಯೊಂದು ಅಧಿಕಾರಬಾರದ ವಿವರಗಳನ್ನು ಕೂಡ ಒಳಗೊಳ್ಳತಕ್ಕದ್ದು;

(ii) ಉಪಕಲಮು (೧) ರನ್ವಯವಾಗಿ ನಿರ್ಮಾಣವಾದ ಅಧಿಕಾರಭಾರದ ಬಗ್ಗೆ ಯಾರ ಪರವಾಗಿ ಅದು ಉಂಟಾಗಿರುವುದೋ ಆ ಸಹಕಾರಿ ಸಂಘವು ಅದರ ವಿವರಗಳನ್ನು ಮತ್ತು ಸಾಲವು ಮುಟ್ಟಿಸಲ್ಪಟ್ಟಾಗ ಅಧಿಕಾರ ಭಾರವು ಕಡಿಮೆಯಾಗಿದೆಯೆಂಬುದನ್ನು ಡೆಪ್ಯೂಟಿ ಕಮಿಶನರನಿಗೆ ಇಲ್ಲವೆ ಗೊತ್ತುಮಾಡಿದ ಅಧಿಕಾರಿಗೆ ತಿಳಿಸತಕ್ಕದ್ದು. ಮತ್ತು ಅವನು ಆವಶ್ಯಕವಾದ ದಾಖಲೆಗಳನ್ನು ಹಕ್ಕಿನ ದಾಖಲೆ ಪತ್ರದಲ್ಲಿ ಮಾಡಿಸತಕ್ಕದ್ದು.

(iii) ವಾಕ್ಯಾವಳಿ (i) ಮತ್ತು (ii) ರ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದರ ಸಲುವಾಗಿ ರಾಜ್ಯ ಸರಕಾರವು ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ನಿಯಮಗಳನ್ನು ಮಾಡತಕ್ಕದ್ದು.

**ವಿವರಣೆ:** ಈ ಕಲಮಿನ ಉದ್ದೇಶಕ್ಕಾಗಿ,

(೧) "ಭೂಮಿ" ಎಂದರೆ, ಯಾವುದಕ್ಕೆ ೧೯೫೮ ರ ಮೈಸೂರ ಲ್ಯಾಂಡ ರೆಕಾರ್ಡ ಆಫ್ ರಾಯಿಟ್ಸ ಆ್ಯಕ್ಟ ಅನ್ವಯಿಸುವುದೋ ಆ ಭೂಮಿ ಎಂದು ಅರ್ಥವಾಗುತ್ತದೆ. ಮತ್ತು

(೨) "ಸಹಕಾರಿ ಸಂಘ" ಎಂದರೆ, ಯಾವುದರ ಬಹುಸಂಖ್ಯಾಕ ಸದಸ್ಯರು ಒಕ್ಕಲಿಗರು ಆಗಿರುವರೋ ಅಂತಹ ಸಹಕಾರಿ ಸಂಘವೆಂದು ಮತ್ತು ಯಾವುದು—

(ಅ) ಪತ್ತಿನ ಸಂಘವಾಗಿದ್ದು ಯಾವುದರ ಪ್ರಾಥಮಿಕ ಉದ್ದೇಶವು ತನ್ನ ಸದಸ್ಯನಿಗೆ ಪತ್ತು ಒದಗಿಸಿ ಕೊಡುವುದು ಆಗಿದೆಯೋ; ಇಲ್ಲವೆ—

(ಬ) ರಾಜ್ಯ ಸರಕಾರದಿಂದ ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಈ ಸಂಬಂಧದಲ್ಲಿ ನಿರ್ದಿಷ್ಟ ಪಡಿಸಲಾದ ಬೇರೆ ಯಾವುದೇ ವರ್ಗದ ಸಂಘವು ಎಂದು ಅರ್ಥವಾಗುತ್ತದೆ.

**ವಿವೇಚನೆ**

ಸದಸ್ಯರ ಒಡೆತನದಲ್ಲಿದ್ದ ಇಲ್ಲವೆ ಅವರು ಬಾಡಿಗೆದಾರ ನಾತೆಯಿಂದ ಹಿಡಿದ ಭೂಮಿಗಳ ಮೇಲೆ, ಸದಸ್ಯರು ತೆಗೆದುಕೊಂಡ ಸಾಲದ ಬಗ್ಗೆ ಸಂಘದ ಅಧಿಕಾರ ಭಾರ ಎಷ್ಟು ಅದರ ಪ್ರಾಥಮಿಕತೆ ಏನು ಎಂಬುದನ್ನು ಹೇಗೆ ನಿರ್ಣಯಿಸಬೇಕು ಎಂಬ ಬಗ್ಗೆ ಈ ಕಲಮು ಹೇಳುವುದು.

ಸಹಕಾರಿ ಸಂಘದ ಸದಸ್ಯನು ಸಾಲಕ್ಕಾಗಿ ಅರ್ಜಿಮಾಡಿರಬೇಕು. ಆ ಸಾಲಕ್ಕಾಗಿ ಆಧಾರವೆಂದು ತೋರಿಸಲು ತನ್ನ ಒಡೆತನದಲ್ಲಿದ್ದ ಇಲ್ಲವೆ ತಾನು ಬಾಡಿಗೆಯಿಂದ ಹಿಡಿದ ಭೂಮಿಯ ಬಗ್ಗೆ ವಿವರವನ್ನು ಗೊತ್ತುಮಾಡಿದ ನಮೂನೆಯಲ್ಲಿ ಹೇಳಿರಬೇಕು. ಈ ಅರ್ಜಿ ಹಾಗೂ ಸಾಲದಬಗ್ಗೆ ಅದರ ಆಧಾರದಬಗ್ಗೆ ಇದ್ದ, ಸಾಲಕೊಟ್ಟರೆ, ಅದರ ಸಲುವಾಗಿ ಸಂಘದ ಅಧಿಕಾರ ಭಾರವನ್ನು ಉಂಟುಮಾಡುವುದಾಗಿ ಹೇಳಿರಬೇಕು. ಸದ್ಯದ ಸಾಲದ ಬಗ್ಗೆ ಅಲ್ಲದೆ ಮುಂದೆ ಸಂಘವು ಕೊಡಬಹುದಾದ ಸಾಲ, ಆ ಸಾಲಗಳ ಮೇಲಿನ ಬಡ್ಡಿಯನ್ನು ಲೆಕ್ಕಕ್ಕೆ ಹಿಡಿದು ಒಟ್ಟು ಆ ಸದಸ್ಯನು ಋಣಿಯಾಗಿರುವ ಹಾಗೂ ಆಗಬಹುದಾದ ಹಣದ ಸಲುವಾಗಿ ಆ ಭೂಮಿಯ ಮೇಲೆ ಸಹಕಾರಿ ಸಂಘದ ಅಧಿಕಾರ ಭಾರ ಇದೆಯೆಂಬುದಾಗಿ ಸಾಲ ಬೇಡಿದ ಸದಸ್ಯನು ಸ್ಪಷ್ಟಪಡಿಸಬೇಕು. ಸಂಘವು ಸದಸ್ಯನಿಗೆ ಕೊಡುವ ಸಾಲಕ್ಕೆ ಒಂದು ಮಿತಿಯಿದೆ ಆ ಮೇಲ್ಮಿತಿಯನ್ನು ಲಕ್ಷಿಸಿ ಸಾಲ ಬೇಡಬೇಕು;

ಹೀಗೆ ಸಂಘದ ಅಧಿಕಾರ ಭಾರವು ಸದಸ್ಯನು ಆಧಾರವಾಗಿ ತೋರಿದ ಭೂಮಿ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯ ಬಗ್ಗೆ ಹೇಳಿಕೆ ಕೊಟ್ಟುದನ್ನು ಆ ಸಹಕಾರಿ ಸಂಘದ ಪರವಾನಗಿಯಿಂದ ಬದಲಾವಣೆ ಮಾಡಬಹುದು. ಈ ಬದಲಾವಣೆಯು ಭೂಮಿಯ ವ್ಯಾಪ್ತಿಯ ಬಗ್ಗೆ ಇಲ್ಲವೆ ಸಂಘದ ಭಾರದ ಬಗ್ಗೆ ಇರಬಹುದು. ಹೀಗೆ ಒಮ್ಮೆ ಆಧಾರವಾಗಿ ಕೊಟ್ಟ ಭೂಮಿಯನ್ನು ಇಲ್ಲವೆ ಅದರಲ್ಲಿಯ ಹಿತಾಸಕ್ತಿಯನ್ನು ಆ ಸಾಲದ ಹಣ, ಅದರ ಮೇಲಿನ ಬಡ್ಡಿ ಪೂರ್ತಿ ಮುಟ್ಟುವತನಕ ಯಾವ ಸದಸ್ಯನು ಯಾರಿಗೂ ಹಸ್ತಾಂತರ ಮಾಡತಕ್ಕದ್ದಲ್ಲ. ಆಧಾರವಾಗಿದ್ದುದನ್ನು ತಪ್ಪಿಸಿದಂತೆ

ಆಗುವುದು ಈ ಹಸ್ತಾಂತರ; ಆದ್ದರಿಂದ ಹಸ್ತಾಂತರಕ್ಕೆ ನಿರ್ಬಂಧವಿದೆ. ಈ ಹಸ್ತಾಂತರದ ನಿರ್ಬಂಧವು ನಿಂತ ಬೆಳೆಗೆ ಅನ್ವಯಿಸುವುದಿಲ್ಲ. ನಿಂತ ಬೆಳೆಯನ್ನು ಹಸ್ತಾಂತರ ಮಾಡಬೇಕಾದರೆ, ಸಂಘದಿಂದ ಲಿಖಿತ ಪೂರ್ವಸಮ್ಮತಿಯನ್ನು ಪಡೆದಿರಬೇಕು. ಈ ಎಲ್ಲ ಮಾತುಗಳನ್ನು ಲಕ್ಷ್ಯಕ್ಕೆ ತಾರದೆ, ವಿರುದ್ಧವಾಗಿ ವರ್ತಿಸಿ ಮಾಡಿದ ಎಲ್ಲ ಹಸ್ತಾಂತರಗಳು ರದ್ದು ಆಗುತ್ತವೆ.

ಸಹಕಾರಿ ಸಂಘದ ಸದಸ್ಯನಾಗಿದ್ದ ವ್ಯಕ್ತಿಯು ಸರಕಾರಕ್ಕೆ ಹಾಗೂ ಸಾರ್ವಜನಿಕರಲ್ಲಿಯ ಜನರಿಗೆ ಋಣಿಯಾಗಿರುವ ಸಂಭವವಿದೆ. ಆಗ ಸಂಘದ ಸ್ಥಾನಮಾನವೇನು? ಈ ಬಗ್ಗೆ ಕೆಲವೊಂದು ಮಾತುಗಳಲ್ಲಿ ಕಲಯು ೩೨ ರಲ್ಲಿ ಹೇಳಿದೆ. ಇಲ್ಲಿ ಕೆಲವು ಮಾತುಗಳನ್ನು ಸ್ಪಷ್ಟಪಡಿಸಲಾಗಿದೆ. ಈ ಕಲಮಿನಲ್ಲಿ ಸಾಲ ಪಡೆವಾಗ ಆಧಾರವಾಗಿ ಕೊಟ್ಟ ಭೂಮಿ ಮತ್ತು ಅದರಲ್ಲಿಯ ಹಿತಾಸಕ್ತಿಯ ಸಲುವಾಗಿ ಹೇಳಿದೆ. ಇಲ್ಲಿ ಒಂದು ಮಾತು ಹೇಳಲಾಗುತ್ತಿದೆ. ಸರಕಾರದ ಭೂಕಂದಾಯ ಇಲ್ಲವೆ ಭೂಕಂದಾಯದಂತೆ ವಸೂಲ ಮಾಡಲ್ಪಡುವ ಹಣದ ಬಗ್ಗೆ ಇರುವ ಮಾಗಣಿಗಳು ಸಂಘವು ಸಾಲ ಕೊಟ್ಟ ತಾರೀಖಿನಕಿಂತ ಮೊದಲಿನ ಮಾಗಣಿಗಳು ಇರಬೇಕು. ಅದರಂತೆ ಸಾರ್ವಜನಿಕರಲ್ಲಿ ಯಾರಾದರೂ ಆ ಭೂಮಿ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯನ್ನು ಸಂಘವು ಸಾಲ ಕೊಟ್ಟ ತಾರೀಖಿನಕಿಂತ ಮೊದಲು ಪಡೆದಿದ್ದು ಆ ಹಸ್ತಾಂತರವು ನೋಂದಣಿಯಾಗಿದ್ದು ಇರಬೇಕು. ಅಂದಾಗ ಸಂಘದ ಅಧಿಕಾರ ಭಾರದಕಿಂತ ಮೊದಲು ಸರಕಾರದ ಮಾಗಣಿಯ ಭಾರ, ಮತ್ತು ನೋಂದಾಯಿಸಲಾದ ಹಸ್ತಾಂತರದಿಂದ ಉಂಟಾದ ಮಾಗಣಿಯ ಭಾರ. ಅನಂತರ ಸಂಘದ ಅಧಿಕಾರ ಭಾರವು ಉಂಟಾಗುವುದು. ಆಗ ಸಂಘಕ್ಕೆ ಪ್ರಾಥಮಿಕತೆ ದೊರೆವುದು.

ಭೂಮಿಯ ಮೇಲಿನ ಅಧಿಕಾರ ಭಾರವಾಗಿರುವುದರಿಂದ ಅದರ ದಾಖಲೆಯು ಹಕ್ಕಿನ ಪತ್ರಿಕೆಗಳಲ್ಲಿ ಆಗಬೇಕು. ಈ ಬಗ್ಗೆ ಸಾಮಾನ್ಯ ವ್ಯವಸ್ಥೆಯ ಜತೆಗೆ ಈ ಕಾಯಿದೆಯ ಮೂಲಕ ಪ್ರತ್ಯೇಕ ವ್ಯವಸ್ಥೆ ಮಾಡಲಾಗಿದೆ. ೧೯೫೪ ರ ಮೈಸೂರ ಹಕ್ಕಿನ ಪತ್ರಿಕೆ ಕಾಯಿದೆಯ ಪ್ರಕಾರ ದಾಖಲೆ ಆಗುವುದರ ಜತೆಗೆ ಹಕ್ಕಿನ ಪತ್ರಿಕೆಗಳಲ್ಲಿ ಸಹಕಾರಿ ಸಂಘಗಳ ಅಧಿಕಾರ ಭಾರದ ವಿವರಗಳನ್ನು ದಾಖಲೆ ಮಾಡತಕ್ಕದ್ದು. ಸಹಕಾರಿ ಸಂಘವು ವಿವರಗಳನ್ನು ಡೆಪ್ಯೂಟಿ ಕಮಿಶನರನಿಗೆ ಪೂರೈಸಬೇಕು. ಆವನು ದಾಖಲೆ ಆಗುವಂತೆ ಮಾಡಿಸಬೇಕು. ಡೆಪ್ಯೂಟಿ ಕಮಿಶನರ ಇಲ್ಲವೆ ಬೇರೊಬ್ಬ ಅಧಿಕಾರಿಯನ್ನು ಇದರ ಸಲುವಾಗಿ ನೇಮಿಸಬಹುದು. ಅದರಂತೆ ಸಾಲ ಮುಟ್ಟಿ ಆಧಾರವಾಗಿದ್ದ ಭೂಮಿಯ ಮೇಲೆ ತನ್ನ ಅಧಿಕಾರ ಭಾರ ಕಡಿಮೆ ಮಾಡಬೇಕೆಂದೂ ಸಹಕಾರಿ ಸಂಘವು ತಿಳಿಸಬೇಕು. ಈ ವ್ಯವಸ್ಥೆಯ ಬಗ್ಗೆ ರಾಜ್ಯ ಸರಕಾರವು ಪ್ರತ್ಯೇಕ ನಿಯಮಗಳನ್ನು ಮಾಡಿ ಮಾರ್ಗದರ್ಶನ ಮಾಡುವುದು.

ಭೂಮಿ, ಎಂದು ಈ ಕಲಮಿನಲ್ಲಿ ಬಂದುದು ಯಾವ ಭೂಮಿ ಎಂಬ ಸಂಶಯು ಬರುವುದು. ಅದಕ್ಕೆ ವಿವರಣೆ ಕೊಡಲಾಗಿದೆ. ಯಾವ ಭೂಮಿಗೆ ಮೈಸೂರ ಹಕ್ಕಿನ ಪತ್ರಿಕೆ ಕಾಯಿದೆ ೧೯೫೪ ಅನ್ವಯಿಸುವುದೋ ಆ ಭೂಮಿ; ಅಂದರೆ ಬೇರೆ ಭೂಮಿ ಅಲ್ಲ ಎಂದು ಸೂಚನೆ.

ಅದರಂತೆ ಸಹಕಾರಿ ಸಂಘವೆಂದರೆ ಯಾವುದು ? ಯಾವ ಸಂಘ ದಲ್ಲಿ ಬಹು ಸಂಖ್ಯಾಕ ಸದಸ್ಯರು ಒಕ್ಕಲುತನ ಮಾಡುವವರು ಇರುವರೋ ಆ ಸಂಘ. ಈ ಕಲಮು ಭೂಮಿಯ ಸಂಬಂಧವಾಗಿರುವುದರಿಂದ ಭೂಮಿಯ ಒಡೆತನ ಇಲ್ಲವೆ ಅದರಲ್ಲಿಯ ಹಿತಾಸಕ್ತಿಯ ಧಾರಣ ಮಾಡುವ ಅಧಿಕಾರ ಇರುವುದು ಒಕ್ಕಲುತನ ಮಾಡುವವನಿಗೆ ಎಂಬುದು ಧ್ವನಿತವಾಗುವುದು. ಆದ್ದರಿಂದ ಕೃಷಿಕರು ಬಹು ಸಂಖ್ಯಾಕರಾಗಿರುವ ಸಂಘವು ಎಂದು ಅರ್ಥ ಮಾಡ ಬೇಕು ಎಂದು ವಿವರಣೆ ಕೊಡಲಾಗಿದೆ. ಇದಲ್ಲದೆ ಸಾಲಕ್ಕೆ ಸಂಬಂಧವಾಗಿ ಈ ಕಲಮು ಇರುವುದರಿಂದ ಆ ಸಂಘವು ತನ್ನ ಸದಸ್ಯರಿಗಾಗಿ ಸಾಲ ಕೊಡುವಂತಹ ಸಂಘವಾಗಿರಬೇಕು. ಇವಾವೂ ಇಲ್ಲದಿದ್ದರೆ ಸರಕಾರವು ಹುಕುಮು ಹೊರಡಿಸಿ ಸಹಕಾರಿ ಸಂಘವೆಂದರೆ ಇಂತಹ ವರ್ಗದ ಸಹಕಾರಿ ಸಂಘವೆಂದು ನಿರ್ದಿಷ್ಟಪಡಿಸಿರ ಬೇಕು. ಆಗ ಆ ಮಾದರಿಯ ಸಂಘವು ಈ ಕಲಮಿನ ಅರ್ಥದಲ್ಲಿಯ ಸಹಕಾರಿ ಸಂಘವು ಆಗುವುದು.

### ೩೪. ಕೆಲ ಸಂದರ್ಭಗಳಲ್ಲಿ ಸಂಘದ ಮಾಗಣಿ ಪೂರೈಸಲು ಸಂಬಳ ದಲ್ಲಿ ಕಡಿತ

(೧) ಆ ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸಹಕಾರಿ ಸಂಘದ ಸದಸ್ಯನು ಸಂಘಕ್ಕೆ ಸಲ್ಲಿಸಬೇಕಾಗಿದ್ದ ಯಾವುದೇ ಸಾಲದ ಇಲ್ಲವೆ ಇತರ ಬೇಡಿಕೆಯ ಸಂದರ್ಭವಾಗಿ ಕೊಡಬೇಕಾದ ಹಣ ವನ್ನು ಮುಟ್ಟಿಸುವುದರ ಸಲುವಾಗಿ ಸಂಘದ ಜತೆಗೆ ತನ್ನನ್ನು ನೌಕರಿಯಲ್ಲಿಟ್ಟು ಕೊಂಡವನು ತನ್ನ ಸಂಬಳದಲ್ಲಿ ಇಲ್ಲವೆ ಕೂಲಿಯಲ್ಲಿ ಕಡಿತ ಮಾಡಿ, ಆ ಕರಾರು ಪತ್ರದಲ್ಲಿ ಕಾಣಿಸಿದ ಹಣವನ್ನು ಸಂಘಕ್ಕೆ ಕೊಡಬೇಕೆಂಬುವ ಬಗ್ಗೆ ಕರಾರು ಪತ್ರ ಮಾಡಿಕೊಳ್ಳಬಹುದು.

(೨) ಇಂತಹ ಕರಾರು ಪತ್ರವನ್ನು ಮಾಡಿಕೊಟ್ಟಮೇಲೆ, ಅಗತ್ಯವೆನ್ನಿಸಿದರೆ ಸಹಕಾರಿ ಸಂಘದಿಂದ ಲಿಖಿತ ಬೇಡಿಕೆ ಬಂದ ಮೇಲೆ, ಮತ್ತು ಆ ಸಾಲ ಇಲ್ಲವೆ ಬೇಡಿಕೆ ಇಲ್ಲವೆ ಅದರ ಯಾವುದೇ ಭಾಗವು ಸಂದಾಯವಾಗದೆ ಉಳಿಯುವ ತನಕ ಆ ನೌಕರಿಯಲ್ಲಿಟ್ಟುಕೊಂಡವನು ಆ ಕರಾರು ಪತ್ರದ ಪ್ರಕಾರ ಕಡಿತವನ್ನು ಮಾಡ ತಕ್ಕದ್ದು ಮತ್ತು ಕಡಿತ ಮಾಡಿದ ತಾರೀಖಿನಿಂದ ಹದಿನಾಲ್ಕು ದಿವಸಗಳ ಒಳಗೆ ಸಂಘಕ್ಕೆ ಆ ಹಣವನ್ನು ಕೊಡತಕ್ಕದ್ದು.

(೩) ರಾಜ್ಯಘಟನೆಯ ೩೬೬ ನೆಯ ನಿಬಂಧನೆಯಲ್ಲಿ ವ್ಯಾಖ್ಯೆ ಮಾಡಿದ ರೇಲ್ವೆಗಳಲ್ಲಿ, ಗಣಿಗಳಲ್ಲಿ ಮತ್ತು ತೈಲ ಭೂಮಿಗಳಲ್ಲಿ ನೌಕರಿ ಮಾಡುವ ವ್ಯಕ್ತಿಗಳಿಗೆ ಈ ಕಲಮಿನಲ್ಲಿ ಹೇಳಿದ ಯಾವುದೂ ಅನ್ವಯಿಸತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘದ ಸದಸ್ಯನು ಬೇರೆ ಕಡೆಗೆ ನೌಕರಿ ಮಾಡುವವನು ಇರಬಹುದು. ಸಂಘದಲ್ಲಿ ಆ ಸದಸ್ಯನು ಸಾಲ ಪಡೆದಿರುವಾಗ ಆ ಸಾಲವನ್ನು ಮರಳಿ ಕೊಡಲು ಒಂದು ವ್ಯವಸ್ಥೆಯನ್ನು ಮಾಡಿಕೊಡಬಹುದು. ತನ್ನನ್ನು ನೌಕರಿಯಲ್ಲಿ ಇಟ್ಟುಕೊಂಡವನ ಜತೆಗೆ ಕರಾರು ಮಾಡಿಕೊಂಡು ಆ ಕರಾರನ್ನು ಸಂಘದ ಪರವಾಗಿ ಕೊಡಬಹುದು. ನೌಕರಿಯಲ್ಲಿಟ್ಟುಕೊಂಡವನು ಈ ಸದಸ್ಯನ ಸಂಬಳದಲ್ಲಿ ಕರಾರಿನಂತೆ ಕಡಿತಮಾಡಿ ಅದನ್ನು ಸಂಘಕ್ಕೆಸಲ್ಲಿಸುವಂತೆ ವ್ಯವಸ್ಥೆ ಮಾಡಬಹದು.

ಕರಾರು ಪತ್ರ ಆದನಂತರ ಸಂಘವು ಲೇಖಿಯಿಂದ ಆ ಮಾಲಕರಿಗೆ ತಿಳಿಸಬೇಕು. ಮತ್ತು ಸಾಲ ಮುಟ್ಟುವವರೆಗೆ ಸಂಬಳದಲ್ಲಿ ಕಡಿತಮಾಡಿ ಕಳಿಸಬೇಕೆಂದು ಕೇಳಿಕೊಳ್ಳಬೇಕು. ಆ ಮಾಲಕನು ತಾನು ತನ್ನ ನೌಕರನ ಸಂಬಳದಲ್ಲಿ ಆ ಕರಾರು ಪತ್ರದ ಪ್ರಕಾರ ಕಡಿದುದನ್ನು ಕಡಿತ ಮಾಡಿದ ದಿನದಿಂದ ೧೪ ದಿವಸಗಳ ಒಳಗೆ ಸಂಘಕ್ಕೆ ಸಲ್ಲಿಸಬೇಕು.

ಸದಸ್ಯನು. ನೌಕರನು ನಿಜ. ಮಾಲಕನು (ನೌಕರಿಯಲ್ಲಿಟ್ಟುಕೊಂಡವನು) ಯಾರು ಎಂಬುದನ್ನು ನಿರ್ದಿಷ್ಟಪಡಿಸುವ ಬದಲು ಅಪವಾದವಾಗಿ ಯಾವ ನೌಕರಿಯಲ್ಲಿದ್ದ ವ್ಯಕ್ತಿಗೆ ಇದು ಅನ್ವಯಿಸುವುಲ್ಲ ಎಂಬುದನ್ನು ಈ ಕಲಮಿನಲ್ಲಿ ಹೇಳಿದೆ. ಭಾರತದ ರಾಜ್ಯಘಟನೆಯ ೩೬೬ ನೆಯ ನಿಬಂಧನೆಯಲ್ಲಿ ವ್ಯಾಖ್ಯೆ ಮಾಡಿದ ರೇಲ್ವೆಯಲ್ಲಿ ನೌಕರಿಯುಲ್ಲಿದ್ದ ವ್ಯಕ್ತಿಗೆ ಈ ಕಲಮು ಅನ್ವಯಿಸುವುದಿಲ್ಲ. ಆ ೩೬೬ ನೆಯ ನಿಬಂಧನೆಯ ಉಪನಿಬಂಧನೆ ೨೦ ರಲ್ಲಿ ರೇಲ್ವೆಯ ವ್ಯಾಖ್ಯೆ ಮಾಡಲಾಗಿದೆ.

"ರೇಲ್ವೆ" ಶಬ್ದದಲ್ಲಿ (ಅ) ಸಂಪೂರ್ಣವಾಗಿ ಮುನಸಿಪಲ್ ಪ್ರದೇಶದಲ್ಲಿ ಇರುವ ಟ್ರಾಮವೇ, ಇಲ್ಲವೆ (ಬ) ಸಂಪೂರ್ಣವಾಗಿ ಒಂದು ರಾಜ್ಯದಲ್ಲಿರುವ ಮತ್ತು ಪಾರ್ಲಿಮೆಂಟದಿಂದ ಕಾಯಿದೆಯಿಂದ ರೇಲ್ವೆ ಅಲ್ಲವೆಂದು ಹೇಳಲಾದ ಬೇರೆ ಯಾವುದೇ ಸಂಪರ್ಕದ ದಾರಿಯನ್ನು ಒಳಗೊಳ್ಳುವುದಿಲ್ಲ.

ಈ ವ್ಯಾಖ್ಯೆಗೆ ಅನುಸಾರವಾಗಿ ಇರುವ ರೇಲ್ವೆಯಲ್ಲಿ ನೌಕರಿ ಮಾಡುವ ವ್ಯಕ್ತಿಗೆ ಈ ಕಲಮು ಅನ್ವಯಿಸುವುದಿಲ್ಲ. ಅದರಂತೆ ಗಣಿಯಲ್ಲಿ ಕೆಲಸ ಮಾಡುವ ನೌಕರ ವ್ಯಕ್ತಿಗೆ, ಎಣ್ಣೆಯನ್ನು ತೆಗೆಯುವ ಕೆಲಸದಲ್ಲಿ ತೊಡಗಿದ ತೈಲ ಭೂಮಿಗಳಲ್ಲಿಯ ನೌಕರನಿಗೂ ಈ ಕಲಮು ಅನ್ವಯಿಸುವುದಿಲ್ಲ.

## ೩೫. ಸಹಕಾರಿ ಸಂಘದ ಬಂಡವಲಿನಲ್ಲಿ ಸದಸ್ಯರ, ಶೇರುಗಳ ಇಲ್ಲವೆ ಹಿತಾಸಕ್ತಿಯ ಸಂಬಂಧವಾಗಿ ಅಧಿಕಾರ ಭಾರ ಮತ್ತು ಸರಿಪಡಿಸುವಿಕೆ

ಸಹಕಾರಿ ಸಂಘಕ್ಕೆ ಸಲ್ಲಿಸಬೇಕಾದ ಯಾವುದೇ ಸಾಲ ಇಲ್ಲವೆ ಬಾಕಿಯಾಗಿದ್ದ ಯಾವುದೇ ಮಾಗಣಿಯ ಸಂಬಂಧವಾಗಿ ಸದಸ್ಯನ ಇಲ್ಲವೆ ಹಿಂದಿನ ಸದಸ್ಯನ ಶೇರು ಇಲ್ಲವೆ ಬಂಡವಲಿನಲ್ಲಿಯ ಅವನ ಹಿತಾಸಕ್ತಿಯ ಮೇಲೆ ಮತ್ತು ಠೇವಿನ ಮೇಲೆ, ಮತ್ತು ಸದಸ್ಯನಿಗೆ ಇಲ್ಲವೆ ಹಿಂದಿನ ಸದಸ್ಯನಿಗೆ ಕೊಡಬೇಕಾಗಿದ್ದ ಯಾವುದೇ ಲಾಭಾಂಶ, ಬೋನಸ್ಸು, ಇಲ್ಲವೆ ಲಾಭಗಳು ಇವುಗಳ ಮೇಲೆ ಸಹಕಾರಿ ಸಂಘದ ಅಧಿಕಾರ ಭಾರವು ಇರತಕ್ಕದ್ದು. ಮತ್ತು ಇಂತಹ ಸಾಲ ಇಲ್ಲವೆ ಬಾಕಿಯಾಗಿದ್ದ ಬೇಡಿಕೆ ಹಣವನ್ನು ಮುಟ್ಟಿಸುವುದಕ್ಕಾಗಿ ಸದಸ್ಯನಿಗೆ ಸಲ್ಲಬೇಕಾಗಿದ್ದ ಇಲ್ಲವೆ ಅವನ ಹೆಸರಿಗೆ ಜಮಾ ಆಗಿದ್ದ ಯಾವುದೇ ಹಣವನ್ನು ಸರಿಪಡಿಸಬಹುದು. ಆದರೆ, ಯಾವ ಸಾಲ ಕೊಡುವ ಬ್ಯಾಂಕಿಗೆ ಸಹಕಾರಿ ಸಂಘವು ಹೊಂದಿಕೊಂಡಿರುವುದೋ ಆ ಬ್ಯಾಂಕಿನಲ್ಲಿ ಸಂಘದಿಂದ ರಿಜರ್ವಫಂಡ ಎಂದು ತೊಡಗಿಸಿದ ಯಾವುದೇ ಹಣದ ಮೇಲೆ ಆ ಬ್ಯಾಂಕು ಸಂಘದ ಏಕಮೇವ ಧನಕೋ ಆಗಿರದಿದ್ದರೆ, ಅಧಿಕಾರ ಭಾರ ಉಳ್ಳದ್ದಾಗಿರತಕ್ಕದ್ದಲ್ಲ ಇಲ್ಲವೆ ಇಂತಹ ಸಂಘದಿಂದ ಸಲ್ಲಬೇಕಾಗಿದ್ದ ಯಾವುದೇ ಸಾಲದ ಸಲುವಾಗಿ ಸಂಘಕ್ಕೆ ಸಲ್ಲಬೇಕಾಗಿದ್ದ ಇಲ್ಲವೆ ಸಂಘದ ಹೆಸರಿಗೆ ಜಮಾ ಆಗಿದ್ದ ಯಾವುದೇ ಹಣವನ್ನು ಸರಿಪಡಿಸಿಕೊಳ್ಳಲು ಬ್ಯಾಂಕು ಬಾಧ್ಯಸ್ಥವಾಗಿರ ತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘದ ಸದಸ್ಯನು ಸಂಘಕ್ಕೆ ಋಣಿಯಾಗಿದ್ದರೆ ಅವನ ಋಣದ ಬಗ್ಗೆ ಸಂಘದ ಅಧಿಕಾರ ಏನು ಎಂಬ ಬಗ್ಗೆ ಈ ಕಲಮು ಇದೆ. ಆ ಸದಸ್ಯನು ಸದ್ಯದ ಸದಸ್ಯನಾಗಿರಬಹುದು, ಇಲ್ಲವೆ ಹಿಂದಿನ ಸದಸ್ಯನಾಗಿರಬಹುದು. ಅವನ ಹೆಸರಿನಲ್ಲಿ ಇರುವ ಶೇರು, ಬಂಡವಲಿನಲ್ಲಿಯ ಹಿತಾಸಕ್ತಿ, ಠೇವು, ಲಾಭಾಂಶ, ಬೋನಸ್ಸು ಇಲ್ಲವೆ ಲಾಭಗಳು ಇವೆಲ್ಲವುಗಳ ಮೇಲೆ ಅವನ ಸಾಲದ ಸಲುವಾಗಿ ಸಂಘವು ಈ ಹಣವನ್ನು ಸರಿಪಡಿಸಿಕೊಳ್ಳು ಅಧಿಕಾರವನ್ನು ಪಡೆದಿದೆ ಎಂದು ಈ ಕಲಮು ಹೇಳುವುದು. ಅಂದರೆ ಸದಸ್ಯನು ತಾನೇ ಸಾಲ ತೀರಿಸುವ ಪ್ರಯತ್ನ ಮಾಡದಿದ್ದರೆ, ಅವನ ಹೆಸರಿಗೆ ಜಮೆಯಾದ ರಕಮನ್ನು ಸರಿಪಡಿಸಿಕೊಳ್ಳುವ ಅಧಿಕಾರ ಸಂಘಕ್ಕೆ ಇದೆ. ಅಲ್ಲಿಯ ವರೆಗೆ ಅದರ ಮೇಲೆ ಅಧಿಕಾರ ಭಾರ ಇಡುವ ಹಕ್ಕು ಇದೆ.

ಇಲ್ಲಿ ಒಂದು ಅಪವಾದದ ಮಾತು ಇದೆ. ಅದು ವ್ಯಕ್ತಿ ಸದಸ್ಯನ ಸಂಬಂಧ ದಲ್ಲಿ ಅಲ್ಲ. ಸಹಕಾರಿ ಸಂಘವು ಒಂದು ಬ್ಯಾಂಕಿಗೆ ಹೊಂದಿಕೊಂಡು ಅಲ್ಲಿ ತನ್ನ ರಿಜರ್ವ ಫಂಡನ್ನು ತೊಡಗಿಸಿರುವಾಗ, ಸಂಘವು ಆ ಬ್ಯಾಂಕಿನಲ್ಲಿ ಸಾಲ ತೆಗೆದಿದ್ದರೆ

ಆ ರಿಜರ್ವ ಫಂಡಿನ ಮೇಲೆ ಆ ಬ್ಯಾಂಕಿನ ಅಧಿಕಾರ ಭಾರ ಇರತಕ್ಕದ್ದಲ್ಲ. ಮತ್ತು ಸಂಘದ ಸಾಲ ಮುಟ್ಟಿಸಿಕೊಳ್ಳಲು ಆ ಹಣವನ್ನು ಆ ಬ್ಯಾಂಕು ಸರಿಪಡಿಸಿಕೊಳ್ಳ ತಕ್ಕದ್ದಲ್ಲ ಆ ಸಂಘವು ಆ ಬ್ಯಾಂಕಿಗೆ ಮಾತ್ರ ಋಣಿಯಾಗಿರದಿದ್ದರೆ ಈ ಸಂರಕ್ಷಣ ಅಂದರೆ ಬೇರೆ ಧನಕೋ ಸಂಸ್ಥೆಗಳಿದ್ದರೆ,ಒಂದೇ ಬ್ಯಾಂಕು ಅಧಿಕಾರಭಾರ ಹಾಕಲು ಸಾಲಕ್ಕಾಗಿ ಸರಿಪಡಿಸಿಕೊಳ್ಳಲು ಬರುವುದಿಲ್ಲ ಎಂದು ಅರ್ಥ. ಬೇರೆ ಧನಕೋ ಸಂಸ್ಥೆಗಳು ಇರದಿದ್ದರೆ, ಬರುತ್ತದೆಂದು ಅರ್ಥ.

### ೩೬. ಜಪ್ತಿಗೆ ಪಾತ್ರವಲ್ಲದ ಶೇರುಗಳು ಇಲ್ಲವೆ ಹಿತಾಸಕ್ತಿಯು

ಕಲಮು ೩೫ ರ ಶರತುಗಳ ಅಂಕಿತವಾಗಿ, ಸದಸ್ಯನ ಇಲ್ಲವೆ ಹಿಂದಿನ ಸದಸ್ಯ ಯಾವುದೇ ಸಾಲ ಇಲ್ಲವೆ ಹೊಣೆಗಾರಿಕೆಯ ಸಂಬಂಧವಾಗಿ ಸಹಕಾರಿ ಸಂಘದಲ್ಲಿಯ ಅವನ ಶೇರು ಇಲ್ಲವೆ ಬಂಡವಲಿನಲ್ಲಿಯ ಅವನ ಹಿತಾಸಕ್ತಿಯು ನ್ಯಾಯಾಲಯ ಯಾವುದೇ ಹುಕುಮು ಇಲ್ಲವೆ ಹುಕುಮುನಾಮೆಯನ್ವಯವಾಗಿ ಜಪ್ತಿಗೆ ಇಲ್ಲ ಮಾರಾಟಕ್ಕೆ ಪಾತ್ರವಾಗಿರತಕ್ಕದ್ದಲ್ಲ ಮತ್ತು ಇಂತಹ ಶೇರು ಇಲ್ಲವೆ ಹಿತಾಸಕ್ತಿಯ ಮೇಲೆ ಯಾವುದೇ ನಾದಾರಿ ಕಾಯಿದೆಗೆ ಸಂಬಂಧವಾದ ರಿಸೀವ್ಹರ ಇಲ್ಲ ಆಫಿಸಿಯಲ್ ಅಸಾಯಿನೀ ( Official Assignec ) ಯು ಯಾವುದೇ ರೀತಿಯ ಮಾಗಣಿ ಮಾಡಲು ಬಾಧ್ಯಸ್ಥನಾಗಿರತಕ್ಕದ್ದಲ್ಲ ಇಲ್ಲವೆ ಮಾಗಣಿ ಮಾಡತಕ್ಕದ್ದ

**ವಿವೇಚನೆ**

ಸಹಕಾರಿ ಸಂಘದ ಸದಸ್ಯನು ಇತರ ಬೇರೆ ವ್ಯವಹಾರಗಳ ಮೂಲಕ ಸಾ ಗಾರನಾಗಿ ಆ ಬಗ್ಗೆ ನ್ಯಾಯಾಲಯದ ಹುಕುಮುನಾಮೆ ಇಲ್ಲವೆ ಹುಕುಂ ಹೊರಟ ಅವನ ಆಸ್ತಿಯ ಜಪ್ತಿ-ಮಾರಾಟ ಆಗಬೇಕೆಂದು ಆಗಿದ್ದರೂ ಅವನ ಶೇರು ಇಲ್ಲ ಸಂಘದ ಬಂಡವಲಿನಲ್ಲಿಯ ಹಿತಾಸಕ್ತಿ ಇವುಗಳಿಗೆ ಧಕ್ಕೆ ಆಗತಕ್ಕದ್ದಲ್ಲ ಎಂದು ಕಲಮು ಆ ಶೇರು ಹಾಗೂ ಬಂಡವಲಿನ ಹಿತಾಸಕ್ತಿಗೆ ಸಂರಕ್ಷಣೆ ಕೊಡುತ್ತದೆ. ಸಂರಕ್ಷಣೆ ಸದಸ್ಯನಾದ ವ್ಯಕ್ತಿಗೆ ಅಲ್ಲ. ಸಂಘದ ಶೇರು ಹಾಗೂ ಬಂಡವಲಿ ಹಿತಾಸಕ್ತಿಗೆ ಇದೆ ಏಕೆಂದರೆ ಸಹಕಾರಿ ಸಂಘದ ಶೇರು ಇಲ್ಲವೆ ಬಂಡವಲಿನಲ್ಲಿಯ ಹಿತಾಸಕ್ತಿ ಬೇಕಾದವರಿಗೆ ದೊರೆವುದಿಲ್ಲ ಸದಸ್ಯನ ಹೊರತಾಗಿ ಇತರರಿಗೆ ದೊ ವುದಿಲ್ಲ. ಆದ್ದರಿಂದ ಅವು ಸದಸ್ಯನ ಆಸ್ತಿಯಾಗಿದ್ದರೂ ಸಂಘದ ಸದಸ್ಯರಲ್ಲ ವರಿಗೆ ಪಡೆಯಲು ಬಾರದೆ ಇರುವುದರಿಂದ ನ್ಯಾಯಾಲಯದ ಹುಕುಂ ಇಲ್ಲ ಹುಕುಮುನಾಮೆಯ ಮೂಲಕ ಜಪ್ತಿ ಇಲ್ಲವೆ ಮಾರಾಟಕ್ಕೆ ಪಾತ್ರವಾಗಿರುವುದಿ ಅದರಂತೆ ಯಾವುದೇ ರಿಸೀವ್ಹರ ಇಲ್ಲವೆ ಆಫಿಸಿಯಲ್ ಅಸಾಯಿನಿಯು ಅದ ಮೇಲೆ ಮಾಗಣಿ ಮಾಡಲು ಬರುವುದಿಲ್ಲ. ಈ ರೀತಿಯಾಗಿ ಕಾಯಿದೆಯಿಂ ಸಂರಕ್ಷಣೆ ಕೊಡಲಾಗಿರುವುದರಿಂದ ಸಹಕಾರಿ ಸಂಘದ ಬಂಡವಲು ಹಾಗೂ ಶೇ ಭದ್ರವಾಗಿ ಉಳಿಯುವುವು. ಸದಸ್ಯರ ಹಿತವನ್ನು ರಕ್ಷಿಸಿದಂತೆ ಆಗುವುದು.

## ೩೭. ಕೆಲ ಕರಗಳು, ತೆರಿಗೆಗಳು ಮತ್ತು ಫೀಗಳು ಇವುಗಳಿಂದ ವಿನಾಯತಿ.

ಹಾಗೆ ಮಾಡುವುದು ಸಾರ್ವಜನಿಕ ಹಿತದ ದೃಷ್ಟಿಯಿಂದ ಆವಶ್ಯಕವೆಂದು ರಾಜ್ಯ ಸರಕಾರದ ಅಭಿಪ್ರಾಯವಾದರೆ, ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟಣೆಯಲ್ಲಿ ನಿರ್ದಿಷ್ಟಪಡಿಸಬಹುದಾದ ಅಂತಹ ನಿರ್ಬಂಧಗಳ ಮತ್ತು ಕರಾರುಗಳ ಅಂಕಿತವಾಗಿ ಸಹಕಾರಿ ಸಂಘಗಳ ಯಾವುದೇ ವರ್ಗದ ಸಂಘಗಳ ಸಂಬಂಧವಾಗಿ ರಾಜ್ಯ ಸರಕಾರವು—

(ಅ) ಆ ಕಾಲದಲ್ಲಿ ಜಾರಿಯಲ್ಲಿರುವ ೧೯೫೭ ( ಮೈಸೂರ ಕಾಯಿದೆ ನಂ. ೨೨—೧೯೫೭ ) ರ ಮೈಸೂರ ಅಗ್ರಿಕಲ್ಚರಲ್ ಇನ್‌ಕಮ್ ಟ್ಯಾಕ್ಸ ಆ್ಯಕ್ಟದ ಅನ್ವಯವಾಗಿ ಕೊಡಬೇಕಾಗಿರುವ ಕರವನ್ನು ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

(ಬ) ಆ ಕಾಲದಲ್ಲಿ ಜಾರಿಯಲ್ಲಿರುವ ೧೯೫೭ ( ಮೈಸೂರ ಕಾಯಿದೆ ನಂ. ೨೫—೧೯೫೭) ರ ಮೈಸೂರ ಸೇಲ್ಸಟ್ಯಾಕ್ಸ ಆ್ಯಕ್ಟದನ್ವಯವಾಗಿ ಕೊಡಬೇಕಾಗಿರುವ ಕರವನ್ನು ಕಡಿಮೆಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

(ಕ) ಆ ಕಾಲದಲ್ಲಿ ಜಾರಿಯಲ್ಲಿರುವ ೧೯೫೭ ( ಮೈಸೂರ ಕಾಯಿದೆ ನಂ. ೩೪—೧೯೫೭ )ರ ಮೈಸೂರ ಸ್ಟಾಂಪ ಆ್ಯಕ್ಟದನ್ವಯವಾಗಿ ಆಕರಿಸಲ್ಪಡಬಹುದಾದ ಯಾವುದೇ ಕಾಗದ ಪತ್ರಗಳನ್ನು ಸಹಕಾರಿ ಸಂಘದಿಂದ ಇಲ್ಲವೆ ಅದರ ಪರವಾಗಿ ಇಲ್ಲವೆ ಅದರ ಅಧಿಕಾರಿಯಿಂದ ಇಲ್ಲವೆ ಸದಸ್ಯನಿಂದ ಮತ್ತು ಇಂತಹ ಸಂಘದ ವ್ಯವಹಾರಕ್ಕೆ ಸಂಬಂಧವಾಗಿರುವ ಕಾಗದ ಪತ್ರಗಳನ್ನು ಇಲ್ಲವೆ ಇಂತಹ ಕಾಗದ ಪತ್ರಗಳ ಯಾವುದೇ ವರ್ಗವನ್ನು ಇಲ್ಲವೆ ಯಾವುದೇ ಅವಾರ್ಡ ( ಮಧ್ಯಸ್ಥಿಕೆ ನಿರ್ಣಯ ಪತ್ರ ) ಇಲ್ಲವೆ ಈ ಕಾಯಿದೆಯನ್ವಯವಾಗಿ ಮಾಡಿದ ಯಾವುದೇ ಹುಕುಮು ಇದರ ಮೇಲೆ ಆಕರಿಸಲ್ಪಡಬಹುದಾದ ತೆರಿಗೆಯನ್ನು ಕಡಿಮೆಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

(ಡ) ಆ ಕಾಲದಲ್ಲಿ ಜಾರಿಯಲ್ಲಿರುವ ೧೯೫೮ ( ಮೈಸೂರ ಕಾಯಿದೆ ನಂ. ೧೬—೧೯೫೮ ) ರ ಮೈಸೂರ ಕೋರ್ಟ ಫೀಜ ಮತ್ತು ಸೂಟ್ಸ ವ್ಯಾಲ್ಯೂಯೇಶನ್ ಆ್ಯಕ್ಟದನ್ವಯವಾಗಿ ಯಾವುದೇ ದಸ್ತೈವಜಿನ ಸಂಬಂಧವಾಗಿ ಕೊಡಬೇಕಾಗಿರುವ ಫೀಗಳನ್ನು ಕಡಿಮೆಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

(ಇ) ಆ ಕಾಲದಲ್ಲಿ ಜಾರಿಯಲ್ಲಿರುವ ೧೯೦೮ ( ಕೇಂದ್ರ ಕಾಯಿದೆ ನಂ. ೧೬—೧೯೦೮ ) ರ ಇಂಡಿಯನ್ ರಜಿಸ್ಟ್ರೇಶನ್ ಆ್ಯಕ್ಟದನ್ವಯವಾಗಿ ಕೊಡಬೇಕಾಗಿರುವ ಯಾವುದೇ ಫೀಯನ್ನು ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

**ವಿವೇಚನೆ**

ಕೇಂದ್ರದ ಕಾಯಿದೆಗಳು ಹಾಗೂ ರಾಜ್ಯದ ಕಾಯಿದೆಗಳು ದೇಶದಲ್ಲಿಯ ಹಾಗೂ ಪ್ರಾದೇಶಿಕ ವ್ಯವಹಾರಗಳಿಗೆ ಸಂಬಂಧಿಸಿರುವುವು. ಆ ವ್ಯವಹಾರವನ್ನು ಮಾಡುವವರು ಸಂಘಗಳು ಇರಬಹುದು, ಸರಕಾರ ಇರಬಹುದು, ವ್ಯಕ್ತಿಗಳು ಇರಬಹುದು. ಯಾರೇ ವ್ಯವಹಾರ ಮಾಡಿದರೂ ಆ ವ್ಯವಹಾರಕ್ಕೆ ಕರ-ತೆರಿಗೆ-ಫೀ ಕಾಯಿದೇಶೀರ ಕೊಡಬೇಕಾಗುವುದು. ಕಾಯಿದೆಯಿಂದ ವಿನಾಯತಿ ಇದ್ದ ಹೊರತು ಕರ-ತೆರಿಗೆ-ಫೀಗಳಲ್ಲಿ ವಿನಾಯತಿ ದೊರೆವುದಿಲ್ಲ. ಆದ್ದರಿಂದ ಈ ಕಲ ಮನ್ನು ಹಾಕಲಾಗಿದೆ.

ಮೈಸೂರ ಒಕ್ಕಲುತನ ಆದಾಯಕರ ಕಾಯಿದೆಯ ಪ್ರಕಾರ ಸರಕಾರವು ಕರ ಹಾಕುವುದು. ಆದರೆ ಈ ೩೭ ನೆಯ ಕಲಮಿನ ಮೂಲಕ ಆ ಕರಗಳಲ್ಲಿ ಕಡಿಮೆ ಮಾಡಬಹುದು. ಇಲ್ಲವೆ ವಿನಾಯತಿ ಮಾಡಬಹುದು. ಅದರಂತೆ ಸೇಲ್ಸಟ್ಯಾಕ್ಸ ಕಾಯಿದೆಯು ಹಾಕಿದ ಕರವನ್ನು ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು. ಕಾಗದ ಪತ್ರಗಳ ಮೇಲೆ ಸ್ಟಾಂಪ ಡ್ಯೂಟಿ ಕೊಡಬೇಕಾದು ದನ್ನು ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು. ಕೋರ್ಟ ಫೀ ಕೊಡುವುದರಲ್ಲಿ ಕಡಿಮೆ ಮಾಡಬಹದು ಇಲ್ಲವೆ ವಿನಾಯತಿ ಮಾಡಬಹುದು; ನೋಂದಣಿ ಫೀಯಲ್ಲಿ ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು.

ಈ ಕಲಮು ಸರಕಾರಕ್ಕೆ ಅಧಿಕಾರ ಕೊಡುವುದು ರಾಜ್ಯ ಸರಕಾರವು ಈ ಅಧಿಕಾರವನ್ನು ಉಪಯೋಗಿಸಬೇಕಾದರೆ ಒಂದು ಮಾತು ಇರುವುದು. ಹಾಗೆ ಸಹಕಾರಿ ಸಂಘಗಳ ವ್ಯವಹಾರಗಳಲ್ಲಿ ಕರ-ತೆರಿಗೆ-ಫೀಗಳ ಬಗ್ಗೆ ಕಡಿಮೆ ಮಾಡಿ ದರೆ, ಇಲ್ಲವೆ ವಿನಾಯತಿ ಕೊಟ್ಟರೆ, ಸಾರ್ವಜನಿಕ ಹಿತ ಸಾಧಿಸುವುದು ಎಂದು ರಾಜ್ಯ ಸರಕಾರದ ಅಭಿಪ್ರಾಯವಾಗಬೇಕು. ಹಾಗೆ ಅಭಿಪ್ರಾಯವಾಗುವಂತಹ ವ್ಯವಹಾರಗಳಿಗೆ ಅಂತಹ ವ್ಯವಹಾರ ಮಾಡುವ ಸಂಘಗಳಿಗೆ ಸರಕಾರವು ಕರ-ತೆರಿಗೆ-ಫೀಗಳಲ್ಲಿ ಕಡಿಮೆ ಮಾಡುವ ಇಲ್ಲವೆ ವಿನಾಯತಿ ಮಾಡುವ ಕ್ರಮ ಕೈಕೊಳ್ಳ ಬಹುದು. ಹಾಗೆ ಕ್ರಮ ಕೈಕೊಳ್ಳಬೇಕೆಂದು ಸರಕಾರ ಮನಸ್ಸು ಮಾಡಿದಾಗ ಅದು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟನೆ ಹೊರಡಿಸಬೇಕು. ಆ ಪ್ರಕಟನೆಯಲ್ಲಿ ಯಾವ ಕರಾರು-ನಿರ್ಬಂಧಗಳಿಗೆ ಅಂಕಿತವಾಗಿ ವಿನಾಯತಿ ಕೊಡಬೇಕೆಂಬ ಬಗ್ಗೆ ಮತ್ತು ಯಾವ ವರ್ಗದ ಸಹಕಾರಿ ಸಂಘಗಳ ವ್ಯವಹಾರಗಳ ಬಗ್ಗೆ ವಿನಾ ಯತಿ ಕೊಡಬೇಕೆಂಬ ಬಗ್ಗೆ ನಿರ್ದಿಷ್ಟ ಪಡಿಸಬೇಕು..

ಹಾಗೆ ನಿರ್ದಿಷ್ಟ ಪಡಿಸುವ ಪ್ರಕಟನೆಯನ್ನು ರಾಜ್ಯ ಸರಕಾರವು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಬೇಕು. ಅಲ್ಲಿಯ ತನಕ ಈ ಕಲಮು ಕಾರ್ಯಕಾರಿ

ಆದಂತೆ ಅಲ್ಲ. ಈ ಕಲಮಿನಿಂದ ಸರಕಾರಕ್ಕೆ . ಕರ-ತೆರಿಗೆ-ಫೀಗಳಲ್ಲಿ ಕಡಿಮೆ ಮಾಡುವ ಅಧಿಕಾರ ಇಲ್ಲವೆ ವಿನಾಯತಿ ಮಾಡುವ ಅಧಿಕಾರ ಉಂಟಾಗುವುದು. ಸರಕಾರವು ಅಧಿಕಾರವನ್ನು ನಡೆಸಬೇಕೆಂದು ಮನಸ್ಸು ಮಾಡಿದರೆ, ಪ್ರಕಟನೆ ಹೊರಡಿಸಬೇಕು. ಅಂದಾಗ ಈ ಕಲಮಿನಲ್ಲಿ ಹೇಳಿದ ಕಾಯಿದೆಗಳ ಪ್ರಕಾರ ಕೊಡಬೇಕಾಗಿರುವ ಕರ, ತೆರಿಗೆ, ಫೀಗಳಲ್ಲಿ ಕಡಿಮೆ ಮಾಡಬಹುದು ಇಲ್ಲವೆ ವಿನಾಯತಿ ಮಾಡಬಹುದು. ಇಲ್ಲದಿದ್ದರೆ ಇಲ್ಲ. ಈ ಮಾತನ್ನು ತಿಳಿಯಬೇಕು.

## ೩೮. ವ್ಯವಹಾರ ದಾಖಲೆ ಪತ್ರಗಳ ಸಕ್ತಿ ನೋಂದಣಿಯಿಂದ ವಿನಾಯತಿ

೧೯೦೮ ( ಕೇಂದ್ರ ಕಾಯಿದೆ ನಂ. ೧೬—೧೯೦೮ ) ರ ಇಂಡಿಯನ್ ರಜಿಸ್ಟ್ರೇಶನ್ ಆ್ಯಕ್ಟದ ಕಲಮು ೧೭ ರ ಉಪಕಲಮು (೧) ರ ವಾಕ್ಯಾವಳಿ (ಬ) ಮತ್ತು (ಕ) ದಲ್ಲಿ ಹೇಳಿದ ಯಾವುದೂ—

(ಅ) ಸಂಘದ ಸೊತ್ತುಗಳು ಇಡಿಯಾಗಿ ಇಲ್ಲವೆ ಭಾಗವಾಗಿ ಸ್ಥಾವರ ಆಸ್ತಿಯಿದ್ದರೂ ಸಹಕಾರಿ ಸಂಘದ ಶೇರುಗಳ ಸಂಬಂಧವಾಗಿರುವ ಯಾವುದೇ ದಾಖಲೆ ಪತ್ರಗಳಿಗೆ ಅನ್ವಯಿಸುವುದಿಲ್ಲ;

(ಬ) ಅಂತಹ ಡಿಬೆಂಚರಗಳನ್ನು ಧಾರಣಮಾಡಿದವರ ಹಿತಕ್ಕಾಗಿ ವಿಶ್ವಸ್ತ ನಿಧಿಯೆಂದು ಧರ್ಮದರ್ಶಿಗಳಿಗೆ ಇಡಿಯಾಗಿ ಇಲ್ಲವೆ ಭಾಗವಾಗಿ ಸ್ಥಾವರ ಆಸ್ತಿಯನ್ನು ಇಲ್ಲವೆ ಅದರಲ್ಲಿಯ ಯಾವುದೇ ಹಿತಾಸಕ್ತಿಯನ್ನು ಸಂಘವು ಯಾವುದರಿಂದ ಒತ್ತಿಹಾಕಿದೆಯೋ, ಖರೀದಿ ಮಾಡಿಕೊಟ್ಟಿದೆಯೋ ಇಲ್ಲವೆ ಬೇರೆ ರೀತಿಯಲ್ಲಿ ಹಸ್ತಾಂತರಿಸಿದೆಯೋ ಅಂತಹ ನೋಂದಣೆ ಮಾಡಿದ ದಾಖಲೆ ಪತ್ರದಿಂದ ಆ ಧಾರಣಮಾಡಿದವನಿಗೆ ಭದ್ರತೆಗಾಗಿ ಬಾಧ್ಯತೆಯನ್ನು ಉಂಟುಮಾಡುವುದರ ಹೊರತು ಪಡಿಸಿ, ಸ್ಥಾವರ ಆಸ್ತಿಗೆ ಇಲ್ಲವೆ ಸ್ಥಾವರ ಆಸ್ತಿಯಲ್ಲಿ ಯಾವುದೇ ಹಕ್ಕು, ಅಧಿಕಾರ ಇಲ್ಲವೆ ಹಿತಾಸಕ್ತಿಯನ್ನು ನಿರ್ಮಾಣಮಾಡದೆ ಇದ್ದ, ಘೋಷಣೆ ಮಾಡದೆ ಇದ್ದ, ಒಪ್ಪಿಸಿಕೊಡದೆ ಇದ್ದ, ಮಿತಮಾಡದೆ ಇದ್ದ ಇಲ್ಲವೆ ನಷ್ಟಗೊಳಿಸದೆ ಇದ್ದ ಮತ್ತು ಅಂತಹ ಯಾವುದೇ ಸಂಘದಿಂದ ಹೊರಡಿಸಲಾದ ಯಾವುದೇ ಡಿಬೆಂಚರುಗಳಿಗೆ ಅನ್ವಯಿಸುವುದಿಲ್ಲ; ಇಲ್ಲವೆ

(ಕ) ಇಂತಹ ಯಾವುದೇ ಸಂಘದಿಂದ ಹೊರಡಿಸಲಾದ ಯಾವುದೇ ಬೇರೆ ಡಿಬೆಂಚರುಗಳ ಯಾವುದೇ ಹಸ್ತಾಂತರಕ್ಕೆ ಇಲ್ಲವೆ ಹಸ್ತಾಂತರ ಬರೆಹಕ್ಕೆ ಅನ್ವಯಿಸುವುದಿಲ್ಲ.

**ವಿವೇಚನೆ**

ದೇಶದಲ್ಲಿಯ ಕಾಯಿದೆಯ ಶರತುಗಳಿಂದ ವಿನಾಯತಿ ಪಡೆಯಲು ಕಾಯಿದೆಯಲ್ಲಿ ಅವಕಾಶ ಇರಬೇಕಾಗುತ್ತದೆ. ಈ ಕಲಮಿನಲ್ಲಿ ನೋಂದಣಿ ಕಾಯಿದೆಯಿಂದ

ವಿನಾಯತಿ ಕೊಡಲಾಗಿದೆಯೆಂದು ಹೇಳಿದೆ. ಭಾರತದ ನೋಂದಣಿ ಕಾಯಿದೆಯ ಕಲಮು ೧೭ ರ ಉಪಕಲಮು (೧) ರಲ್ಲಿಯ (ಬ) ಮತ್ತು (ಕ) ಇವು ಸಹಕಾರಿ ಸಂಘದ ವ್ಯವಹಾರದ ದಾಖಲೆ ಪತ್ರಗಳಿಗೆ ಅನ್ವಯಿಸುವುದಿಲ್ಲ ಎಂದು ಹೇಳಿದೆ. ಆ ವಾಕ್ಯಾವಳಿಗಳಲ್ಲಿ ಹೀಗೆ ಹೇಳಲಾಗಿದೆ. ಕಲಮು ೧೭ ಸಕ್ತಿ ನೋಂದಣಿ ಬಗ್ಗೆ ಇದೆ. (ಬ) ವಾಕ್ಯಾವಳಿಯಲ್ಲಿ ಹೀಗೆ ಹೇಳಿದೆ :

(ಬ) "ಸ್ಥಾವರ ಆಸ್ತಿಗೆ ಇಲ್ಲವೆ ಸ್ಥಾವರ ಆಸ್ತಿಯಲ್ಲಿ ಒಂದು ನೂರು ರೂಪಾಯಿಗಳಿಗೆ ಮೇಲ್ಪಟ್ಟು ಬೆಲೆಯಿರುವ ಸದ್ಯಕ್ಕೆ ಇದ್ದ ಇಲ್ಲವೆ ಉಂಟಾಗಬಹುದಾದ ಯಾವುದೇ ಹಕ್ಕು, ಅಧಿಕಾರ ಇಲ್ಲವೆ ಹಿತಾಸಕ್ತಿ, ಸದ್ಯದ ಕಾಲಕ್ಕೆ ಇಲ್ಲವೆ ಭವಿಷ್ಯತ್‌ಕಾಲದಲ್ಲಿ ನಿರ್ಮಾಣಮಾಡುವ, ಘೋಷಣೆ ಮಾಡುವ, ಒಪ್ಪಿಸಿಕೊಡುವ, ಮಿತಮಾಡುವ, ಇಲ್ಲವೆ ನಷ್ಟಮಾಡುವ ಉದ್ದೇಶವಿರುವ ಇಲ್ಲವೆ ಕಾರ್ಯಕಾರಿ ಮಾಡುವ ಮೃತ್ಯುಪತ್ರವಲ್ಲದ ಇತರ ದಾಖಲೆಪತ್ರಗಳು" ನೋಂದಾಯಿಸಲ್ಪಡ ತಕ್ಕದ್ದು ಎಂದು ಹೇಳಿದೆ. ವಾಕ್ಯದಳ (ಕ) ದಲ್ಲಿ ಹೀಗೆ ಹೇಳಲಾಗಿದೆ

"(ಕ). ಇಂತಹ ಯಾವುದೇ ಹಕ್ಕು, ಇಲ್ಲವೆ ಹಿತಾಸಕ್ತಿ ನಿರ್ಮಾ ಮಾಡುವ, ಘೋಷಣೆ ಮಾಡುವ, ಒಪ್ಪಿಸಿಕೊಡುವ, ಮಿತಮಾಡುವ, ಇಲ್ಲ ನಷ್ಟ ಮಾಡುವ ಸಲುವಾಗಿ ಯಾವುದೇ ಹಣವನ್ನು ಕೊಟ್ಟಿದರ ಬಗ್ಗೆ ಪಾವ ಎಂದು ಆಗಿರುವ ಮೃತ್ಯುಪತ್ರವಲ್ಲದ ದಾಖಲೆ ಪತ್ರಗಳು" ಸಕ್ತಿನೋಂದಣಿ ಮಾ ಲ್ಪಡತಕ್ಕದ್ದು.

ಹಾಗೆ ಭಾರತದ ರಜಿಸ್ಟ್ರೇಶನ್ ಕಾಯಿದೆಯು ಕಲಮು ೧೭ ರಲ್ಲಿ ಹೇ ದ್ದರೂ ಆ ಶರತುಗಳಿಂದ ಸಹಕಾರಿ ಸಂಘದ ವ್ಯವಹಾರದ ದಾಖಲೆ ಪತ್ರಗಳ ನೋಂದಣಿ ವಿನಾಯತಿಯನ್ನು ಕಲಮು ೩೮ ಕೊಡುತ್ತದೆ. ಹಾಗೆ ವಿನಾಯ ಪಡೆದ ಸಹಕಾರಿ ಸಂಘದ ದಾಖಲೆ ಪತ್ರಗಳು ಯಾವು ಎಂಬುದನ್ನೂ ಕಲಮು ೩ ಹೇಳುವುದು.

ಸ್ಥಾವರ ಆಸ್ತಿಯು ಒಳಗೊಂಡಿದ್ದು ಸಹಕಾರಿ ಸಂಘದ ಶೇರುಗಳ ಸಂಬಂ ವಾಗಿರುವ ಯಾವುದೇ ದಾಖಲೆ ಪತ್ರ; ಯಾವುದೇ ಡಿಬೆಂಚರು; ಡಿಬೆಂಚರುಗ ಹಸ್ತಾಂತರ ಪತ್ರ. ಇವು ಒಂದು ನೂರು ರೂಪಾಯಿಗಳಕಿಂತ ಹೆಚ್ಚು ಬೆ ಯಿರುವ ದಾಖಲೆ ಪತ್ರಗಳು ಇದ್ದರೂ ಸ್ಥಾವರ ಆಸ್ತಿಗೆ ಸಂಬಂಧ ಪಟ್ಟ ದಾಖ ಪತ್ರ ಇದ್ದರೂ ಅವುಗಳಿಗೆ ವಿನಾಯತಿ ಇದೆ. ಅಂದರೆ, ನೋಂದಣಿ ಕಾಯದೆಯ ಕಲಮು ೧೭ ಸಂಘದ ಈ ದಾಖಲೆ ಪತ್ರಗಳನ್ನು ಬಾಧಿಸುವುದಿಲ್ಲ. ಅದೆ ವಿನಾಯತಿ.

ದಾಖಲೆ ಪತ್ರವು ಯಾರೊಬ್ಬರ ಹಕ್ಕು, ಅಧಿಕಾರ, ಇಲ್ಲವೆ ಹಿತಾಸಕ್ತಿಯನ್ನು ಮತ್ತೊಬ್ಬರಿಗೆ ಹಸ್ತಾಂತರಿಸುವುದನ್ನು ದಾಖಲೆ ತೋರಿಸುವುದು. ಹಕ್ಕು, ಅಧಿಕಾರ ಇಲ್ಲವೆ ಹಿತಾಸಕ್ತಿ ನಿರ್ಮಾಣ ಮಾಡುವ, ಘೋಷಿಸುವ, ಒಪ್ಪಿಸಿ ಕೊಡುವ, ಮಿತ ಮಾಡುವ ಇಲ್ಲವೆ ನಷ್ಟ ಮಾಡುವ ಕ್ರಮವನ್ನು ಸೂಚಿಸುವ ದಾಖಲೆ ಪತ್ರವು ಅದು. ಸ್ಥಾವರ ಆಸ್ತಿಗೆ ಸಂಬಂಧ ಪಟ್ಟು, ೧೦೦ ರೂಪಾಯಿ ಕಿಂತ ಹೆಚ್ಚು ಬೆಲೆ ಇರುವ, ಹಕ್ಕು, ಅಧಿಕಾರ, ಇಲ್ಲವೆ ಹಿತಾಸಕ್ತಿಗೆ ಸಂಬಂಧ ಪಟ್ಟ ವ್ಯವಹಾರ ಇದ್ದರೂ ಅದರ ವಿಷಯ ಒಳಗೊಂಡಿದ್ದ ದಾಖಲೆ ಪತ್ರವನ್ನು ನೋಂದಾಯಿಸುವ ಆವಶ್ಯಕತೆ ಇಲ್ಲ. ನೋಂದಾಯಿಸದೇ ಇದ್ದರೂ ಅವು ರದ್ದು ಅಲ್ಲ.

ಶೇರುಗಳು ಬಂಡವಲಿನ ಪಾಲು ತೋರಿಸುವುವು. ಡಿಬೆಂಚರುಗಳು ಸಾಲ ಪತ್ರಗಳು ಇದ್ದ ಹಾಗೆ. ಸಂಘಕ್ಕೆ ಧನ ಬೇಕಾದಾಗ ಶೇರುಗಳ ಮುಖಾಂತರ ಇಲ್ಲವೆ ಸಾಲ—ಡಿಬೆಂಚರ ಮುಖಾಂತರ ಪಡೆಯುವುದು.

## ೩೯. ಸಹಕಾರಿ ಸಂಘಗಳ ಪರವಾಗಿ ಮಾಡಲಾದ ಕಾಗದ ಪತ್ರಗಳ ನೋಂದಣಿ

(೧) ೧೯೦೮ (ಕೇಂದ್ರ ಕಾಯಿದೆ ನಂ. ೧೬—೧೯೦೮) ಇಂಡಿಯನ್ ರಜಿಸ್ಟ್ರೇಶನ್ ಆ್ಯಕ್ಟದಲ್ಲಿ ಏನೇ ಹೇಳಲಾಗಿದ್ದರೂ ಸಹಕಾರಿ ಸಂಘದ ಕಮಿಟಿಯ ಯಾವುದೇ ಸದಸ್ಯನು, ಸೆಕ್ರೆಟರಿ, ಇಲ್ಲವೆ ಬೇರೆ ಅಧಿಕಾರಿಯು ಇಲ್ಲವೆ ಸಹಕಾರ ಖಾತೆಯ ಯಾವುದೇ ಅಧಿಕಾರಿಯು ಸಹಕಾರಿ ಸಂಘದ ಪರವಾಗಿ ತಾನು ತನ್ನ ಅಧಿಕಾರಪದ ಸಾಮರ್ಥ್ಯದ ಮೂಲಕ ಮಾಡಿಕೊಟ್ಟ ಯಾವುದೇ ದಾಖಲೆ ಪತ್ರದ ನೋಂದಣಿಯ ಸಂಬಂಧವಾಗಿ ಇರುವ ಯಾವುದೇ ಪ್ರಕರಣದಲ್ಲಿ ನೋಂದಣಿ ಮಾಡಿಸುವುದರ ಸಲುವಾಗಿ ಇಲ್ಲವೆ ಆ ಕಾಯಿದೆಯ ಕಲಮು ೫೮ ರಲ್ಲಿ ಹೇಳಿದಂತೆ ಸಹಿ ಮಾಡುವದಕ್ಕೆ ಸ್ವತಃ ಇಲ್ಲವೆ ಏಜಂಟನ ಮೂಲಕ ಹಾಜರ ಇರುವ ಆವಶ್ಯಕತೆ ಇರತಕ್ಕದ್ದಲ್ಲ.

(೨) ಯಾವುದೇ ದಾಖಲೆ ಪತ್ರವು ಹಾಗೆ ಮಾಡಿ ಕೊಡಲ್ಪಟ್ಟಾಗ, ಯಾವ ನೋಂದಣಿ ಅಧಿಕಾರಿಗೆ ಆ ದಾಖಲೆ ಪತ್ರವು ನೋಂದಣಿಗಾಗಿ ಸಾದರಪಡಿಸಲ್ಪಟ್ಟಿರುವುದೋ ಅವನು, ತನಗೆ ಯೋಗ್ಯವೆಂದು ಅನ್ನಿಸಿದರೆ, ಆ ದಾಖಲೆ ಪತ್ರದ ಸಂಬಂಧವಾಗಿ ಅಂತಹ ಸದಸ್ಯ, ಸೆಕ್ರೆಟರಿ, ಇಲ್ಲವೆ ಅಧಿಕಾರಿಗೆ ಮಾಹಿತಿಗಾಗಿ ಬರೆದುಕೊಳ್ಳಬಹುದು ಮತ್ತು ಆ ದಾಖಲೆ ಪತ್ರವು ಅವನಿಂದ ಮಾಡಿಕೊಡಲ್ಪಟ್ಟಿದೆಯೆಂದು ಅವನಿಗೆ ಮನವರಿಕೆಯಾದರೆ, ಆ ದಾಖಲೆ ಪತ್ರವನ್ನು ನೋಂದಾಯಿಸತಕ್ಕದ್ದು.

**ವಿವೇಚನೆ**

ಯಾವುದೇ ದಾಖಲೆಪತ್ರವು ನೋಂದಣಿ ಮಾಡಿಸಲ್ಪಡಬೇಕೆಂದು ಭಾರತದ ನೋಂದಣಿ ಕಾಯಿದೆಯ ಪ್ರಕಾರ ಇರುವಾಗ ಅದು ಸಹಕಾರಿ ಸಂಘಕ್ಕೆ ಅನ್ವಯಿಸುತ್ತಿರುವಾಗ ಸಹಕಾರಿ ಸಂಘದ ಪರವಾಗಿ ಮಾಡಿಕೊಡಲ್ಪಟ್ಟ ದಾಖಲೆ ಪತ್ರಗಳು ನೋಂದಣಿ ಮಾಡಲ್ಪಬೇಕು. ಆಗ ಆ ಕಾಗದನ್ನು ನೋಂದಣಿ ಅಧಿಕಾರಿಯ ಎದುರು ಸಾದರಪಡಿಸಲು ಕಾಗದನಮಾಡಿಕೊಟ್ಟವರು ಸ್ವತಃ ಇಲ್ಲವೆ ಏಜಂಟನ ಮೂಲಕ ಹಾಜರ ಇರಬೇಕಾಗುವುದು ಎಂದು ನೋಂದಣಿ ಕಾಯಿದೆಯಲ್ಲಿ ಹೇಳಿದೆ. ಅಲ್ಲಿ ಏನೇ ಹೇಳಿದ್ದರೂ ಈ ಕಾಯಿದೆಯ ಕಲಮು ೩೯ ರ ಮೂಲಕ ಹಾಗೆ ಸ್ವತಃ ಹಾಜರ ಇರುವ ಇಲ್ಲವೆ ಏಜೆಂಟನ ಮೂಲಕ ಹಾಜರ ಇರುವ ಆವಶ್ಯಕತೆಯಿಲ್ಲ. ಹೀಗೆ ಹಾಜರಿಯ ಬಗ್ಗೆ ವಿನಾಯತಿ ಪಡೆಯಲು ಈ ಪರಿಸ್ಥಿತಿ ಇರಬೇಕು.

ದಾಖಲೆಪತ್ರವು ಸಹಕಾರಿ ಸಂಘದ ಪರವಾಗಿ ಮಾಡಲ್ಪಟ್ಟಿರಬೇಕು. ಅದನ್ನು ಸಂಘದ ಕಮಿಟಿಯ ಸದಸ್ಯ, ಸೆಕ್ರೆಟರಿ ಇಲ್ಲವೆ ಸಂಘದ ಬೇರೆ ಅಧಿಕಾರಿ ಇಲ್ಲವೆ ಸಹಕಾರ ಖಾತೆಯ ಅಧಿಕಾರಿ, ಸಂಘದ ಪರವಾಗಿ ಮಾಡಿಕೊಟ್ಟಿರಬೇಕು. ಅವನು ತನ್ನ ಅಧಿಕಾರ ಪದದ ಸಾಮರ್ಥ್ಯದಿಂದ ಮಾಡಿಕೊಟ್ಟಿರಬೇಕು.

ಈ ಪರಿಸ್ಥಿತಿ ಇರುವಾಗ ದಾಖಲೆ ಪತ್ರ ಮಾಡಿಕೊಟ್ಟವನು ಸ್ವತಃ ಇಲ್ಲವೆ ಏಜೆಂಟನ ಮೂಲಕ ನೋಂದಣಿ ಅಧಿಕಾರಿಯ ಎದುರಿಗೆ ನೋಂದಣಿ ಸಂಬಂಧವಾಗಿರುವ ಪ್ರಕರಣ ಇಲ್ಲವೆ ಅದನ್ನು ಸಹಿ ಮಾಡಲಿಕ್ಕೆ ಹಾಜರ ಇರುವ ಆವಶ್ಯಕತೆ ಇಲ್ಲ.

ಆದರೆ ಹೀಗೆ ಸಹಕಾರಿ ಸಂಘದ ಪರವಾಗಿ ನೋಂದಣಿಗೆ ಬಂದ ದಾಖಲೆ ಪತ್ರವನ್ನು ಅದರಲ್ಲಿಯ ಸಹಿಯ ಬಗ್ಗೆ, ಕಾಣಿಸಿದ ಸಂಗತಿಯ ಬಗ್ಗೆ, ನೋಂದಣಿ ಅಧಿಕಾರಿಯು ಸಂಬಂಧಪಟ್ಟ ಆ ವ್ಯಕ್ತಿಗೆ ಬರೆದು ಮಾಹಿತಿ ಪಡೆದು ಆ ದಾಖಲೆ ಪತ್ರವು ಅವನಿಂದ ಸಂಘದ ಪರವಾಗಿ ಮಾಡಿಕೊಡಲ್ಪಟ್ಟಿದೆಯೆಂದು ಮನವರಿಕೆ ಮಾಡಿಕೊಂಡು ನೋಂದಣಿ ಮಾಡಿಕೊಳ್ಳತಕ್ಕದ್ದು.

ಅಂದರೆ ಸಹಕಾರಿ ಸಂಘದ ಪರವಾಗಿ ಆದ ದಾಖಲೆ ಪತ್ರಗಳ ನೋಂದಣಿಗಾಗಿ ವೈಯುಕ್ತಿಕವಾಗಿ ಯಾವ ಅಧಿಕಾರಿ ಸಮಕ್ಷಮ ಬಂದು ನೋಂದಣಿ ಕಚೇರಿಯಲ್ಲಿ ಹಾಜರ ಮಾಡುವ ಆವಶ್ಯಕತೆಯಿಲ್ಲ. ಈ ವಿನಾಯತಿಯನ್ನು ಈ ಕಲಮು ಕೊಡುತ್ತಗೆ.

## ಪ್ರಕರಣ : ೬ ಸಹಕಾರಿ ಸಂಘಗಳಿಗೆ ಸರಕಾರದ ಸಹಾಯ

### ೪೦. ಸಹಕಾರಿ ಚಳವಳಿಗೆ ಪುರಸ್ಕಾರ

ರಾಜ್ಯದಲ್ಲಿ ಸಹಕಾರಿ ಒಕ್ಕಲುತನ ಮಾಡುವುದಕ್ಕೆ ಉತ್ತೇಜನ ಕೊಡುವುದನ್ನು ಒಳಗೊಂಡು ಸಹಕಾರಿ ಚಳವಳಕ್ಕೆ ಉತ್ತೇಜನ ಕೊಡುವುದು ಹಾಗೂ

ಅದನ್ನು ಪುರಸ್ಕಾರ ಮಾಡುವುದು ಮತ್ತು ಈ ದಿಶೆಯಲ್ಲಿ ಆವಶ್ಯಕವೆನ್ನಿಸಬಹುದಾದಂತಹ ಕ್ರಮಗಳನ್ನು ಕೈಕೊಳ್ಳುವುದು ರಾಜ್ಯ ಸರಕಾರದ ಕರ್ತವ್ಯವಾಗಿರತಕ್ಕದ್ದು.

**ವಿವೇಚನೆ**

ರಾಜ್ಯದಲ್ಲಿ ಸಹಕಾರ ಚಳವಳವನ್ನು ನಡೆಸುವುದು ಯಾರ ಕೆಲಸ? ಸಹಕಾರದಿಂದ ನಾಗರಿಕರ ಹಿತ ಸಾಧಿಸುವುದು. ಆದರೆ ನಾಗರಿಕರು ತಾವೇ ಸಹಕಾರದ ತತ್ವಗಳನ್ನು ತಿಳಿದುಕೊಂಡು ಸಹಕಾರಿ ಸಂಘಗಳನ್ನು ರಚಿಸಿಕೊಂಡು ಮುಂದರಿಯಬಹುದು. ಆದರೆ, ನಮ್ಮ ದೇಶದಲ್ಲಿಯ ಸಾಮಾನ್ಯ ನಾಗರಿಕನಿಗೆ ಹೆಚ್ಚು ಶಿಕ್ಷಣ ಇಲ್ಲದ್ದರಿಂದ ಅವನು ತಾನೇ ಮುಂದೆ ಬಂದು ತನ್ನ ಹಿತ ಸಾಧನೆಯ ಕಾರ್ಯ ಮಾಡಿಕೊಳ್ಳಲು ಸಾಧ್ಯವಾಗಲಿಕ್ಕಿಲ್ಲವೆಂದು ತಿಳಿದು ಕಾಯಿದೆಯಿಂದ ಈ ಕರ್ತವ್ಯವನ್ನು ಸರಕಾರದ ಮೇಲೆ ಹಾಕಲಾಗಿದೆ. ಸಹಕಾರಿ ಚಳವಳಕ್ಕೆ ಉತ್ತೇಜನ ಕೊಡುವುದು ಅದನ್ನು ಪುರಸ್ಕಾರ ಮಾಡುವುದು ಸರಕಾರದ ಕರ್ತವ್ಯವಾಗಿದೆ. ನಮ್ಮ ಸರಕಾರವು ಕಲ್ಯಾಣ ರಾಷ್ಟ್ರವನ್ನು ನಿರ್ಮಾಣ ಮಾಡುವುದರಲ್ಲಿ ಕಂಕಣಬದ್ಧವಾಗಿರುವುದರಿಂದ ಯಾವುದನ್ನು ಸಾರ್ವಜನಿಕರು ತಮ್ಮ ಸ್ವಂತ ಸ್ಫೂರ್ತಿಯಿಂದ ಮಾಡುವುದಿಲ್ಲವೋ ಅಂತಹ ಸಂದರ್ಭಗಳಲ್ಲಿ ಸರಕಾರವು ಮುಂದೆ ಬಂದು ಉತ್ತೇಜನ ಕೊಡುವುದು ಸರಕಾರದ ಕರ್ತವ್ಯವಾಗುವುದು. ಈ ಸಹಕಾರಿ ಚಳವಳದಲ್ಲಿ ಸಹಕಾರಿ ಒಕ್ಕಲುತನವೂ ಒಳಗೊಂಡಿದೆ ಎಂಬುದನ್ನು ಇಲ್ಲಿ ಪ್ರತ್ಯೇಕವಾಗಿ ಹೇಳಲಾಗಿದೆ. ಸದ್ಯಕ್ಕೆ ದೇಶದಲ್ಲಿ ಸಹಕಾರಿ ಒಕ್ಕಲುತನದ ವಿಷಯವು ಚರ್ಚಿತವಾಗುತ್ತಿದೆ. ಆ ದಿಶೆಯಲ್ಲಿ ಸರಕಾರವು ಆವಶ್ಯಕ ಕ್ರಮಗಳನ್ನು ಕೈಕೊಳ್ಳುವುದು ಕರ್ತವ್ಯವಾಗಿರತಕ್ಕದ್ದು ಎಂದು ಈ ಕಲಮಿನಲ್ಲಿ ಹೇಳಲಾಗಿದೆ. ಉತ್ತೇಜನ ಕೊಡುವುದು-ಪುರಸ್ಕಾರ ಮಾಡುವುದು ಕರ್ತವ್ಯವೆಂದು ಹೇಳಿದ್ದರಿಂದ ಅದನ್ನು ಒತ್ತಾಯದಿಂದ ಹೇರಲಾಗುತ್ತಿದೆ ಎಂದು ತಿಳಿಯತಕ್ಕದ್ದಲ್ಲ. ಒತ್ತಾಯದ ಪ್ರಶ್ನೆ ಇಲ್ಲ. ಆದರೆ ಸಾರ್ವಜನಿಕರಲ್ಲಿ ಸಹಕಾರದ ತತ್ವದ ಬಗ್ಗೆ ತಿಳಿವಳಿಕೆ ಹುಟ್ಟಿಸುವುದು; ಮುಂದೆ ಬಂದವರಿಗೆ ಉತ್ತೇಜನ ಕೊಡುವುದು; ಪುರಸ್ಕಾರ ಕೊಡುವುದು; ಈ ಸಂಬಂಧದಲ್ಲಿ ಸರಕಾರವು ಮುಂದೆ ಬರಬೇಕೆಂದೂ ಹಾಗೆ ಮಾಡುವುದು ಅದರ ಕರ್ತವ್ಯವೆಂದೂ ಇಲ್ಲಿ ಹೇಳಲಾಗಿದೆ. ಸರಕಾರದ ಈ ಕಾರ್ಯಕ್ಕೆ ಶಾಸನಿಕ ಮನ್ನಣೆ, ಅಧಿಕಾರ ಇದೆಯೆಂಬುದೇ ಇಲ್ಲಿ ಹೇಳಿದ ಮಾತು.

**೪೧. ಸಹಕಾರಿ ಸಂಘಗಳಲ್ಲಿ ರಾಜ್ಯ ಸರಕಾರದ ಪ್ರತ್ಯಕ್ಷ ಪಾಲುಗಾರಿಕೆ**

(೧) ನಿಯಮಿತ ಹೊಣೆಗಾರಿಕೆಯುಳ್ಳ ಸಹಕಾರಿ ಸಂಘದ ಶೇರು ಬಂಡವಲಿಗೆ ರಾಜ್ಯ ಸರಕಾರವು ಪ್ರತ್ಯಕ್ಷವಾಗಿ ವಂತಿಗೆ ಸಲ್ಲಿಸಬಹುದು.

(೨) ಯಾವುದೇ ಕರಾರು ಪತ್ರದಲ್ಲಿ ಇದರ ವಿರುದ್ಧವಾಗಿ ಹೇಳಿದ್ದರೂ ಇಂತಹ ಯಾವುದೇ ಸಹಕಾರಿ ಸಂಘದ ಶೇರುಗಳ ಮೇಲೆ ಸಂಘದ ಬೇರೆ ಯಾವುದೇ ಶೇರುಧಾರಕನಿಗೆ ಕೊಡಬಹುದಾದಂತಹ ಲಾಭಾಂಶದ ದರಕಿಂತ ಹೆಚ್ಚಿನ ದರದಲ್ಲಿ ಪಡೆಯಲು ರಾಜ್ಯ ಸರಕಾರವು ಬಾಧ್ಯಸ್ಥವಾಗಿರತಕ್ಕದ್ದಲ್ಲ.

**ವಿವೇಚನೆ**

ಈ ಕಲಮಿನಲ್ಲಿ ಎರಡು ಮಾತುಗಳನ್ನು ಹೇಳಲಾಗಿದೆ ಒಂದು, ಸರಕಾರವು ಸಹಕಾರೀ ಸಂಘದ ಶೇರು ಬಂಡವಲಿನಲ್ಲಿ ಪ್ರತ್ಯಕ್ಷ ಶೇರುಗಳನ್ನು ಪಡೆಯಬಹುದು. ಅಂದರೆ ಸರಕಾರವು ಸಹಕಾರಿ ಸಂಘದ ಶೇರುದಾರ ಆಗಬಹುದು.

ಎರಡನೆಯ ಮಾತು: ಶೇರುದಾರ ಆಗುವವನು ಸಂಘದ ಜತೆಗೆ ಕರಾರು ಮಾಡಿಕೊಂಡಂತೆ. ಆ ಕರಾರಿನಲ್ಲಿ ಲಾಭಾಂಶದ ಬಗ್ಗೆ ಏನೇ ಕರಾರು ಮಾಡಿಕೊಂಡಿದ್ದರೂ ಸರಕಾರವು ಶೇರುದಾರ ಆಗಿರುವಾಗ ಉಳಿದ ಶೇರುದಾರರಿಗೆ ಸಿಕ್ಕುವ ಲಾಭಾಂಶದ ದರದಕಿಂತ ಹೆಚ್ಚಿನ ದರದಿಂದ ಲಾಭಾಂಶ ಪಡೆಯಲು ಹಕ್ಕು ಇರತಕ್ಕದ್ದಲ್ಲ. ಸರಕಾರ ಎಂದಾಕ್ಷಣ ಅದಕ್ಕೆ ಹೆಚ್ಚಿನ ಸವಲತ್ತು ಇಲ್ಲ ಎಂಬುದನ್ನು ಇಲ್ಲಿ ಹೇಳಲಾಗಿದೆ. ಹೆಚ್ಚಿಗೆ ಒಂದು ವೇಳೆ ಪಡೆದರೆ ಸರಕಾರವು ಸಾರ್ವಜನಿಕರ ಹಿತವನ್ನು ಸಾಧಿಸಿದಂತಾಗುವುದಿಲ್ಲ. ಚಳವಳಕ್ಕೆ ಪುರಸ್ಕಾರ, ಉತ್ತೇಜನ ಕೊಟ್ಟಂತೆ ಆಗುವುದಿಲ್ಲ. ಶೇರುದಾರರು ಎಲ್ಲರೂ ಸಮಾನರು. ಸಮಾನತೆಯು ಸಹಕಾರದ ಮೂಲ ತತ್ವ. ಸರಕಾರಕ್ಕೆ ಹೆಚ್ಚಿನ ಸ್ಥಾನ ಇಲ್ಲ. ಸರಕಾರವು ಶೇರುದಾರ ಆಗುವುದು ಸಂಘಕ್ಕೆ ಸಹಾಯ ಸಲ್ಲಿಸುವುದಕ್ಕಾಗಿ. ಸಾರ್ವಜನಿಕರಲ್ಲಿ ಸಂಘದ ಬಗ್ಗೆ ವಿಶ್ವಾಸ ಹುಟ್ಟಿಸುವುದಕ್ಕಾಗಿ ಎಂಬುದನ್ನು ತಿಳಿಯಬೇಕು- ಅದಕ್ಕಾಗಿ ಸರಕಾರದ ಶೇರುಗಳ ಮೇಲಿನ ಲಾಭಾಂಶಕ್ಕೆ ಈ ನಿರ್ಬಂಧವನ್ನು ಹಾಕಲಾಗಿದೆ.

ಇದು ನಿಯಮಿತ ಹೊಣೆಗಾರಿಕೆಯ ಸಂಘಗಳಿಗೆ ಸಂಬಂಧವಾದದ್ದು ಎಂದು ತಿಳಿಯಬೇಕು.

## ೪೨. ಸಹಕಾರಿ ಸಂಘಗಳಲ್ಲಿ ರಾಜ್ಯ ಸರಕಾರದ ಅಪ್ರತ್ಯಕ್ಷ ಪಾಲುಗಾರಿಕೆ.

ನಿಯಮಿತ ಹೊಣೆಗಾರಿಕೆಯುಳ್ಳ ಇತರ ಸಹಕಾರಿ ಸಂಘಗಳಲ್ಲಿ ಶೇರುಗಳನ್ನು ಕೊಳ್ಳುವುದರ ಸಲುವಾಗಿ ಸಹಕಾರಿ ಸಂಘ (ಈ ಪ್ರಕರಣದಲ್ಲಿ ಇದಕ್ಕೆ ಶಿಖರ ಸಂಘವೆಂದು ಕರೆಯಲಾಗಿದೆ.) ಕ್ಕೆ ಹಣವನ್ನು ರಾಜ್ಯ ಸರಕಾರವು ಹಣ ವಿನಿಯೋಗದ ಕಾಯಿದೆಯ ಅಂಕಿತವಾಗಿ ಅನುಕೂಲ ಮಾಡಬಹುದು.

**ವಿವೇಚನೆ**

ಸಹಕಾರಿ ಸಂಘಗಳ ಶೇರುಗಳನ್ನು ಕೊಳ್ಳಲು ಮತ್ತೊಂದು ಸಹಕಾರಿ ಸಂಘಕ್ಕೆ ಸರಕಾರವು ಹಣದ ಸೌಕರ್ಯ ಒದಗಿಸಬಹುದು. ಶೇರು ಕೊಳ್ಳುವ ಈ ಸಹಕಾರಿ ಸಂಘಕ್ಕೆ ಶಿಖರ ಸಂಘ ಎಂದು ಹೆಸರು. ಸರಕಾರವು ಹೀಗೆ ಮತ್ತೊಂದು ಸಂಘದ ಮುಖಾಂತರ ಪಾಲುಗಾರಿಕೆ ಪಡೆಯುವುದರಿಂದ ಇದಕ್ಕೆ ಅಪ್ರತ್ಯಕ್ಷ ಪಾಲುಗಾರಿಕೆ ಎಂದು ಹೇಳಲಾಗಿದೆ.

ಯಾವ ಸಂಘದ ಶೇರುಗಳನ್ನು ಕೊಳ್ಳುವುದಿದೆಯೋ ಅದು ನಿಯಮಿತ ಹೊಣೆಗಾರಿಕೆಯ ಸಂಘವಾಗಿರತಕ್ಕದ್ದು.

ಹಣವನ್ನು ಸರಕಾರವು ಶಿಖರ ಸಂಘಕ್ಕೆ ಅನುಕೂಲ ಮಾಡಿಕೊಡುವುದೆಂದಾಗ ಅದು ಹಣ ವಿನಿಯೋಗದ ಕಾಯಿದೆಯ ಅಂಕಿತವಾಗಿ ಕೊಡುವುದು. ಸರಕಾರವು ತನ್ನ ಹತ್ತಿರವಿದ್ದ ಹಣದ ವಿನಿಯೋಗ ಹೇಗೆ ಮಾಡಬೇಕೆಂಬ ಬಗ್ಗೆ ಕಾಯಿದೆ ಮಾಡುತ್ತದೆ. ಆ ಕಾಯಿದೆಗೆ ಹಣ ವಿನಿಯೋಗದ ಕಾಯಿದೆ ಎಂದು ಹೆಸರು. ಅದರ ಅಂಕಿತವಾಗಿ ಈ ರೀತಿಯಾಗಿ ಶಿಖರ ಸಂಘಕ್ಕೆ ಇತರ ಸಹಕಾರಿ ಸಂಘದಲ್ಲಿ ಶೇರು ಕೊಳ್ಳಲು ಹಣವನ್ನು ರಾಜ್ಯ ಸರಕಾರವು ಒದಗಿಸಬಹುದು.

**೪೩. ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ.**

(೧) ಕಲಮು ೪೨.ರ ಅನ್ವಯವಾಗಿ ರಾಜ್ಯ ಸರಕಾರದಿಂದ ಅನುಕೂಲ ಮಾಡಿಕೊಡಲ್ಪಟ್ಟ ಹಣದಿಂದ ಶಿಖರ ಸಂಘವು "ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ" ಎಂಬ ಹೆಸರಿನಿಂದ ಒಂದು ನಿಧಿಯನ್ನು ಸ್ಥಾಪಿಸತಕ್ಕದ್ದು.

(೨) "ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ" ಯನ್ನು ಶಿಖರ ಸಂಘವು ಈ ಕೆಳಗಿನ ಉದ್ದೇಶಗಳಿಗಾಗಿ—

(ಅ) ನಿಯಮಿತ ಹೊಣೆಗಾರಿಕೆಯುಳ್ಳ ಇತರ ಸಹಕಾರಿ ಸಂಘಗಳಲ್ಲಿಯ ಶೇರುಗಳನ್ನು ಪ್ರತ್ಯಕ್ಷವಾಗಿ ಕೊಳ್ಳುವುದರ ಸಲುವಾಗಿ;

(ಬ) ಇತರ ಸಹಕಾರಿ ಸಂಘ ( ಈ ಪ್ರಕರಣದಲ್ಲಿ ಇನ್ನು ಮುಂದೆ ಪ್ರಾಥಮಿಕ ಸಂಘಗಳೆಂದು ಕರೆಯಲಾಗಿದೆ. ) ಗಳಲ್ಲಿ ಶೇರುಗಳನ್ನು ಕೊಳ್ಳಲು ಅನುಕೂಲ ಮಾಡಿಕೊಡುವುದಕ್ಕಾಗಿ ಸಹಕಾರಿ ಸಂಘ ( ಈ ಮುಂದೆ ಈ ಪ್ರಕರಣದಲ್ಲಿ ಕೇಂದ್ರ ಸಂಘವೆಂದು ಕರೆಯಲಾಗಿದೆ ) ಕ್ಕೆ ಹಣವನ್ನು ಒದಗಿಸುವುದಕ್ಕಾಗಿ;

(ಕ) ಈ ಪ್ರಕರಣದ ಶರತುಗಳ ಅನುಸಾರವಾಗಿ ರಾಜ್ಯ ಸರಕಾರಕ್ಕೆ ಹಣವನ್ನು ಸಲ್ಲಿಸುವುದಕ್ಕಾಗಿ;

ಉಪಯೋಗಿಸತಕ್ಕದ್ದು ಮತ್ತು ಬೇರೆ ಯಾವ ಉದ್ದೇಶಗಳಿಗಾಗಿ ಅಲ್ಲ.

**ವಿವೇಚನೆ**

ಕಲಮು ೮೨ ರ ಪ್ರಕಾರ ರಾಜ್ಯ ಸರಕಾರವು ತನ್ನ ಅಪ್ರತ್ಯಕ್ಷ ಪಾಲುಗಾರಿಕೆಯ ಸಲುವಾಗಿ ಶಿಖರ ಸಂಘಕ್ಕೆ ಹಣವನ್ನು ಒದಗಿಸುವುದು. ಆ ಹಣವನ್ನು "ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ" ಎಂಬ ಹೆಸರಿನಿಂದ ಒಂದು ಪ್ರತ್ಯೇಕ ನಿಧಿಯನ್ನು ಸ್ಥಾಪಿಸತಕ್ಕದ್ದು. ಆ ನಿಧಿಯಲ್ಲಿಯ ಹಣವನ್ನು ಯಾವ ಉದ್ದೇಶಗಳಿಗಾಗಿ ಉಪಯೋಗಿಸಬೇಕೆಂಬ ಬಗ್ಗೆ ಇಲ್ಲಿ ಹೇಳಲಾಗಿದೆ.

ಸಹಕಾರಿ ಸಂಘಗಳ ಸ್ವರೂಪ ವ್ಯವಸ್ಥೆ ಹೀಗಿದೆ. ಪ್ರಾಥಮಿಕ ಸಂಘ; ಕೇಂದ್ರ ಸಂಘ; ಶಿಖರ ಸಂಘ ಎಂದು. ಅವು ಕಾರ್ಯ ಮಾಡುವ ಕ್ಷೇತ್ರದ ಮೂಲಕ ವಿಭಾಗವಾದುದು ಇದು. ಶಿಖರ ಸಂಘವು ಆ ನಿಧಿಯಿಂದ ಕೇಂದ್ರ ಸಂಘಕ್ಕೆ ಹಣ ಕೊಡುವುದು. ಕೇಂದ್ರ ಸಂಘವು ಪ್ರಾಥಮಿಕ ಸಂಘಗಳಲ್ಲಿ ಶೇರು ಕೊಳ್ಳಲು ಅದನ್ನು ಉಪಯೋಗಿಸುವುದು. ಈ ಪ್ರಾಥಮಿಕ ಸಂಘವು ನಿಯಮಿತ ಹೊಣೆಗಾರಿಕೆಯುಳ್ಳದ್ದು ಇರಬೇಕು. ಅಲ್ಲದೆ, ನಿಯಮಿತ ಹೊಣೆಗಾರಿಕೆಯುಳ್ಳ ಸಹಕಾರಿ ಸಂಘದ ಶೇರುಗಳನ್ನು ಪ್ರತ್ಯಕ್ಷವಾಗಿ ಕೊಳ್ಳಲೂ ಕೂಡ ಈ ನಿಧಿಯಲ್ಲಿಯ ಹಣದ ಉಪಯೋಗ ಮಾಡತಕ್ಕದ್ದು. ಮತ್ತು ಈ ಪ್ರಕರಣದಲ್ಲಿ ಹೇಳಿದಂತೆ ಸರಕಾರಕ್ಕೆ ಸಲ್ಲಿಸಬೇಕಾದ ಹಣವನ್ನು ಕೊಡಲಿಕ್ಕೆ ಉಪಯೋಗ ಮಾಡತಕ್ಕದ್ದು.

ಈ ಉದ್ದೇಶಗಳ ಹೊರತಾಗಿ ಬೇರೆ ಯಾವುದಕ್ಕೂ ಈ ನಿಧಿಯ ಹಣವು ಉಪಯೋಗಿಸಲ್ಪಡತಕ್ಕದ್ದಲ್ಲ.

**೮೪. ಸರಕಾರದ ಪಾಲುಗಾರಿಕೆಯ ಉಪನಿಧಿ.**

(೧) 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯಿಂದ ಶಿಖರ ಸಂಘವು ಅನುಕೂಲ ಮಾಡಿಕೊಟ್ಟ ಹಣದಿಂದ ಕೇಂದ್ರ ಸಂಘವು "ಸರಕಾರದ ಪಾಲುಗಾರಿಕೆಯ ಉಪನಿಧಿ" ಎಂಬ ಹೆಸರಿನಿಂದ ಒಂದು ನಿಧಿಯನ್ನು ಸ್ಥಾಪಿಸತಕ್ಕದ್ದು.

(೨) 'ಸರಕಾರದ ಪಾಲುಗಾರಿಕೆಯ ಉಪನಿಧಿ"ಯನ್ನು ಕೇಂದ್ರ ಸಂಘವು—

(ಅ) ಪ್ರಾಥಮಿಕ ಸಂಘಗಳ ಶೇರುಗಳನ್ನು ಕೊಳ್ಳುವುದರ ಉದ್ದೇಶಕ್ಕಾಗಿ;

(ಬ) ಈ ಪ್ರಕರಣದ ಶರತುಗಳ ಅನುಸಾರವಾಗಿ ಶಿಖರ ಸಂಘಕ್ಕೆ ಹಣವನ್ನು ಸಲ್ಲಿಸುವುದರ ಉದ್ದೇಶಕ್ಕಾಗಿ,

ಉಪಯೋಗಿಸತಕ್ಕದ್ದು ಮತ್ತು ಬೇರೆ ಯಾವ ಉದ್ದೇಶಕ್ಕೆ ಉಪಯೋಗಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಸರಕಾರವು ಶಿಖರ ಸಂಘಕ್ಕೆ ಹಣವನ್ನು ಒದಗಿಸಿಕೊಡುವುದು. ಶಿಖರ ಸಂಘವು ಆ ಹಣದಿಂದ "ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ" ಎಂದು ನಿಧಿ ಸ್ಥಾಪಿಸುವುದು. ಈ ನಿಧಿಯೊಳಗಿಂದ ಕೇಂದ್ರ ಸಂಘಕ್ಕೆ ಶಿಖರ ಸಂಘವು ಹಣವನ್ನು ಒದಗಿಸುವುದು. ಕೇಂದ್ರ ಸಂಘಕ್ಕೆ, ಹಾಗೆ ಒದಗಿಸಲಾದ ಹಣದಿಂದ ಅದು 'ಸರಕಾರದ ಪಾಲುಗಾರಿಕೆಯ ಉಪ ನಿಧಿ' ಎಂಬ ಹೆಸರಿನಿಂದ ನಿಧಿಯನ್ನು ಸ್ಥಾಪಿಸತಕ್ಕದ್ದು. ಈ ಉಪ ನಿಧಿಯೊಳಗಿಂದ ಕೇಂದ್ರ ಸಂಘವು ಪ್ರಾಥಮಿಕ ಸಂಘಗಳ ಶೇರುಗಳನ್ನು ಕೊಳ್ಳಬೇಕು; ಅಲ್ಲದೆ ಈ ಪ್ರಕರಣದಲ್ಲಿ ಹೇಳಿದ ಹಾಗೆ ಹಣವನ್ನು ಶಿಖರ ಸಂಘಕ್ಕೆ ಸಲ್ಲಿಸುವುದಕ್ಕಾಗಿ ಉಪಯೋಗಿಸಬೇಕು. ಈ ಎರಡು ರೀತಿಯ ಉಪಯೋಗವನ್ನು ಹೊರತು ಪಡಿಸಿ ಬೇರೆ ಯಾವ ಉದ್ದೇಶಕ್ಕಾಗಿ ಉಪ ನಿಧಿಯೊಳಗಿನ ಹಣವನ್ನು ಉಪಯೋಗಿಸತಕ್ಕದ್ದಲ್ಲ.

ಕಲಮು ೪೩ ಹಾಗು ೪೪ ಇವೆರಡೂ ಸರಕಾರದ ಹಣದಿಂದ ಸಹಕಾರಿ ಸಂಘಕ್ಕೆ ನೆರವನ್ನು ಒದಗಿಸಲು ಅನುಕೂಲ ಮಾಡಿಕೊಡುವುವು. ಸರಕಾರದಿಂದ ಶಿಖರ ಸಂಘಕ್ಕೆ, ಶಿಖರ ಸಂಘದಿಂದ ಕೇಂದ್ರ ಸಂಘಕ್ಕೆ, ಕೇಂದ್ರ ಸಂಘದಿಂದ ಪ್ರಾಥಮಿಕ ಸಂಘಕ್ಕೆ ಹೀಗೆ ಹಣವು ಇಳಿದು ಬಂದು ಸಹಕಾರಿ ಸಂಘಗಳಿಗೆ ಉಪಯೋಗವಾಗುವುದು. ಸರಕಾರವು ಹಣ ಕೊಡಬೇಕಾದರೆ ಆ ಹಣವು ಹಣ ವಿನಿಯೋಗದ ಕಾಯಿದೆಯ ಅಂಕಿತವಾಗಿ ಬರುವುದು. ಮುಂದೆ ಹಣದ ವಿತರಣವು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ, ಹಾಗೂ ಸರಕಾರದ ಪಾಲುಗಾರಿಕೆಯ ಉಪ ನಿಧಿ, ಇವುಗಳ ಮುಖಾಂತರ ಶಿಖರ ಸಂಘದಿಂದ ಹಾಗೂ ಕೇಂದ್ರ ಸಂಘದಿಂದ ಹಣದ ವ್ಯಾಪಕ ವಿತರಣವು ವಿಶಿಷ್ಟ ಉದ್ದೇಶಗಳಿಗಾಗಿ ಆಗುವುದು ಎಂಬ ಕ್ರಮ-ವಿಧಾನ-ಉದ್ದೇಶಗಳನ್ನು ಈ ಎರಡು ಕಲಮುಗಳಲ್ಲಿ ಹೇಳಿದೆ.

## ೪೫. ಶೇರುಗಳನ್ನು ಕೊಳ್ಳುವುದಕ್ಕೆ ರಾಜ್ಯಸರಕಾರದ ಒಪ್ಪಿಗೆ

ರಾಜ್ಯಸರಕಾರದ ಲಿಖಿತ, ಪೂರ್ವ ಒಪ್ಪಿಗೆ ಇದ್ದ ಹೊರತು, ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯೊಳಗಿನ ಇಲ್ಲವೆ ಸರಕಾರದ ಪಾಲುಗಾರಿಕೆಯ ಉಪನಿಧಿಯೊಳಗಿನ ಹಣದಿಂದ ಸಹಕಾರಿ ಸಂಘದ ಯಾವುದೇ ಶೇರುಗಳನ್ನು ಕೊಳ್ಳತಕ್ಕದ್ದಲ್ಲ.

**ವಿವೇಚನೆ**

ಈ ಕಲಮಿನಲ್ಲಿ ಹೇಳಿದ ಶೇರುಗಳನ್ನು ಕೊಳ್ಳುವುದೆಂದರೆ ಕಲಮು ೪೨, ೪೩ ಹಾಗೂ ೪೪ ರಲ್ಲಿ ಹೇಳಿದ ಮಾತುಗಳನ್ನು ಲಕ್ಷಿಸಿ ಎಂಬುದನ್ನು ನೆನೆಯಬೇಕು.

ಕಲಮು ೪೧ ರಲ್ಲಿ ಹೇಳಿದುದು ಸರಕಾರವು ಪ್ರತ್ಯಕ್ಷವಾಗಿ ಶೇರುಗಳನ್ನು ಕೊಳ್ಳುವ ಬಗ್ಗೆ ಇರುವುದರಿಂದ ಅಲ್ಲಿ ಒಪ್ಪಿಗೆಯ ಮಾತು ಬರುವದಿಲ್ಲ. ಅಪ್ರತ್ಯಕ್ಷವಾಗಿ ಪಾಲುಗಾರಿಕೆಯನ್ನು ಪಡೆಯಬೇಕೆಂದು ಶೇರುಗಳನ್ನು ಕೊಳ್ಳುವಾಗ ಮಾತ್ರ ಸರಕಾರದ ಲಿಖಿತ ಒಪ್ಪಿಗೆ ಅಗತ್ಯ. ಮುಖ್ಯ ನಿಧಿ ಇಲ್ಲವೆ ಉಪನಿಧಿಯೊಳಗಿನ ಹಣದಿಂದ ಶೇರುಗಳನ್ನು ಕೊಳ್ಳಬೇಕಾದಾಗ ಅದಕ್ಕಿಂತ ಮೊದಲು ರಾಜ್ಯಸರಕಾರ ದಿಂದ ಲಿಖಿತ ಒಪ್ಪಿಗೆಯನ್ನು ಪಡೆಯಬೇಕು. ಸರಕಾರವು ತಾನು ಯಾವ ಸಂಘ ದಲ್ಲಿ ಅಪ್ರತ್ಯಕ್ಷವಾಗಿ ಭಾಗಿಯಾಗಿರುವುದೆಂಬುದನ್ನು ತಿಳಿದುಕೊಳ್ಳಲು ನೆರವಾಗುವುದು.

**೪೬. ಕೆಲ ಶೇರುಗಳ ಸಂಬಂಧದಲ್ಲಿ ಹೊಣೆಗಾರಿಕೆ ಮಿತವಾಗಿರ ಬೇಕು**

ಸಹಕಾರಿ ಸಂಘದಲ್ಲಿ ಯಾವುದೇ ಶೇರುಗಳು—

(ಅ) ರಾಜ್ಯಸರಕಾರದಿಂದ; ಇಲ್ಲವೆ

(ಬ) ಸಂದರ್ಭಾನುಸಾರವಾಗಿ 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯೊಳಗಿಂದ ಇಲ್ಲವೆ 'ಸರಕಾರದ ಪಾಲುಗಾರಿಕೆಯ ಉಪನಿಧಿ'ಯೊಳಗಿಂದ ಶಿಖರ ಸಂಘದಿಂದ ಇಲ್ಲವೆ ಕೇಂದ್ರ ಸಂಘದಿಂದ

ಕೊಳ್ಳಲ್ಪಟ್ಟಿರುವಾಗ ಇಂತಹ ಶೇರುಗಳ ಸಂಬಂಧವಾಗಿರುವ ಹೊಣೆಗಾರಿ ಕೆಯು ಆ ಸಹಕಾರಿ ಸಂಘವು ದುಂಡುಸುತ್ತಲ್ಪಡುವ ಪ್ರಸಂಗ ಬಂದಾಗ, ಇಂತಹ ಶೇರುಗಳ ಸಂಬಂಧವಾಗಿ ಸಲ್ಲಿಸಲಾದ ಹಣಕ್ಕೆ ಮಿತವಾಗಿರತಕ್ಕದ್ದು.

**ವಿವೇಚನೆ**

ಕಲಮು ೪೧, ೪೨, ೪೩ ಹಾಗೂ ೪೪ ರಲ್ಲಿ ಹೇಳಿದಂತೆ ಶೇರುಗಳನ್ನು ಕೊಳ್ಳುವಾಗ ಆ ಸಹಕಾರಿ ಸಂಘವು ಮಿತವಾದ ಹೊಣೆಗಾರಿಕೆಯ ಸಂಘವಾಗಿರ ಬೇಕೆಂದು ಸೂಚಿಸಲಾಗಿದೆ. ಈ ಕಲಮಿನಲ್ಲಿ ಅದನ್ನು ಸ್ಪಷ್ಟಪಡಿಸಲಾಗಿದೆ. ಪ್ರತ್ಯಕ್ಷವಾಗಿ ಕೊಳ್ಳಲ್ಪಟ್ಟರು, ಅಪ್ರತ್ಯಕ್ಷವಾಗಿ ಕೊಳ್ಳಲ್ಪಟ್ಟರು, ಅದು ಶೇರುಗಳಿ ಗಾಗಿ ಸಲ್ಲಿಸಲಾದ ಹಣ ಮಟ್ಟಿಗೆ ಅದರ ಹೊಣೆಗಾರಿಕೆ ಇರತಕ್ಕದ್ದು. ಈ ಹೊಣೆ ಗಾರಿಕೆಯ ಪ್ರಶ್ನೆಯು ಆ ಸಂಘವು ದುಂಡುಸುತ್ತಲ್ಪಡುವ ಪ್ರಸಂಗ ಬಂದಾಗಿನ ಹೊಣೆಗಾರಿಕೆಯು ಎಂಬುದು ಹೇಳಲ್ಪಟ್ಟಿದೆ.

ಕಲಮು ೨ ರ (ಡ) ದಲ್ಲಿ ಮಿತ ಹೊಣೆಗಾರಿಕೆಯ ಸಂಘಗಳ ಬಗ್ಗೆ ಹೇಳಿದೆ. ಅಲ್ಲಿ ಹೇಳಿದ ಹೊಣೆಗಾರಿಕೆಯಕಿಂತ ಇಲ್ಲಿ ಹೇಳಿದ ಹೊಣೆಗಾರಿಕೆಯು ಬೇರೆಯಾಗಿದೆ. ಸಾಮಾನ್ಯ ಸದಸ್ಯರ ಹೊಣೆಗಾರಿಕೆಯು ಅಲ್ಲಿ ಹೇಳಲ್ಪಟ್ಟಿದೆ, ಇಲ್ಲಿ ಸರಕಾರವು ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಪಾಲುಗಾರಿಕೆಯನ್ನು ಪಡೆದಾಗ ಅದರ ಹೊಣೆ ಗಾರಿಕೆ ಅದು ಪಡೆದಿರುವ ಶೇರುಗಳ ಬಗ್ಗೆ ಕೊಡಲಾದ ಹಣದ ಮಟ್ಟಗೆ ಎಂಬು ದನ್ನು ಸ್ಪಷ್ಟಪಡಿಸಿದೆ.

## ೪೭. ಲಾಭಾಂಶದ ಹಣದ ಮೇಲೆ ನಿರ್ಬಂಧ

'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯೊಳಗಿನ ಹಣದಿಂದ ಬೇರೆ ಸಹಕಾರಿ ಸಂಘಗಳಲ್ಲಿ ಶೇರುಗಳನ್ನು ಕೊಂಡ ಶಿಖರ ಸಂಘವು ಮತ್ತು 'ಸರಕಾರದ ಪಾಲುಗಾರಿಕೆಯ ಉಪ ನಿಧಿ'ಯೊಳಗಿನ ಹಣದಿಂದ ಪ್ರಾಥಮಿಕ ಸಂಘಗಳಲ್ಲಿ ಶೇರುಗಳನ್ನು ಕೊಂಡ ಕೇಂದ್ರ ಸಂಘವು ಆ ಶೇರುಗಳ ಮೇಲೆ ಸಂಬಂಧಪಟ್ಟ ಸಂಘದಿಂದ ಸಾರಲ್ಪಟ್ಟ ಮತ್ತು ಆ ಸಂಘದ ಇತರ ಶೇರುದಾರರಿಗೆ ಕೊಡಲಾಗುವಂತಹ ಲಾಭಾಂಶಕ್ಕಾಗಿ ಮಾತ್ರ ಬಾಧ್ಯಸ್ಥವಾಗಿರತಕ್ಕದ್ದು.

**ವಿವೇಚನೆ**

ಕಲಮು ೪೧ ರಲ್ಲಿ ಪ್ರತ್ಯಕ್ಷ ಪಾಲುಗಾರಿಕೆಯ ಬಗ್ಗೆ ಹೇಳುವಾಗ ಲಾಭಾಂಶದ ಬಗ್ಗೆ ಹೇಳಿದ ಮಾತುಗಳಲ್ಲಿ ಇಲ್ಲಿ ಅಪ್ರತ್ಯಕ್ಷ ಪಾಲುಗಾರಿಕೆಯ ಸಂಬಂಧದಲ್ಲಿಯೂ ಹೇಳಲಾಗಿದೆ.

ಇತರ ಶೇರುದಾರರಿಗೆ ಕೊಡಲಾಗುವಷ್ಟೇ ಲಾಭಾಂಶಕ್ಕೆ ಬಾಧ್ಯತೆ ಇದೆ ಎಂಬುದನ್ನು ಇಲ್ಲಿ ಸೂಚಿಸಲಾಗಿದೆ. ಇಲ್ಲಿ ಶೇರು ಪಡೆದ ಸಂಸ್ಥೆಗಳು ಎರಡು ರೀತಿಯವು. ಶಿಖರ ಸಂಘವು ಹಾಗೂ ಕೇಂದ್ರ ಸಂಘವು. ಶಿಖರ ಸಂಘವು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯೊಳಗಿನ ಹಣದಿಂದ ಇತರ ಸಹಕಾರೀ ಸಂಘದಲ್ಲಿ ಶೇರು ಕೊಳ್ಳುವುದು; ಸರಕಾರದ ಪಾಲುಗಾರಿಕೆಯ ಉಪ ನಿಧಿಯೊಳಗಿನ ಹಣದಿಂದ ಕೇಂದ್ರ ಸಂಘವು ಪ್ರಾಥಮಿಕ ಸಂಘಗಳಲ್ಲಿ ಶೇರುಗಳನ್ನು ಕೊಳ್ಳುವುದು. ಆಯಾ ಸಂಘಗಳು ತನ್ನ ಸಾಮಾನ್ಯ ಶೇರುದಾರರಿಗೆ ಎಷ್ಟು ಲಾಭಾಂಶ ಕೊಡುವುದೋ ಅಷ್ಟರ ಮಟ್ಟಿಗೆ ಮಾತ್ರ ಆ ಶಿಖರ ಸಂಘ ಇಲ್ಲವೆ ಕೇಂದ್ರ ಸಂಘವು ಬಾಧ್ಯಸ್ಥವಾಗುವುದು. ಹೆಚ್ಚಿನ ಲಾಭಾಂಶವು ದೊರೆವುದಿಲ್ಲ.

ಕಲಮು ೪೧ ರಲ್ಲಿ ಇನ್ನೊಂದು ಮಾತು ಬಂದಿದೆ. "ಕರಾರು ಪತ್ರದಲ್ಲಿ ಏನೇ ಹೇಳಲಾಗಿದ್ದರೂ" ಹೆಚ್ಚಿನ ಲಾಭಾಂಶಕ್ಕೆ ರಾಜ್ಯಸರಕಾರವು ಬಾಧ್ಯಸ್ಥವಾಗಿರತಕ್ಕದ್ದಲ್ಲ. ಎಂದು ಹೇಳಿದೆ. ಆ ಮಾತು ಇಲ್ಲಿ ಕಾಣಬರುವುದಿಲ್ಲ. ಆದರೂ ಪರಿಣಾಮ ಅದೇ ರೀತಿಯಲ್ಲಿ ಆಗುವುದು.

## ೪೮. ಶಿಖರ ಹಾಗೂ ಕೇಂದ್ರ ಸಂಘಗಳಿಗೆ ಅಭಯ.

(೧) 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯೊಳಗಿನ ಹಣದಿಂದ ಯಾವ ಸಹಕಾರಿ ಸಂಘದಲ್ಲಿ ಶೇರುಗಳನ್ನು ಕೊಳ್ಳಲ್ಪಟ್ಟಿರುವುವೋ ಆ ಸಂಘವು ದುಂಡು ಸುತ್ತಲ್ಪಟ್ಟರೆ, ಇಲ್ಲವೆ ಮರುಗಡೆ ಮಾಡಲ್ಪಟ್ಟರೆ, ಶೇರುಗಳನ್ನು ಕೊಂಡ ಶಿಖರ ಸಂಘದ ವಿರುದ್ಧ ಇಂತಹ ಶೇರು ಕೊಳ್ಳುವಿಕೆಯಿಂದ ಉಂಟಾದ ಯಾವುದೇ ಹಾನಿಯ ಸಂಬಂಧವಾಗಿ ಯಾವುದೇ ಮಾಗಣಿಯನ್ನು ರಾಜ್ಯ ಸರಕಾರವು

ಮಾಡತಕ್ಕದ್ದಲ್ಲ. ಆದರೆ, ಸಂದರ್ಭಾನುಸಾರವಾಗಿ ಋಣ ವಿಮೋಚನ ಪ್ರಕರಣಗಳಿಂದ ಇಲ್ಲವೆ ಮುರಗಡೆಯ ನಂತರ ಶಿಖರ ಸಂಘದಿಂದ ಪಡೆಯಲ್ಪಟ್ಟ ಯಾವುದೇ ರಕಮುಗಳಿಗೆ ರಾಜ್ಯ ಸರಕಾರವು ಬಾಧ್ಯಸ್ಥವಾಗಿರತಕ್ಕದ್ದು.

(೨) 'ಸರಕಾರದ ಪಾಲುಗಾರಿಕೆಯ ಉಪನಿಧಿ' ಯೊಳಗಿನ ಹಣದಿಂದ್ಯಾವ ಸಹಕಾರಿ ಸಂಘದ ಶೇರುಗಳು ಕೊಳ್ಳಲ್ಪಟ್ಟಿರುವವೋ ಆ ಸಂಘವು ದುಂಡು ಸುತ್ತಲ್ಪಟ್ಟರೆ ಇಲ್ಲವೆ ಮುರುಗಡೆ ಮಾಡಲ್ಪಟ್ಟರೆ, ಶೇರುಗಳನ್ನು ಕೊಂಡ ಕೇಂದ್ರ ಸಂಘದ ವಿರುದ್ಧ ಇಂತಹ ಶೇರು ಕೊಳ್ಳುವಿಕೆಯಿಂದ ಉಂಟಾದ ಯಾವುದೇ ಹಾನಿಯ ಸಂಬಂಧವಾಗಿ ಯಾವುದೇ ಮಾಗಣಿಯನ್ನು ರಾಜ್ಯ ಸರಕಾರವಾಗಲೀ ಶಿಖರ ಸಂಘವಾಗಲೀ ಮಾಡತಕ್ಕದ್ದಲ್ಲ. ಸಂದರ್ಭಾನುಸಾರವಾಗಿ ಋಣ ವಿಮೋಚನ ಪ್ರಕರಣಗಳಿಂದ ಇಲ್ಲವೆ ಮುರಗಡೆಯ ನಂತರ ಕೇಂದ್ರ ಸಂಘದಿಂದ ಪಡೆಯಲ್ಪಟ್ಟ ಯಾವುದೇ ರಕಮುಗಳಿಗೆ ಶಿಖರ ಸಂಘವು ಬಾಧ್ಯಸ್ಥವಾಗಿರತಕ್ಕದ್ದು. ಮತ್ತು ಇಂತಹ ರಕಮುಗಳು 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ' ಗೆ ಜಮಾ ಮಾಡಲ್ಪಡತಕ್ಕದ್ದು.

**ವಿವೇಚನೆ**

ರಾಜ್ಯ ಸರಕಾರವು ಸಹಕಾರಿ ಸಂಘಗಳ ಶೇರು ಕೊಳ್ಳಲು ಶಿಖರ ಸಂಘಕ್ಕೆ ಅದರ ಮುಖ್ಯ ನಿಧಿಯನ್ನು ರಚಿಸಲಿಕ್ಕೆ ಹಣವನ್ನು ಕೊಟ್ಟಿರುವುದು. ಆ ಹಣದಿಂದ ಶಿಖರ ಸಂಘವು ಶೇರುಗಳನ್ನು ಕೊಂಡಿರುವುದು. ಯಾವ ಸಂಘದಲ್ಲಿ ಶೇರುಗಳನ್ನು ಕೊಳ್ಳಲಾಗಿರುವುದೋ ಆ ಸಂಘವು ದುಂಡು ಸುತ್ತಲ್ಪಟ್ಟರೆ ಇಲ್ಲವೆ ಮುರಗಡೆ ಆದರೆ, ಆ ಪ್ರಸಂಗದಿಂದ ಹಾನಿ ಉಂಟಾದರೆ, ಆಗ ಶೇರುಗಳನ್ನು ಕೊಂಡಿದ್ದ ಶಿಖರ ಸಂಘದ ವಿರುದ್ಧ ಲುಕಸಾನು ಭರಪಾಯಿಗಾಗಿ ರಾಜ್ಯ ಸರಕಾರವು ಯಾವುದೇ ಮಾಗಣಿ ಮಾಡತಕ್ಕದ್ದಲ್ಲ. ಈ ರೀತಿಯಾಗಿ ಉಂಟಾದ ಹಾನಿಯಿಂದ ಸಂರಕ್ಷಣೆ ಕೊಡುವ ಅಭಯವನ್ನು ಈ ಕಲಮಿನಿಂದ ಶಿಖರ ಸಂಘಗಳಿಗೆ ಕೊಡಲಾಗಿದೆ. ಶೇರುಗಳನ್ನು ಕೊಳ್ಳುವುದಕ್ಕೆ ಮುಂಚೆ ಸರಕಾರದ ಲಿಖಿತ ಒಪ್ಪಿಗೆಯನ್ನು ಪಡೆಯಬೇಕೆಂದು ಕಲಮು ೪೫ ಹೇಳಿದ ಮಾತನ್ನು ನೆನೆದರೆ, ಶೇರು ಕೊಳ್ಳುವುದರ ಹೊಣೆಗಾರಿಕೆಯು ಅಪ್ರತ್ಯಕ್ಷವಾಗಿ ರಾಜ್ಯ ಸರಕಾರದ್ದು ಎಂಬುದು ಸ್ಪಷ್ಟವಾಗುವುದು. ತಾನು ಹೊಣೆಗಾರವಾಗಿದ್ದ ವ್ಯವಹಾರದಲ್ಲಿ ಹಾನಿಯಾದರೆ ಅದರ ಹೊಣೆಗಾರಿಕೆ ಇನ್ನೊಬ್ಬರ ಮೇಲೆ ಹಾಕಬಾರದೆಂಬ ಸೂತ್ರವು ಈ ಕಲಮಿನಲ್ಲಿ ಅಡಕವಾಗಿದೆಯೆಂಬುದು ತಿಳಿದು ಬರುವುದು.

ಆದರಂತೆ ಉಪನಿಧಿಯೊಳಗಿನ ಹಣದಿಂದ ಕೇಂದ್ರ ಸಂಘವು ಶೇರುಗಳನ್ನು ಕೊಂಡಿದ್ದು ಯಾವ ಸಂಘದಲ್ಲಿ ಶೇರುಗಳನ್ನು ಕೊಂಡಿರುವುದೋ ಆ ಸಂಘವು ದುಂಡುಸುತ್ತಲ್ಪಟ್ಟು ಇಲ್ಲವೆ ಮುರಗಡೆಯಾಗಿ ಶೇರುಗಳ ಮೂಲಕ ಹಾನಿ

ಉಂಟಾದರೆ, ಆ ಬಗ್ಗೆ ಕೇಂದ್ರ ಸಂಘದ ವಿರುದ್ಧ ರಾಜ್ಯಸರಕಾರವಾಗಲೀ ಶಿಖರ ಸಂಘವಾಗಲೀ ಯಾವುದೇ ಮಾಗಣಿ ಮಾಡತಕ್ಕದ್ದಲ್ಲ. ರಾಜ್ಯಸರಕಾರದ ಒಪ್ಪಿಗೆಯು ಕಲಮು ೪೫ ರ ಪ್ರಕಾರ ಪಡೆದ ಮೇಲೆ ಲುಕ್ಸಾನ ಭರಪಾಯಿಯ ಪ್ರಶ್ನೆ ಉಂಟಾಗುವುದಿಲ್ಲ.

ಆದರೆ, ಋಣ ವಿಮೋಚನ ಪ್ರಕರಣಗಳನ್ನು ನಡೆಸಿ ಇಲ್ಲವೆ ಮುರಗಡೆ ಆದ ನಂತರ ಶಿಖರ ಸಂಘಕ್ಕೆ ಯಾವುದೇ ರಕಮು ಜಮೆಯಾದರೆ ಅದರ ಮೇಲೆ ರಾಜ್ಯ ಸರಕಾರದ ಅಧಿಕಾರ ಇದೆ. ಅದರಂತೆ ಕೇಂದ್ರ ಸಂಘಕ್ಕೆ ಜಮೆಯಾದ ಹಣದ ಮೇಲೆ ಶಿಖರ ಸಂಘದ ಅಧಿಕಾರ ಇದೆ. ಕೇಂದ್ರ ಸಂಘವು ಈ ರೀತಿಯಲ್ಲಿ ಪಡೆದ ಹಣವು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಗೆ ಜಮೆ ಮಾಡಲ್ಪಡತಕ್ಕದ್ದು.

ಈ ಕಲಮಿನಲ್ಲಿ ಎರಡು ಮಾತುಗಳು ಹೇಳಲ್ಪಟ್ಟಿವೆ. ಒಂದು ಶೇರುಗಳನ್ನು ಕೊಂಡ ಶಿಖರ ಸಂಘಕ್ಕೆ ಹಾಗೂ ಕೇಂದ್ರ ಸಂಘಕ್ಕೆ ಅವು ಶೇರು ಕೊಳ್ಳುವ ವ್ಯವಹಾರ ಮಾಡಿದ್ದರ ಪರಿಣಾಮವಾಗಿ ಲುಕಸಾನು ಆದರೂ ಅವುಗಳಿಗೆ ಅಭಯ ಕೊಡಲಾಗಿದೆ. ಇನ್ನೊಂದು ಋಣ ವಿಮೋಚನ ಪ್ರಕರಣದಲ್ಲಿ ಇಲ್ಲವೆ ಮುರಗಡೆಯ ನಂತರ ಶಿಖರ ಸಂಘಕ್ಕೆ ಇಲ್ಲವೆ ಕೇಂದ್ರ ಸಂಘಕ್ಕೆ ಯಾವುದೇ ರಕಮು ಬಂದರೆ ಅದರ ಮೇಲೆ ಸರಕಾರದ ಅಧಿಕಾರವಿದೆ.

## ೪೯. ಶೇರು ಬಂಡವಲಿನ ಹಾಗೂ ಲಾಭಾಂಶ ಮುಂತಾದವುಗಳ ವಿಲೇವಾಟ

(೧) ‘ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ’ಯೊಳಗಿನ ಹಣದಿಂದ ಇತರ ಸಹಕಾರಿ ಸಂಘಗಳಲ್ಲಿ ಕೊಂಡ ಶೇರುಗಳ ಸಂಬಂಧವಾಗಿ ಇಂತಹ ಶೇರುಗಳನ್ನು ಮುಕ್ತ ಮಾಡಿದಾಗ ಇಲ್ಲವೆ ಲಾಭಾಂಶದ ರೂಪದಲ್ಲಿ ಇಲ್ಲವೆ ಬೇರೆ ರೂಪದಲ್ಲಿ ಶಿಖರ ಸಂಘದಿಂದ ಪಡೆಯಲ್ಪಟ್ಟ ಎಲ್ಲ ರಕಮುಗಳು ಮೊದಲು ಆ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು.

(೨) ‘ಸರಕಾರದ ಪಾಲುಗಾರಿಕೆಯ ಉಪನಿಧಿ’ಯೊಳಗಿನ ಹಣದಿಂದ ಪ್ರಾಥಮಿಕ ಸಂಘಗಳಲ್ಲಿ ಕೊಂಡ ಶೇರುಗಳ ಸಂಬಂಧವಾಗಿ ಇಂತಹ ಶೇರುಗಳನ್ನು ಮುಕ್ತ ಮಾಡಿದಾಗ ಇಲ್ಲವೆ ಲಾಭಾಂಶದ ರೂಪದಲ್ಲಿ ಇಲ್ಲವೆ ಬೇರೆ ರೂಪದಲ್ಲಿ ಕೇಂದ್ರ ಸಂಘದಿಂದ ಪಡೆಯಲ್ಪಟ್ಟ ಎಲ್ಲ ರಕಮುಗಳು ಮೊದಲು ಆ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು. ಮತ್ತು ನಂತರ ಅವು ಶಿಖರ ಸಂಘಕ್ಕೆ ಹಸ್ತಾಂತರಿಸಲ್ಪಡತಕ್ಕದ್ದು. ಮತ್ತು ಶಿಖರ ಸಂಘವು ಅವುಗಳನ್ನು ‘ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ’ಗೆ ಜಮಾ ಮಾಡತಕ್ಕದ್ದು.

(೩) ಉಪಕಲಮು (೧) ಮತ್ತು ಉಪಕಲಮು (೨) ರಲ್ಲಿ ಹೇಳಿದ ಎಲ್ಲ ರಕಮುಗಳು ಹಾಗೂ ಲಾಭಾಂಶಗಳು ಸಂದರ್ಭಾನುಸಾರವಾಗಿ ಶೇರುಗಳು ಶಿಖರ ಸಂಘದ ಇಲ್ಲವೆ ಕೇಂದ್ರ ಸಂಘದ ಹೆಸರಿನಲ್ಲಿ ಇದ್ದಾಗ್ಯೂ ಕೂಡ ರಾಜ್ಯ ಸರಕಾರಕ್ಕೆ ಕೊಡಲ್ಪಡತಕ್ಕದ್ದು.

(೪) ಉಪ ಕಲಮು (೩) ರಲ್ಲಿ ಅನುಕೂಲಿಸಲಾದುದನ್ನು ಬಿಟ್ಟು, ಕಲಮು ೪೨ ರನ್ವಯವಾಗಿ ಒದಗಿಸಿದ ಹಣಗಳ ಮೂಲಕ ಸಂದಾಯವಾದ ಹಣದ ಬಗ್ಗೆ ರಾಜ್ಯ ಸರಕಾರವು ಬಾಧ್ಯಸ್ಥವಾಗಿರತಕ್ಕದ್ದಲ್ಲ.

**ವಿವೇಚನೆ**

ಕೆರೆಯ ನೀರು ಕೆರೆಗೆ ಎಂಬಂತೆ, ಯಾವ ನಿಧಿಯೊಳಗಿನ ಹಣದಿಂದ ಶೇರುಗಳನ್ನು ಕೊಳ್ಳಲಾಗಿರುವುದೋ ಆ ಶೇರುಗಳ ಸಂಬಂಧವಾಗಿ ಬಂದ ರಕಮುಗಳು ಮೊದಲು ಆ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು. ಶಿಖರ ಸಂಘವು ಶೇರುಗಳನ್ನು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯೊಳಗಿನ ಹಣದಿಂದ ಶೇರುಗಳನ್ನು ಕೊಂಡಿರುವುದು. ಆದ್ದರಿಂದ ಆ ಶೇರುಗಳ ಮೂಲಕ ಬರುವ ರಕಮು ಆ ಮುಖ್ಯ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು. ಶೇರುಗಳು ಮುಕ್ತ ಮಾಡಲ್ಪಟ್ಟಾಗ ಹಣ ಬರುವುದು; ಶೇರುಗಳ ಮೇಲೆ ಲಾಭಾಂಶ ಬರುವುದು. ಇಲ್ಲವೆ ಇತರ ಯಾವುದೇ ರೀತಿಯಲ್ಲಿ ಹಣವು ಆ ಶೇರುಗಳ ಸಂಬಂಧವಾಗಿ ಬಂದಿದ್ದರೆ ಅದು ಮುಖ್ಯ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು.

ಅದರಂತೆ ಕೇಂದ್ರ ಸಂಘವು ಪ್ರಾಥಮಿಕ ಸಂಘಗಳಲ್ಲಿ ಶೇರುಗಳನ್ನು ಕೊಳ್ಳಲಿಕ್ಕೆ ಸರಕಾರದ ಪಾಲುಗಾರಿಕೆಯ ಉಪ ನಿಧಿಯೊಳಗಿನ ಹಣವನ್ನು ಉಪಯೋಗಿಸುವುದರಿಂದ ಆ ಶೇರುಗಳ ಸಂಬಂಧವಾಗಿ ಬಂದ ಯಾವುದೇ ರಕಮುಗಳನ್ನು ಆ ಉಪ ನಿಧಿಗೆ ಮೊದಲು ಜಮಾ ಮಾಡತಕ್ಕದ್ದು. ಈ ಉಪ ನಿಧಿಯ ಹಣವು ಶಿಖರ ಸಂಘದಿಂದ ಅದರ ಹತ್ತರವಿದ್ದ "ಮುಖ್ಯ ನಿಧಿ"ಯೊಳಗಿನ ಹಣದಿಂದ ಬಂದುದು ಆಗಿರುವುದರಿಂದ ನಂತರ ಆ ಹಣವು ಶಿಖರ ಸಂಘಕ್ಕೆ ಹಸ್ತಾಂತರವಾಗತಕ್ಕದ್ದು. ಹಾಗೆ ಹಸ್ತಾಂತರವಾದ ಹಣವು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಗೆ ಜಮಾ ಮಾಡಲ್ಪಡತಕ್ಕದ್ದು.

ಶೇರುಗಳು ಶಿಖರ ಸಂಘದ ಹೆಸರಿನಲ್ಲಿ ಇರುವುವು ಇಲ್ಲವೆ ಕೇಂದ್ರ ಸಂಘದ ಹೆಸರಿನಲ್ಲಿ ಇರುವುವು. ಹಾಗೆ ಅವುಗಳ ಹೆಸರಿನಲ್ಲಿ ಇದ್ದರೂ ಅವು ರಾಜ್ಯ ಸರಕಾರದ ಪರವಾಗಿ ಶೇರುಗಳನ್ನು ಕೊಂಡಿರುವುದರಿಂದ ಆ ಶೇರುಗಳ ಸಂಬಂಧವಾಗಿ ಬಂದ ಹಣವು ರಾಜ್ಯ ಸರಕಾರಕ್ಕೆ ಸಲ್ಲತಕ್ಕದ್ದು. ರಾಜ್ಯ ಸರಕಾರಕ್ಕೆ ಯಾವ ಹಣ ಸಲ್ಲತಕ್ಕದ್ದು ಎಂಬ ಬಗ್ಗೆ ಸ್ಪಷ್ಟಪಡಿಸಲಾಗಿದೆ. ಶೇರುಗಳನ್ನು ಮುಕ್ತ ಮಾಡಿದಾಗ

ಬಂದ ಹಣ, ಲಾಭಾಂಶ ರೂಪದಲ್ಲಿ ಇಲ್ಲವೆ ಇತರ ರೂಪದಲ್ಲಿ ಬಂದ ಹಣ ಮುಖ್ಯ ನಿಧಿಗೆ ಜಮಾ ಆದದ್ದು; ಉಪನಿಧಿಗೆ ಜಮಾ ಆಗಿ ಶಿಖರ ಸಂಘಕ್ಕೆ ಹಸ್ತಾಂತರವಾಗಿ ಮತ್ತೆ ಮುಖ್ಯ ಮುಖ್ಯ ನಿಧಿಗೆ ಜಮಾ ಆದದ್ದು ಮಾತ್ರ ರಾಜ್ಯ ಸರಕಾರಕ್ಕೆ ಸಲ್ಲತಕ್ಕದ್ದು. ಇದರ ಹೊರತಾಗಿ ರಾಜ್ಯ ಸರಕಾರವು ಕಲಮು ೪೨ ರನ್ವಯವಾಗಿ ಶಿಖರ ಸಂಘಕ್ಕೆ ಒದಗಿಸಿದ ಹಣದ ಮೇಲಿನ ಬೇರೆ ಯಾವ ಹಣವೂ ಸಲ್ಲತಕ್ಕದ್ದಲ್ಲ.

## ೫೦. ಶಿಖರ ಸಂಘ ಇಲ್ಲವೆ ಕೇಂದ್ರ ಸಂಘ ದುಂಡು ಸುತ್ತಲ್ಪಡುವಾಗ ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯ ಹಾಗೂ ಸರಕಾರದ ಪಾಲುಗಾರಿಕೆಯ ಉಪನಿಧಿಯ ವಿಲೇವಾಟಿ

(೧) 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯನ್ನು ಸ್ಥಾಪಿಸಿದ ಶಿಖರ ಸಂಘವು ದುಂಡು ಸುತ್ತಲ್ಪಟ್ಟರೆ ಇಲ್ಲವೆ ಮುರಗಡೆ ಮಾಡಲ್ಪಟ್ಟರೆ, ಆ ನಿಧಿಯಲ್ಲಿ ಜಮಾ ಆದ ಇಲ್ಲವೆ ಆ ನಿಧಿಗೆ ಸಲ್ಲಬೇಕಾಗಿದ್ದ ಎಲ್ಲ ರಕಮು ರಾಜ್ಯ ಸರಕಾರಕ್ಕೆ ಕೊಡಲ್ಪಡತಕ್ಕದ್ದು.

(೨) 'ಸರಕಾರದ ಪಾಲುಗಾರಿಕೆಯ ಉಪ ನಿಧಿ'ಯನ್ನು ಸ್ಥಾಪಿಸಿದ ಕೇಂದ್ರ ಸಂಘವು ದುಂಡು ಸುತ್ತಲ್ಪಟ್ಟರೆ, ಇಲ್ಲವೆ ಮುರುಗಡೆ ಮಾಡಲ್ಪಟ್ಟರೆ, ಆ ನಿಧಿಯಲ್ಲಿ ಜಮಾ ಆದ ಇಲ್ಲವೆ ಆ ನಿಧಿಗೆ ಸಲ್ಲಬೇಕಾಗಿದ್ದ ಎಲ್ಲ ರಕಮುಗಳು ಕಲಮು ೪೩ ರ ಉಪ ಕಲಮು (೨) ರ ವಾಕ್ಯಾವಳಿ (ಬ) ದನ್ವಯವಾಗಿ ಹಣವನ್ನು ಪಡೆದಿರುವಂತಹ 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಗೆ ಜಮಾ ಮಾಡಲ್ಪಡತಕ್ಕದ್ದು.

**ವಿವೇಚನೆ**

ಸರಕಾರದಿಂದ ಸಹಕಾರಿ ಸಂಘಗಳಿಗೆ ಹಣವು ಒದಗಿಬರುವ ಕ್ರಮವನ್ನು ಹೇಳಿದ ನಂತರ ಆ ಸಂಘಗಳಿಂದ ಹಣವು ತಿರುಗಿ ಸರಕಾರಕ್ಕೆ ಹೇಗೆ ಬರಬೇಕು ಎಂಬುದನ್ನು ಹೇಳಲಾಗುತ್ತಿದೆ. ಸರಕಾರದಿಂದ ಶಿಖರ ಸಂಘಕ್ಕೆ, ಶಿಖರ ಸಂಘದಿಂದ ಕೇಂದ್ರ ಸಂಘಕ್ಕೆ ಹಣವು ಇಳಿದು ಬರುವುದು. ಸರಕಾರದಿಂದ ಶಿಖರ ಸಂಘಕ್ಕೆ ಇಳಿದು ಬಂದ ಹಣವು ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯಾಗಿ ಪರಿಣಮಿಸುವುದು. ಯಾವ ಶಿಖರ ಸಂಘವು ತನಗೆ ಸರಕಾರದಿಂದ ಬಂದ ಹಣದಿಂದ ಮುಖ್ಯ ನಿಧಿಯನ್ನು ಸ್ಥಾಪಿಸಿರುವುದೋ ಅಂತಹ ಶಿಖರ ಸಂಘವು ದುಂಡು ಸುತ್ತಲ್ಪಟ್ಟರೆ ಇಲ್ಲವೆ ಅದು ಮುರಗಡೆ ಮಾಡಲ್ಪಟ್ಟರೆ, ಆ ಮುಖ್ಯ ನಿಧಿಯಲ್ಲಿ ಜಮಾ ಆಗಿದ್ದ ಇಲ್ಲವೆ ಅದಕ್ಕೆ ಸಲ್ಲಬೇಕಾಗಿದ್ದ ಎಲ್ಲ ರಕಮುಗಳು ರಾಜ್ಯ ಸರಕಾರಕ್ಕೆ ಕೊಡಲ್ಪಡತಕ್ಕದ್ದು. ಏಕೆಂದರೆ ಆ ಮುಖ್ಯ ನಿಧಿಯನ್ನು ಉಪಯೋಗಿಸುವ ಸಂಘವು ದುಂಡು ಸುತ್ತಲ್ಪಟ್ಟಿದೆ ಇಲ್ಲವೆ ಮುರುಗಡೆ ಮಾಡಲ್ಪಟ್ಟಿದೆ.

ಶಿಖರ ಸಂಘವು ಕಲಮು ೪೩ ರ ಉಪಕಲಮು (೨) ರ ವಾಕ್ಯಾವಳಿ (ಬ) ದನ್ವಯವಾಗಿ ತನ್ನ ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯೊಳಗಿನ ಹಣದಿಂದ ಕೇಂದ್ರ ಸಂಘಕ್ಕೆ ಪ್ರಾಥಮಿಕ ಸಂಘಗಳಲ್ಲಿ ಶೇರುಗಳನ್ನು ಕೊಳ್ಳಲಿಕ್ಕೆ ಹಣವನ್ನು ಒದಗಿಸಿರುತ್ತದೆ. ಹೀಗೆ ಒದಗಿಸಿದ ಹಣದಿಂದ ಕೇಂದ್ರ ಸಂಘವು ಸರಕಾರದ ಪಾಲುಗಾರಿಕೆಯ ಉಪ ನಿಧಿಯನ್ನು ಸ್ಥಾಪಿಸಿರುತ್ತದೆ ಇಂತಹ ಕೇಂದ್ರ ಸಂಘವು ದುಂಡು ಸುತ್ತಲ್ಪಟ್ಟರೆ, ಇಲ್ಲವೆ ಮುರಗಡೆ ಮಾಡಲ್ಪಟ್ಟರೆ ಕೇಂದ್ರ ಸಂಘದ ಉಪನಿಧಿಗೆ ಜಮಾ ಆಗಿದ್ದ ಇಲ್ಲವೆ ಅದಕ್ಕೆ ಸಲ್ಲಬೇಕಾಗಿದ್ದ ಎಲ್ಲ ರಕಮುಗಳು ಯಾವ ಮುಖ್ಯ ನಿಧಿಯಿಂದ ಉಪನಿಧಿಯು ರಚಿತವಾಗುವುದೋ ಆ ಮುಖ್ಯ ನಿಧಿಗೆ ಕೊಡಲ್ಪಡತಕ್ಕದ್ದು. ಏಕೆಂದರೆ ಯಾವ ಉಪಯೋಗಕ್ಕಾಗಿ ಆ ಹಣವು ಒದಗಿಸಲ್ಪಟ್ಟಿರುವುದೋ ಅದರ ಉಪಯೋಗವನ್ನು ಮಾಡಲು ಆ ಕೇಂದ್ರ ಸಂಘವು ಅಸ್ತಿತ್ವದಲ್ಲಿ ಉಳಿದಿರುವುದಿಲ್ಲ. ಕೇಂದ್ರ ಸಂಘವು ದುಂಡು ಸುತ್ತಲ್ಪಟ್ಟರೆ, ಉಪನಿಧಿಯ ಹಣವು ಸರಕಾರಕ್ಕೆ ಹೋಗದೆ, ಮುಖ್ಯ ನಿಧಿಗೆ ಜಮಾ ಆಗುವುದೆಂಬುದನ್ನು ಲಕ್ಷಿಸಬೇಕು.

ಒಟ್ಟಿನಲ್ಲಿ ಎಲ್ಲಿಂದ ಬಂದಿತೋ ಅಲ್ಲಿಗೆ ಆ ಹಣ ಮರಳಿ ಹೋಗತಕ್ಕದ್ದು. ಯಾವ ಉದ್ದೇಶಕ್ಕಾಗಿ ಹಣ ಬಂದಿರುವುದೋ ಆ ಉದ್ದೇಶ ಸಾಧಿಸುವ ಸಂಸ್ಥೆಯು ಇಲ್ಲದಾಗುವ ಪ್ರಸಂಗ ಬಂದರೆ, ಯಾವ ನಿಧಿಯಿಂದ ಹಣವು ಬಂದಿತೋ ಆ ನಿಧಿಗೆ ಪುನಃ ಮರಳಿ ಹೋಗತಕ್ಕದ್ದು. ಈ ವ್ಯವಸ್ಥೆಯಿಂದ ಯಾವುದೇ ಪ್ರಸಂಗದಲ್ಲಿ ಯಾವುದೇ ರಕಮು ವ್ಯವಸ್ಥೆಯಿಲ್ಲದೆ ಅಮಾನತವಾಗಿ ಉಳಿಯುವದಿಲ್ಲ.

**೫೧. ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ ಹಾಗೂ ಸರಕಾರದ ಪಾಲುಗಾರಿಕೆಯ ಉಪನಿಧಿ ಸೊತ್ತುಗಳ ಭಾಗವಾಗತಕ್ಕದ್ದಲ್ಲ**

'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯಲ್ಲಿ ಇಲ್ಲವೆ 'ಸರಕಾರದ ಪಾಲುಗಾರಿಕೆಯ ಉಪನಿಧಿ'ಯಲ್ಲಿ ಜಮೆ ಆಗಿದ್ದ ಯಾವುದೇ ಹಣವು ಸಂದರ್ಭಾನುಸಾರವಾಗಿ ಶಿಖರ ಸಂಘದ ಇಲ್ಲವೆ ಕೇಂದ್ರ ಸಂಘದ ಸೊತ್ತುಗಳ ಭಾಗವಾಗಿ ರೂಪುಗೊಳ್ಳತಕ್ಕದ್ದಲ್ಲ.

**ವಿವೇಚನೆ**

ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿಯು ಹಾಗೂ ಉಪನಿಧಿಯು ವಿಶಿಷ್ಟ ಉದ್ದೇಶಕ್ಕಾಗಿ ಸರಕಾರದಿಂದ ಕೊಡಲ್ಪಟ್ಟ ಹಣ ಎಂಬುದನ್ನು ನೆನೆಯಬೇಕು. ಆ ನಿಧಿಗಳ ಸ್ಥಾಪನೆ ಹಾಗೂ ಉಪಯೋಗವು ಕಲಮು ೪೩ ಹಾಗೂ ೪೪ ಇವುಗಳಲ್ಲಿ ಹೇಳಲಾಗಿದೆ. ಆ ಕಲಮುಗಳಲ್ಲಿ ವಿಶಿಷ್ಟವಾದ ಉಪಯೋಗಕ್ಕೆ ಎಂದು ಹೇಳುವುದರ ಜತೆಗೆ ಬೇರೆ ಯಾವ ಉಪಯೋಗಕ್ಕೂ ಅದರ ಹಣ

ವಿನಿಯೋಗವಾಗತಕ್ಕದ್ದಲ್ಲ ಎಂದು ಸ್ಪಷ್ಟ ನಿರ್ಬಂಧ ಹಾಕಲಾಗಿದೆ. ಆದ್ದರಿಂದ ಅಲ್ಲಿ ಹೇಳಿದ ಉಪಯೋಗದ ಹೊರತು ಬೇರೆ ಉಪಯೋಗವಾಗುವಂತೆ ಇಲ್ಲ. ಈ ಕಲಮು ಆ ಮಾತನ್ನು ಇನ್ನೂ ಸ್ಪಷ್ಟಪಡಿಸುತ್ತದೆ.

ಮುಖ್ಯ ನಿಧಿಯು ಮುಖ್ಯ ನಿಧಿಯಾಗಿಯೇ ಉಳಿಯತಕ್ಕದ್ದು. ಶಿಖರ ಸಂಘವು ದುಂಡುಸುತ್ತಲ್ಪಟ್ಟರೆ ಇಲ್ಲವೆ ಮುರಗಡೆ ಆದರೆ ಮುಖ್ಯ ನಿಧಿಯ ಹಣವು ತಿರುಗಿ ಸರಕಾರಕ್ಕೆ ಕೊಡಲ್ಪಡಬೇಕು ಎಂದು ಕಲಮು ೫೦ ಹೇಳಿದೆ. ಅಂದರೆ ನಿಧಿಯ ಉಪಯೋಗವು ನಿರ್ದಿಷ್ಟಪಡಿಸಿದಂತೆ ಆಗದೆ ಇರುವ ಸಂದರ್ಭವುಂಟಾದರೆ ಅದು ಸರಕಾರಕ್ಕೆ ತಿರುಗಿ ಕೊಡಲ್ಪಡಬೇಕು. ಅದರಂತೆ ಉಪನಿಧಿಯ ಹಣವು ಅದರ ಉದ್ದೇಶಕ್ಕಾಗಿ ಉಪಯೋಗವಾಗದೆ ಉಳಿವ ಸಂದರ್ಭ ಒದಗಿ ಬಂದಾಗ ಅದನ್ನು ಮುಖ್ಯ ನಿಧಿಗೆ ಜಮಾ ಮಾಡಬೇಕು.

ಶಿಖರ ಸಂಘವು ಮುಖ್ಯ ನಿಧಿಯನ್ನು ಕೇಂದ್ರ ಸಂಘವು ಉಪನಿಧಿಯನ್ನು ಆ ಹೆಸರಿನ ನಿಧಿಯಾಗಿ ಪ್ರತ್ಯೇಕವಾಗಿ ಇಡಬೇಕೇ ಹೊರತು ತನ್ನ ಸೊತ್ತುಗಳಲ್ಲಿ ಭಾಗವಾಗಿರುವಂತೆ ಸೊತ್ತುಗಳಲ್ಲಿ ಸಮಾವೇಶ ಮಾಡಲ್ಪಡಬಾರದು ಎಂದು ಈ ಕಲಮು ಹೇಳುತ್ತದೆ. ಸೊತ್ತು ಎಂದರೇನು? ಸಂಘದ ಸೊತ್ತು ಅಂದರೆ ಸಂಘದ ಆಸ್ತಿಯು. ಸಂಘದ ವಿರುದ್ಧವಾಗಿ ಇರುವ ಮಾಗಣೆ ಇಲ್ಲವೆ ಸಾಲ ಇಲ್ಲವೆ ಋಣ ಇವುಗಳನ್ನು ಪೂರೈಸುವುದಕ್ಕೆ ಉಪಯೋಗವಾಗಬಹುದಾದ ಆ ಸಂಘದ ಸೊತ್ತು ಎಂದು ಅರ್ಥ. ಸೊತ್ತಿನ ಮೇಲೆ ಸಂಘದ ಅನಿರ್ಬಂಧ ಅಧಿಕಾರ ಇರುವುದು. ಅದರ ಉಪಯೋಗವನ್ನು ಸಂಘವು ಯಾವ ಬೇಕಾದ ರೀತಿಯಲ್ಲಿ ಮಾಡಬಹುದಾಗಿದೆ. ಈ ಅನಿರ್ಬಂಧ ಅಧಿಕಾರವು ಮುಖ್ಯ ನಿಧಿಯ ಹಣದ ಬಗ್ಗೆ ಶಿಖರ ಸಂಘಕ್ಕೆ ಇಲ್ಲವೆ ಉಪ ನಿಧಿಯ ಹಣದ ಬಗ್ಗೆ ಕೇಂದ್ರ ಸಂಘಕ್ಕೆ ಇಲ್ಲವೆಂಬುದು ಕಂಡು ಬಂದಿದೆ. ಆದ್ದರಿಂದ ಅದು ಸಂಘದ ಸೊತ್ತು ಆಗಲಾರದು. ಅದನ್ನು ಸೊತ್ತಿನ ಭಾಗವಾಗಿ ರೂಪಿಸಬಾರದು ಎಂದು ಈ ಕಲಮು ಹೇಳುವುದರಿಂದ ಈ ನಿಧಿಗಳ ಹಣವು ಸಂಘದ ಸಾಲ-ಇಲ್ಲವೆ ಋಣ ವಿಮೋಚನೆಗಾಗಿ ಬಳಸತಕ್ಕ ಹಣ ವಲ್ಲ ಎಂದು ಸ್ಪಷ್ಟವಾಗುವುದು.

## ೫೨. ರಾಜ್ಯ ಸರಕಾರ ಹಾಗೂ ಶಿಖರ ಸಂಘಗಳಿಂದ ಒಪ್ಪಂದ.

ಈ ಪ್ರಕರಣದಲ್ಲಿಯ ಮುಂಚಿನ ಶರತುಗಳಿಗಂಕಿತವಾಗಿ—

(ಅ) ಕಲಮು ೪೪ ರಲ್ಲಿ ನಿರ್ದಿಷ್ಟ ಪಡಿಸಿದ ಉದ್ದೇಶಗಳಿಗಾಗಿ ಶಿಖರ ಸಂಘಕ್ಕೆ ಹಣವನ್ನು ಯಾವ ಕರಾರು ಮತ್ತು ಭಾವನೆಯಿಂದ ಕೊಡಲ್ಪಡುವುದಿದೆಯೋ ಅವುಗಳನ್ನು ನಿರ್ದೇಶಿಸಿ ಶಿಖರ ಸಂಘದೊಂದಿಗೆ ರಾಜ್ಯ ಸರಕಾರವು ಕರಾರು ಒಪ್ಪಂದ ಮಾಡಿಕೊಳ್ಳಬಹುದು.

(ಬ) ಕಲಮು ೪೩ ರ ಉಪಕಲಮು (೨) ರ ವಾಕ್ಯಾವಳಿ (ಬ) ದಲ್ಲಿ ನಿರ್ದಿಷ್ಟ ಪಡಿಸಿದ ಉದ್ದೇಶಗಳಿಗಾಗಿ 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ' ಯೊಳಗಿನ ಹಣವನ್ನು ಯಾವ ಕರಾರು ಮತ್ತು ಭಾವನೆಯಿಂದ ಕೇಂದ್ರ ಸಂಘಕ್ಕೆ ಕೊಡಲ್ಪಡುವುದಿದೆಯೋ ಅವುಗಳನ್ನು ನಿರ್ದೇಶಿಸಿ ಕೇಂದ್ರ ಸಂಘದೊಂದಿಗೆ ಶಿಖರ ಸಂಘವು ರಾಜ್ಯ ಸರಕಾರದ ಪೂರ್ವ ಸಮ್ಮತಿಯಿಂದ ಕರಾರು ಒಪ್ಪಂದ ಮಾಡಿ ಕೊಳ್ಳಬಹುದು.

**ವಿವೇಚನೆ**

ರಾಜ್ಯ ಸರಕಾರವು ಹಣವನ್ನು ಶಿಖರ ಸಂಘಕ್ಕೆ ಕೊಡುವುದು; ಶಿಖರ ಸಂಘವು ಕೇಂದ್ರ ಸಂಘಕ್ಕೆ ಕೊಡುವುದು. ಈ ಬಗ್ಗೆ ಕರಾರು ಒಪ್ಪಂದವನ್ನು ಮಾಡಿಕೊಳ್ಳಬೇಕೆಂಬ ಬಗ್ಗೆ ಈ ಕಲಮು ಹೇಳುವುದು. ಈ ಕರಾರು ಒಪ್ಪಂದವು ಈ ಪ್ರಕರಣದಲ್ಲಿಯ ಈ ಮೊದಲಿನ ಶರತುಗಳಿಗೆ ಅಂಕಿತವಾಗಿ ಮಾಡಿಕೊಳ್ಳ ಲ್ಪಡಬೇಕು.

ಕಲಮು ೪೪ ರಲ್ಲಿ ಹೇಳಲಾದ ಉದ್ದೇಶಗಳಿಗಾಗಿ ರಾಜ್ಯ ಸರಕಾರವು ಶಿಖರ ಸಂಘಕ್ಕೆ ಹಣವನ್ನು ಒದಗಿಸುವುದು. ಈ ಹಣವನ್ನು ಯಾವ ಕರಾರು ಹಾಗೂ ಭಾವನೆಯಿಂದ ರಾಜ್ಯ ಸರಕಾರವು ಶಿಖರ ಸಂಘಕ್ಕೆ ಕೊಡುವುದೋ ಆ ಕರಾರು ಹಾಗೂ ಭಾವನೆಗಳ ವಿವರಗಳನ್ನು ಸ್ಪಷ್ಟಪಡಿಸಿ ಒಂದು ಕರಾರು ಒಪ್ಪಂದವನ್ನು ರಾಜ್ಯ ಸರಕಾರವು ಶಿಖರ ಸಂಘದೊಂದಿಗೆ ಮಾಡಿಕೊಳ್ಳಬಹುದು. ಈ ಕರಾರು ಒಪ್ಪಂದದಿಂದ ರಾಜ್ಯ ಸರಕಾರಕ್ಕೆ ತಾನು ಯಾವ ಉದ್ದೇಶಗಳಿಗಾಗಿ, ಯಾವ ಕರಾರಿನ ಮೇಲೆ ಯಾವ ಭಾವನೆಯಿಂದ ಹಣವನ್ನು ಶಿಖರ ಸಂಘಕ್ಕೆ ಕೊಟ್ಟಿದೆ ಯೆಂದು ತಿಳಿವುದು. ಕರಾರಿನಂತೆ ನಡೆಯಲು ಶಿಖರ ಸಂಘಕ್ಕೆ ಅನುಕೂಲವಾಗು ವುದು. ಹೀಗೆ ಕರಾರು ಒಪ್ಪಂದವಿದ್ದರೆ, ಆ ಹಣದ ವಿನಿಯೋಗಕ್ಕೆ ಮಾರ್ಗದರ್ಶನ ವಾಗುವುದು. ಅಲ್ಲದೆ ಯಾವುದಕ್ಕಾಗಿ ಆ ಹಣವು ಇದೆಯೋ ಅದನ್ನು ಬಿಟ್ಟು ಬೇರೆ ಕಾರ್ಯಗಳಿಗಾಗಿ ಉಪಯೋಗಿಸಬಾರದೆಂಬುದಕ್ಕೆ ನಿರ್ಬಂಧದ ಸ್ಪಷ್ಟ ಕಲ್ಪನೆಯು ಬರುವುದು.

ಇದೇ ಮಾದರಿಯ ಕರಾರು ಒಪ್ಪಂದವನ್ನು ಶಿಖರ ಸಂಘವು ಕೇಂದ್ರ ಸಂಘದೊಂದಿಗೆ ಮಾಡಿಕೊಳ್ಳಬಹುದು. ಕಲಮು ೪೩ ರ ಉಪಕಲಮು (೨) ರ ವಾಕ್ಯಾವಳಿ (ಬ) ದಲ್ಲಿ ಹೇಳಿದ ಉದ್ದೇಶಗಳನ್ನು ಪೂರ್ತಿಗೊಳಿಸುವುದಕ್ಕಾಗಿ 'ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ'ಯು ಇರುವುದು. ಈ ನಿಧಿಯೊಳಗಿನ ಹಣದಿಂದ ಕೇಂದ್ರ ಸಂಘಕ್ಕೆ ಶಿಖರ ಸಂಘವು ಹಣವನ್ನು ಒದಗಿಸುವುದು. ಯಾವ ಕರಾರು ಯಾವ ಭಾವನೆಗಳಿಂದ ಈ ಹಣವನ್ನು ಒದಗಿಸಲಾಗುವುದೋ ಆ ಕರಾರು ಹಾಗೂ ಭಾವನೆಗಳ ವಿವರವನ್ನು ಸ್ಪಷ್ಟ ಪಡಿಸಿದ ಮಾತುಗಳುಳ್ಳ

ಒಂದು ಕರಾರು ಒಪ್ಪಂದವನ್ನು ಶಿಖರ ಸಂಘವು ಕೇಂದ್ರ ಸಂಘದೊಂದಿಗೆ ಮಾಡಿಕೊಳ್ಳಬಹುದು. ಈ ರೀತಿ ಕರಾರು ಒಪ್ಪಂದ ಮಾಡಿಕೊಳ್ಳುವಾಗ ಶಿಖರ ಸಂಘವು ರಾಜ್ಯಸರಕಾರದ ಪೂರ್ವ ಸಮ್ಮತಿ ಪಡೆದಿರಬೇಕು.

ಈ ಮೊದಲಿನ ಕಲಮುಗಳಿಂದ ರಾಜ್ಯಸರಕಾರವು ಯಾವ ಉದ್ದೇಶಗಳಿಗಾಗಿ ಹಣವನ್ನು ಕೊಡುವುದು ಎಂಬ ಬಗ್ಗೆ ಸ್ಪಷ್ಟಪಡಿಸಲಾಗಿತ್ತು. ಈ ಕಲಮಿನಿಂದ ಯಾವ ಕರಾರಿನ ಮೇಲೆ ಯಾವ ಭಾವನೆಯಿಂದ ಹಣವನ್ನು ಕೊಡುವುದೆಂಬ ಬಗ್ಗೆ ಸ್ಪಷ್ಟವಾಗುವುದು. ಇದರಿಂದ ಸರಕಾರವು ಕೊಡಮಾಡುವ ಹಣವು ಯಾವ ಉದ್ದೇಶಕ್ಕಾಗಿ, ಯಾವ ಕರಾರಿನ ಮೇಲೆ ಯಾವ ಭಾವನೆಯಿಂದ ಉಪಯೋಗಿಸಲ್ಪಡಬೇಕೆಂಬುದು ಸ್ಪಷ್ಟವಾಗುವುದು.

## ೫೩. ಸಹಕಾರಿ ಸಂಘಗಳಿಗೆ ಸರಕಾರದ ಇತರ ರೀತಿಯ ಸಹಾಯ

ಆ ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ರಾಜ್ಯಸರಕಾರವು—

(ಅ) ಸಹಕಾರಿ ಸಂಘಗಳಿಗೆ ಸಾಲಗಳನ್ನು ಕೊಡಬಹುದು ಇಲ್ಲವೆ ಮುಂಗಡಗಳನ್ನು ಕೊಡಬಹುದು;

(ಬ) ಸಹಕಾರಿ ಸಂಘದಿಂದ ಹೊರಡಿಸಲಾದ ಡಿಬೆಂಚರುಗಳ ಮೂಲ ಹಣವನ್ನು ಮತ್ತು ಅದರ ಮೇಲಿನ ಬಡ್ಡಿಯನ್ನು ತಿರುಗಿ ಕೊಡುವ ಆಶ್ವಾಸನವನ್ನು ಕೊಡಬಹುದು;

(ಕ) ಸಹಕಾರಿ ಸಂಘದ ಶೇರು ಬಂಡವಲನ್ನು ತಿರುಗಿ ಕೊಡುವುದರ ಸಲುವಾಗಿ ಮತ್ತು ರಾಜ್ಯಸರಕಾರದಿಂದ ನಿರ್ದಿಷ್ಟಪಡಿಸಬಹುದಾದಂತಹ ದರದಿಂದ ಶೇರು ಬಂಡವಾಳದ ಮೇಲಿನ ಲಾಭಾಂಶವನ್ನು ಕೊಡುವುದರ ಸಲುವಾಗಿ ಆಶ್ವಾಸನವನ್ನು ಕೊಡಬಹುದು;

(ಡ) ಸಹಕಾರಿ ಸಂಘಕ್ಕೆ ಕೊಟ್ಟ ಸಾಲಗಳ ಹಾಗೂ ಮುಂಗಡಗಳ ಮೂಲ ಹಣವನ್ನು ಅದರ ಮೇಲಿನ ಬಡ್ಡಿಯನ್ನು ತಿರುಗಿ ಕೊಡುವುದರ ಬಗ್ಗೆ ಆಶ್ವಾಸನವನ್ನು ಕೊಡಬಹುದು;

(ಇ) 'ಯಾವುದೇ ಸಹಕಾರಿ ಸಂಘಕ್ಕೆ' ಸಹಾಯಧನವನ್ನು ಕೊಡುವುದನ್ನು ಒಳಗೊಂಡು ಬೇರೆ ಯಾವುದೇ ರೂಪದಲ್ಲಿ ಆರ್ಥಿಕ ಸಹಾಯವನ್ನು ಕೊಡಬಹುದು.

**ವಿವೇಚನೆ**

ಸಹಕಾರ ಚಳವಳವನ್ನು ಪುರಸ್ಕಾರ ಮಾಡುವುದು ಹಾಗೂ ಉತ್ತೇಜನ ಕೊಡುವುದು ಸರಕಾರದ ಕರ್ತವ್ಯವೆಂದು ಈ ಕಾಯಿದೆಯು ಹೇಳಿದೆ. ಆ ಕರ್ತವ್ಯ

ಪಾಲನೆಗಾಗಿ ರಾಜ್ಯ ಸರಕಾರವು ಸಹಕಾರಿ ಸಂಘಗಳಿಗೆ ಸಹಾಯವನ್ನು ಮಾಡ ಬೇಕಾಗುವುದು. ಯಾವ ಯಾವ ರೀತಿಯಿಂದ ಸರಕಾರವು ಸಹಕಾರಿ ಸಂಘಗಳಿಗೆ ಸಹಾಯವನ್ನು ಸಲ್ಲಿಸಬಹುದು ಎಂಬ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಈ ಸಹಾಯ ಸಲ್ಲಿಸಲು ರಾಜ್ಯ ಸರಕಾರದ ಅಧಿಕಾರವು ಆ ಕಾಲಕ್ಕೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಬೇರೆ ಏನೇ ಹೇಳಿದ್ದರೂ ಅವರಿಂದ ಬಾಧಿತ ವಾಗುವದಿಲ್ಲ.

ರಾಜ್ಯ ಸರಕಾರವು ಸಹಕಾರಿ ಸಂಘಗಳಿಗೆ ನೇರವಾಗಿ ಸಾಲಗಳನ್ನು ಕೊಡ ಬಹುದು. ತಾತ್ಪೂರ್ತಿಕವಾಗಿ ಮುಂಗಡಗಳನ್ನು ಕೊಡಬಹುದು. ಈ ಸಾಲ ಇಲ್ಲವೆ ಮುಂಗಡಗಳಿಂದ ಸಹಕಾರಿ ಸಂಘವು ತನ್ನ ಉದ್ದೇಶ ಸಾಧನೆಯನ್ನು ಯಾವ ಅಡ್ಡಿ ಆತಂಕಗಳಿಲ್ಲದೆ ಮಾಡಲು ಅನುಕೂಲವಾಗುವುದು.

ಹೀಗೆ ರಾಜ್ಯ ಸರಕಾರದಿಂದ ಸಾಲ ಇಲ್ಲವೆ ಮುಂಗಡ ಪಡೆಯುವ ಬದಲು ಸಹಕಾರಿ ಸಂಘವು ತಾನೇ ಸಾಲಪತ್ರ ( ಡಿಬೆಂಚರ ) ಗಳನ್ನು ಹೊರಡಿಸಬೇಕೆಂದು ಮಾಡಿದರೆ ಆಗ ಕೂಡ ಸರಕಾರವು ಸಹಾಯ ಮಾಡಬಹುದು. ಸಹಕಾರಿ ಸಂಘವು ಹೊರಡಿಸಿದ ಸಾಲಪತ್ರಗಳ ಬಗ್ಗೆ ಸಾರ್ವಜನಿಕರಲ್ಲಿ ತಮ್ಮ ಹಣದ ಭದ್ರತೆಯ ಬಗ್ಗೆ ಭರವಸೆಯುಂಟಾಗುವ ಬಗ್ಗೆ ಸರಕಾರವು ಆಶ್ವಾಸನವನ್ನು ಕೊಡಬಹುದು. ಅಂದರೆ ಸಾರ್ವಜನಿಕರು ಸಹಕಾರಿ ಸಂಘದ ಸಾಲ ಪತ್ರಗಳನ್ನು ಕೊಂಡರೆ, ಆ ಸಾಲಪತ್ರದ ಮೂಲ ಹಣವನ್ನು ಅದರ ಮೇಲಿನ ಬಡ್ಡಿಯನ್ನು ಸಹಕಾರಿ ಸಂಘಕ್ಕೆ ಕೊಡುವುದು ಆಗದೆ ಇದ್ದ ಪಕ್ಷದಲ್ಲಿ ತಾನು ತಿರುಗಿ ಕೊಡುವ ಭರವಸೆಯನ್ನು ಸರಕಾರವು ಕೊಡ ಬಹುದು. ಇದರಿಂದ ಸರಕಾರವು ಆ ಕಾಲಕ್ಕೆ ತಾನೇ ಪ್ರತ್ಯಕ್ಷ ಹಣ ಕೊಡುವು ದರ ಬದಲು ತಾನು ಕೊಡುವ ಭದ್ರತೆಯ ಆಶ್ವಾಸನದ ಮೇಲಿಂದ ಸಾರ್ವಜನಿಕ ರಿಂದ ಸಹಕಾರಿ ಸಂಘಗಳ ಸಾಲ ಪತ್ರಗಳನ್ನು ಕೊಳ್ಳಲ್ಪಡುವ ಹಾಗೆ ಮಾಡಿ ನೆರ ವಾಗಬಹುದು.

ಸಾರ್ವಜನಿಕರು ಕೇವಲ ಸಾಲಪತ್ರ ಕೊಂಡು ದೂರ ಉಳಿಯುವ ಬದಲು ಅವರು ಶೇರು ಬಂಡವಲಿಗೆ ವಂತಿಗೆ ಕೊಟ್ಟು ಪ್ರತ್ಯಕ್ಷ ಸಂಘದ ವ್ಯವಹಾರದಲ್ಲಿ ಭಾಗಿಯಾಗಬೇಕೆಂದು ಮಾಡಿದರೆ, ಆ ಬಗ್ಗೆ ಕೂಡ ಸರಕಾರವು ಆಶ್ವಾಸನ ಕೊಡ ಬಹುದು. ಶೇರು ಬಂಡವಲಿನ ಮೂಲ ಹಣವನ್ನು ತಿರುಗಿಕೊಡುವ ಹಾಗೂ ಆ ಬಂಡವಲಿನ ಮೇಲೆ ರಾಜ್ಯಸರಕಾರವು ನಿರ್ದಿಷ್ಟಪಡಿಸುವ ದರದಂತೆ ಲಾಭಾಂಶವನ್ನು ಕೊಡುವ ಆಶ್ವಾಸನವನ್ನು ಕೊಡಬಹುದು. ಈ ಬಗೆಯ ಆಶ್ವಾಸನದಿಂದ ಸಾರ್ವಜನಿಕರ ಸಹಕಾರಿ ಸಂಘಗಳಲ್ಲಿ ಆಸ್ಥೆವಹಿಸುವರು. ಸಹಕಾರಿ ಸಂಘಗಳು ತಾವೇ ತಮ್ಮ ವ್ಯವಹಾರವನ್ನು ಸಾಗಿಸಿಕೊಳ್ಳಲು ಆಗುವುದು. ಆಶ್ವಾಸನವು ಅಪ್ರತ್ಯಕ್ಷ ಸಹಾಯವಾಗುವುದು.

ಸಹಕಾರಿ ಸಂಘವು ಡಿಬೆಂಚರ ಹೊರಡಿಸಿಲ್ಲವಾದರೆ, ಶೇರು ಬಂಡವಲಿನಲ್ಲಿ ವಂತಿಗೆ ಸ್ವೀಕರಿಸುವ ಅನುಕೂಲವಿಲ್ಲದಿದ್ದರೆ, ಸಹಕಾರಿ ಸಂಘವು ಸಾರ್ವಜನಿಕ ರಿಂದ ನೇರವಾಗಿ ಸಾಲಗಳನ್ನು ಇಲ್ಲವೆ ಮುಂಗಡಗಳನ್ನು ಪಡೆಯಬಹುದು. ಆಗ ಕೂಡ ಸರಕಾರವು ಆ ಸಾಲ ಹಾಗೂ ಮುಂಗಡಗಳ ಮೂಲ ಹಣವನ್ನು ತಿರುಗಿ ಕೊಡಲು, ಹಣದ ಮೇಲಿನ ಬಡ್ಡಿಯನ್ನು ಕೊಡಲು ಸರಕಾರವು ಆಶ್ವಾಸನ ಕೊಡಬಹುದು.

ಸರಕಾರವು ತಾನು ಸಾಲ ಇಲ್ಲವೆ ಮುಂಗಡಗಳನ್ನು ಕೊಡಬಹುದು. ಇತರರ ಸಾಲ ಮುಂಗಡಗಳ ಬಗ್ಗೆ ಆಶ್ವಾಸನ ಕೊಡಬಹುದು. ಇವೆರಡರಿಂದಲೂ ಸಕಾಲಕ್ಕೆ ಕಾರ್ಯವಾಗದಿದ್ದಲ್ಲಿ ಇಲ್ಲವೆ ಸರಿಯಾಗಿ ಕಾರ್ಯವಾಗದಿದ್ದಲ್ಲಿ ಸರಕಾರವು ಯಾವುದೇ ಸಹಕಾರಿ ಸಂಘಕ್ಕೆ ಆರ್ಥಿಕ ಸಹಾಯವನ್ನು ಮಾಡಬಹುದು. ಈ ಆರ್ಥಿಕ ಸಹಾಯದಲ್ಲಿ ಸಹಾಯಧನವೆಂದು ಕೊಡುವ ಸಹಾಯವು ಒಳಗೊಂಡಿದೆ.

ಈ ರೀತಿಯ ನೆರವು ಸರಕಾರದಿಂದ ಬರುವುದರಿಂದ ಅದು ಕಾಯಿದೆಯಲ್ಲಿ ಹೇಳಿರುವುದರಿಂದ ಸಹಕಾರಿ ಸಂಘಗಳಿಗೆ ಕಾರ್ಯ ಮಾಡಲು ಧೈರ್ಯವೂ ಸಾರ್ವ ಜನಿಕರಿಗೆ ತಮ್ಮ ಹಣ ತೊಡಗಿಸಲು ಅವಕಾಶವೂ ಭದ್ರತೆಯ ಆಶ್ವಾಸನವೂ ಉಂಟಾಗಿ, ಸರಕಾರದ ಮೇಲೆ ಹೆಚ್ಚಿನ ಹಣದ ಭಾರ ಬೀಳದೆ, ಸಾರ್ವಜನಿಕರು ಸಹಕಾರವನ್ನು ಒದಗಿಸಲು ಅನುಕೂಲವಾಗುವುದು. ಇದೇ ಸಹಕಾರಿ ಚಳವಳ ಉದ್ದೇಶ; ಸರಕಾರ ಹೀಗೆ ನೆರವಾಗುವುದರಿಂದ ಚಳವಳವನ್ನು ಪುರಸ್ಕರಿಸಿದಂತೆ ಹಾಗೂ ಅದಕ್ಕೆ ಉತ್ತೇಜನ ಕೊಟ್ಟಂತೆ ಆಗುವುದು.

ಈ ಕಲಮು ವ್ಯಾಪಕವಾಗಿ ಆರ್ಥಿಕ ನೆರವನ್ನು ಕೊಡಲು ಸಹಾಯ ಮಾಡು ವುದು. ಒಂದಿಲ್ಲೊಂದು ರೀತಿಯಿಂದ ಸಹಕಾರಿ ಸಂಘಕ್ಕೆ ಸರಕಾರವು ಸಹಾಯ ಸಲ್ಲಿಸುವ ಅನುಕೂಲತೆ ಇದರಲ್ಲಿ ಒದಗಿಸಲಾಗಿದೆ.

## ೫೪. ಸಹಾಯ ಮಾಡಲಾದ ಸಂಘದ ನಿಯಂತ್ರಣ.

ಯಾವುದೇ ಸಹಕಾರಿ ಸಂಘಕ್ಕೆ ಎರಡು ಲಕ್ಷ ರೂಪಾಯಿಗಳಿಗೆ ಕಡಿಮೆ ಆಗದಷ್ಟು ಹಣವನ್ನು ಸರಕಾರದ ಸಹಾಯವೆಂದು ಕೊಡಲ್ಪಟ್ಟಿರುವಾಗ, ರಾಜ್ಯ ಸರಕಾರವು ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ಸರಕಾರದ ಹಿತ ಸಂಬಂಧವನ್ನು ಸಂರಕ್ಷಿಸಲು ಹಾಗೆ ಮಾಡುವುದು ಸಾರ್ವಜನಿಕರಹಿತದ ದೃಷ್ಟಿ ಯಿಂದ ಆವಶ್ಯಕವೆಂದು ಅದಕ್ಕೆ ಮನವರಿಕೆಯಾದರೆ, ರಾಜ್ಯ ಸರಕಾರದ ಅಭಿ ಪ್ರಾಯದಲ್ಲಿ ಯೋಗ್ಯವೆನ್ನಿಸುವಂತಹ ನಿಯಂತ್ರಣವನ್ನು ಅಂತಹ ಸಂಘದ ವ್ಯವ ಹಾರ ನಡೆವಳಿಕೆಯಲ್ಲಿ ನಿರ್ವಹಿಸುವ ಅಧಿಕಾರವನ್ನು ಪಡೆಯಬಹುದು.

**ವಿವೇಚನೆ**

ಸರಕಾರವು ಸಹಕಾರಿ ಸಂಘಕ್ಕೆ ಸಹಾಯ ಮಾಡುವುದು ಸರಕಾರದ ಕರ್ತವ್ಯವಾಗಿರುವುದು. ಈ ಕರ್ತವ್ಯದ ಜತೆಗೆ ಇನ್ನೊಂದು ಕರ್ತವ್ಯ ಉಂಟಾಗುವುದು. ಸರಕಾದ ಹತ್ತಿರವಿದ್ದ ಹಣವು, ಸಾರ್ವಜನಿಕರ ಹಣವು. ಸಾರ್ವಜನಿಕರ ಹಿತ ಸಾಧನೆಗಾಗಿ ಇರುವ ಹಣವು. ಆದ್ದರಿಂದ ಸರಕಾರದ ಹಣದಿಂದ ಸಾರ್ವಜನಿಕರ ಹಿತ ಸಾಧಿಸಬೇಕು; ಹಾಗೂ ಸರಕಾರದ ಹಣವು ಭದ್ರವಾಗಿರಬೇಕು. ಈ ದೃಷ್ಟಿಯಿಂದ ವಿಚಾರಿಸಿದಾಗ ಯಾವ ಸಹಕಾರಿ ಸಂಘಕ್ಕೆ ಸರಕಾರವು ಸಹಾಯ ಮಾಡುವುದೋ ಆ ಸಂಘದ ವ್ಯವಹಾರದ ನಡೆವಳಿಕೆಯ ನಿಯಂತ್ರಣವನ್ನು ತನ್ನ ಹತ್ತಿರ ಇಟ್ಟುಕೊಳ್ಳುವುದು ಕ್ರಮಪ್ರಾಪ್ತವಾಗುವುದು. ಆದರೆ ಸರಕಾರ ಆರ್ಥಿಕ ಸಹಾಯ ನೀಡಿದ ಕೂಡಲೆ, ನಿಯಂತ್ರಣವನ್ನು ಮಾಡಲು ಮುಂದೆ ಬಂದರೆ ಸಹಕಾರಿ ಸಂಘಗಳ ಹೆಸರಿನಲ್ಲಿ ಸರಕಾರವೇ ವ್ಯವಹಾರ ಮಾಡಿದಂತೆ ಆಗುವುದು. ಹಾಗೆ ಮಾಡುವುದಕ್ಕೆ ಈ ಕಾಯಿದೆಯಿಂದ ಅನುಕೂಲ ಮಾಡಿಕೊಟ್ಟಿಲ್ಲ.

ಸರಕಾರವು ತನ್ನ ನಿಯಂತ್ರಣದ ಅಧಿಕಾರವನ್ನು ನಡೆಸಬೇಕಾದರೆ ಅದಕ್ಕೆ ಕೆಲವೊಂದು ಪರಿಸ್ಥಿತಿ ಉಂಟಾಗಬೇಕು. ಒಂದು ಸರಕಾರದ ಆರ್ಥಿಕ ಸಹಾಯವು ಆ ಸಂಘಕ್ಕೆ ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಆಗಿರಬಾರದು. ಅಂದರೆ ಎರಡು ಲಕ್ಷ ರೂಪಾಯಿ ಇಲ್ಲವೆ ಹೆಚ್ಚು ರೂಪಾಯಿ ಸರಕಾರದಿಂದ ಆ ಸಂಘಕ್ಕೆ ಸಹಾಯವಾಗಿ ಬಂದಿರಬೇಕು. ಮತ್ತು ಹೀಗೆ ಸಹಾಯ ಸಲ್ಲಿಸಲ್ಪಟ್ಟ ಸಂಘದ ವ್ಯವಹಾರದಲ್ಲಿ ನಿಯಂತ್ರಣ ಮಾಡುವುದು ಸಾರ್ವಜನಿಕ ಹಿತದ ದೃಷ್ಟಿಯಿಂದ ಆವಶ್ಯಕವಾಗಿದೆಯೆಂದು ಸರಕಾರಕ್ಕೆ ಮನವರಿಕೆಯಾಗಿರಬೇಕು. ಸರಕಾರದ ಹಿತ ಸಂಬಂಧವನ್ನು ಭದ್ರವಾಗಿಡಬೇಕೆಂಬ ಹಾಗೆ ಅಭಿಪ್ರಾಯವಾಗಿರಬೇಕು. ಅಂದಾಗ ಸರಕಾರವು ಆ ಸಂಘದ ವ್ಯವಹಾರದಲ್ಲಿ ನಿಯಂತ್ರಣದ ಅಧಿಕಾರವನ್ನು ನಡೆಸುವುದು. ಈ ನಿಯಂತ್ರಣವು ಅನಿರ್ಬಂಧವಾದ ನಿಯಂತ್ರಣವಾಗಿಲ್ಲ. ಎಷ್ಟು ಮಟ್ಟಿಗೆ ನಿಯಂತ್ರಣದ ಅಧಿಕಾರ ನಡೆಯಿಸುವುದರಿಂದ ಸರಕಾರದ ಹಿತಸಂಬಂಧವು ಭದ್ರವಾಗಿರುವುದಕ್ಕೆ ಸಾಕಾಗುವುದೋ ಅಷ್ಟು ಮಟ್ಟಿಗೆ ಮಾತ್ರ ನಿಯಂತ್ರಣ ಎಂದು ಹೇಳಲಾಗಿದೆ.

ಒಟ್ಟಿನಲ್ಲಿ ಸಂಘದ ಸ್ವಾತಂತ್ರ್ಯ ಕಸಿದುಕೊಂಡಿರಬಾರದು; ಸಾರ್ವಜನಿಕ ಹಿತ ಸಾಧಿಸಿರಬೇಕು; ಸರಕಾರದ ಹಿತಸಂಬಂಧವು ಭದ್ರವಾಗಿರಬೇಕು. ಅಂತಹ ಪ್ರಸಂಗದಲ್ಲಿ ಅಷ್ಟು ಮಟ್ಟಿಗೆ ನಿಯಂತ್ರಣವು ಸರಕಾರವು ೨ ಲಕ್ಷ ರೂಪಾಯಿಗಳಿಗಿಂತ ಹೆಚ್ಚಿಗೆ ಸಹಾಯ ಮಾಡಲ್ಪಟ್ಟ ಸಂಘದ ವ್ಯವಹಾರದ ನಡೆವಳಿಕೆಯಲ್ಲಿ ಇರಬೇಕು. ಹಾಗೆ ನಿಯಂತ್ರಣದ ಅಧಿಕಾರ ನಡೆಸಲು ಈ ಕಲಮು ಸರಕಾರಕ್ಕೆ ಆ ಸಂದರ್ಭದಲ್ಲಿ ಅನುಕೂಲ ಮಾಡಿಕೊಡುತ್ತದೆ.

## ೫೫. ಈ ಪ್ರಕರಣದ ಶರತುಗಳು ಇತರ ಕಾಯಿದೆಗಳನ್ನು ಮೇಲ್ಮಾಯುವುವು.

ಈ ಕಾಯಿದೆಯಲ್ಲಿ ಇಲ್ಲವೆ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯಲ್ಲಿ ವಿಸಂಗತವಾಗುವಂತೆ ಏನೇ ಹೇಳಲಾಗಿದ್ದರೂ ೪೨ ರಿಂದ ೫೧ ರ ವರೆಗಿನ ಕಲಮುಗಳಲ್ಲಿಯ ಶರತುಗಳು ಪರಿಣಾಮಕಾರಿಯಾಗತಕ್ಕದ್ದು.

**ವಿವೇಚನೆ**

ಸರಕಾರವು ಅನೇಕ ಕಾಯಿದೆಗಳನ್ನು ಮಾಡಿರುತ್ತದೆ; ಮಾಡುತ್ತದೆ. ಅಂತಹ ಯಾವ ಕಾಯಿದೆಗಳಲ್ಲಿ ಏನೇ ಹೇಳಲಾಗಿದ್ದರೂ ಹೇಳಿದ ಮಾತುಗಳು ೪೨ ರಿಂದ ೫೧ ರ ವರೆಗಿನ ಕಲಮುಗಳಲ್ಲಿ ಹೇಳಿದ ಸಂಗತಿಗಳಿಗೆ ವಿಸಂಗತವಾಗಿದ್ದರೂ ಆ ಕಾಲಕ್ಕೆ ಜಾರಿಯಲ್ಲಿದ್ದ ಬೇರೆ ಕಾಯಿದೆಗಳ ಮಾತುಗಳು ಈ ೪೨ ರಿಂದ ೫೧ ರ ವರೆಗಿನ ಕಲಮುಗಳ ಶರತುಗಳಿಗೆ ಬಾಧೆ ತರತಕ್ಕದ್ದಲ್ಲ ಎಂದು ಸಂರಕ್ಷಣೆ ಕೊಡಲಾಗಿದೆ. ಈ ಸಂರಕ್ಷಣೆ, ಬೇರೆ ಕಾಯಿದೆಯಲ್ಲಿಯ ಮಾತುಗಳಿಗೆ ಅನ್ವಯಿಸಿದಂತೆ ಈ ಸಹಕಾರಿ ಸಂಘದ ಕಾಯಿದೆಯಲ್ಲಿ ಬೇರೆ ಯಾವುದೇ ಕಲಮುಗಳಲ್ಲಿ ಹೇಳಿದುದಕ್ಕೆ ಅನ್ವಯಿಸುವುದು. ಅಂದರೆ ಒಟ್ಟಿನಲ್ಲಿ ೪೨ ರಿಂದ ೫೧ ರ ವರೆಗೆ ಇರುವ ಕಲಮಿನಲ್ಲಿ ಹೇಳಿದ ಶರತುಗಳು ಯಾವ ಕಾಯಿದೆಯಿಂದಲೂ ಯಾವ ಕಾಲಕ್ಕೂ ಬಾಧಿತವಾಗತಕ್ಕದ್ದಲ್ಲ. ಆ ಶರತುಗಳು ಸದಾ ಪರಿಣಾಮಕಾರಿಯಾಗತಕ್ಕದ್ದು, ಎಂದು ಅರ್ಥ.

೪೨ ರಿಂದ ೫೧ ರ ವರೆಗೆ ಇರುವ ಕಲಮುಗಳು ಸರಕಾರದ ಅಪ್ರತ್ಯಕ್ಷ ಪಾಲುಗಾರಿಕೆಯ ಬಗ್ಗೆ ಅವೆ. ಸರಕಾರದ ಪಾಲುಗಾರಿಕೆಯ ಮುಖ್ಯ ನಿಧಿ, ಉಪ ನಿಧಿ, ಅವುಗಳ ಉಪಯೋಗ, ಅದರಲ್ಲಿ ಜಮಾ ಆದ ಹಣದ ವಿಲೇವಾಟ ಆ ಹಣದೊಳಗಿಂದ ಶೇರು ಕೊಳ್ಳುವಾಗ ಸರಕಾರದ ಸಮ್ಮತಿ, ಆ ಶೇರುಗಳ ಮೇಲೆ ಇರುವ ನಿಯಮಿತ ಹೊಣೆಗಾರಿಕೆ, ಆ ಶೇರುಗಳ ಮೇಲಿನ ಲಾಭಾಂಶದ ಮೇಲೆ ನಿರ್ಬಂಧ, ಶೇರುಗಳನ್ನು ಕೊಳ್ಳುವುದರಿಂದ ಆಗಬಹುದಾದ ಹಾನಿಯ ಸಂಬಂಧದಲ್ಲಿ ಶೇರುಗಳನ್ನು ಕೊಂಡ ಸಂಘಗಳಿಗೆ ಅಭಯ ಮುಂತಾದ ವಿಷಯಗಳು ಈ ಕಲಮುಗಳಲ್ಲಿ ಹೇಳಿದೆ. ಯಾವ ಕಾಯಿದೆಯಲ್ಲಿ ಏನೇ ಹೇಳಲಾದರೂ ಯಾವುದೇ ಬದಲಾವಣೆ ಆದರೂ ಸರಕಾರವು ಸಹಕಾರಿ ಸಂಘಗಳಲ್ಲಿ ತೊಡಗಿಸಿದ ಹಣವು ಭದ್ರವಾಗಿರಬೇಕು; ಆ ಬಗ್ಗೆ ಮಾಡಿದ ವ್ಯವಸ್ಥೆಯು ನಿರಂತರವಾಗಿ ಅಬಾಧಿತವಾಗಿರಬೇಕು ಎಂಬುದರ ಸಲುವಾಗಿ ಈ ಕಲಮು ೫೫ ರ ಮೂಲಕ ಸಂರಕ್ಷಣೆ ಒದಗಿಸಲಾಗಿದೆ ಎಂಬುದನ್ನು ತಿಳಿಯಬೇಕು.

## ಪ್ರಕರಣ: ೭ ಸಹಕಾರಿ ಸಂಘಗಳ ಆಸ್ತಿ ಹಾಗೂ ನಿಧಿಗಳು.

### ೬೬. ನಿಧಿಗಳು ವಿಭಾಗಿತವಾಗತಕ್ಕದ್ದಲ್ಲ.

ಸಹಕಾರಿ ಸಂಘದ ನಿಕ್ಕಿ ಲಾಭಗಳ ಹೊರತು ಅದರ ನಿಧಿಗಳ ಯಾವುದೇ ಭಾಗವು ಬೋನಸ್ಸಿನ ರೂಪದಲ್ಲಿ ಇಲ್ಲವೆ ಲಾಭಾಂಶದ ರೂಪದಲ್ಲಿ ಇಲ್ಲವೆ ಬೇರೆ ರೀತಿಯಲ್ಲಿ ಸದಸ್ಯರಲ್ಲಿ ಹಂಚಲ್ಪಡತಕ್ಕದ್ದಲ್ಲ.

**ನಿವೇಚನೆ**

ಸಂಘದ ಸದಸ್ಯರಲ್ಲಿ ಲಾಭವನ್ನು ಹಂಚುವ ಕ್ರಮವಿದೆ. ಅದನ್ನು ಸಂಘದ ಲಾಭದೊಳಗಿಂದ ಹಂಚಲಾಗುವುದು. ಲಾಭದೊಳಗಿನ ಯಾವ ಭಾಗವನ್ನೂ ಹಂಚತಕ್ಕದ್ದು. ನಿಕ್ಕಿ ಲಾಭವನ್ನು ಹಂಚತಕ್ಕದ್ದು. ನಿಕ್ಕ ಲಾಭವಲ್ಲದ ಯಾವುದನ್ನೂ ಸಂಘದ ಸದಸ್ಯರಲ್ಲಿ ಬೋನಸ್ಸೆಂದು, ಲಾಭಾಂಶವೆಂದು, ಇಲ್ಲವೆ ಬೇರೆ ಯಾವುದೇ ಹೆಸರಿನಲ್ಲಿ ಹಂಚತಕ್ಕದ್ದಲ್ಲ. ಆದ್ದರಿಂದ ನಿಕ್ಕಿ ಲಾಭವೆಂದರೇನು? ಎಂಬ ಪ್ರಶ್ನೆ ಬರುವುದು. ಆ ಬಗ್ಗೆ ಮುಂದಿನ ಕಲಮಿನಲ್ಲಿ ಹೇಳಿದೆ. ಆದರೆ ಈ ಕಲಮಿನ ಉದ್ದೇಶವನ್ನು ತಿಳಿಯಬೇಕು. ಬಂಡವಲಿನ ಭಾಗವಾಗಿರುವ ಹಣವನ್ನು ಯಾವುದೇ ಕಾರಣದಿಂದ ಯಾವುದೇ ಹೆಸರಿನಿಂದ ಸದಸ್ಯರಲ್ಲಿ ಹಂಚಬಾರದು; ನಿಕ್ಕಿ ಲಾಭವಾಗಿರುವುದನ್ನು ಹಂಚಬೇಕು. ಬಂಡವಲಿನ ಹಣವು ದುಡಿಯುವ ಹಣವು. ಲಾಭದ ಹಣವಲ್ಲ. ದುಡಿಯುವ ಹಣವನ್ನು ಹಂಚಿಕೊಂಡರೆ ಹಾಲು ಹಿಂಡುವ ಬದಲು, ಕೆಚ್ಚಲವನ್ನು ಕೊಯ್ದು ಹಂಚಿಕೊಂಡಂತೆ. ಬಂಡವಲು-ಹಾಗೂ ಇತರ ರೀತಿಯಲ್ಲಿ ಬಂದ ಡುಡಿಯುವ ಹಣವು ಯಾವಾಗಲೂ ಭದ್ರವಾಗಿಡಲ್ಪಟ್ಟರೇನೇ ಸಂಘವು ಲಾಭದಾಯಕವಾಗಿ ದುಡಿಯುವುದು. ಈ ತಿಳಿವಳಿಕೆ, ಇದರಲ್ಲಿ ಅಡಕವಾದ ತತ್ವದ ತಿಳಿವಳಿಕೆ ಇರುವುದು ಅಗತ್ಯವದೆ.

ಬೋನಸ್ಸು ಬೇರೆ, ಲಾಭಾಂಶ ಬೇರೆ, ಎಂಬುದು ಆ ಎರಡು ಶಬ್ದಗಳು ಉಪಯೋಗಿಸಲ್ಪಟ್ಟದ್ದರಿಂದಲೇ ತಿಳಿಯುವುದು. ಲಾಭಾಂಶವು ಒಂದು ದರದಂತೆ ಶೇರುಗಳ ಮೇಲೆ ಕೊಡಲಾಗುವ ಹಣ; ಎಂದು ಸ್ಥೂಲವಾಗಿ ಹೇಳಬಹುದು. ಅದು ಶೇರು ಹಣದ ಮೇಲಿನ ಬಡ್ಡಿಯಲ್ಲ; ಬಡ್ಡಿಯು ಮೂಲತಃ ನಿರ್ಣಯಿತವಾದ ದರ; ಲಾಭಾಂಶವು ನಂತರ ನಿರ್ಣಯಿತವಾದಂತಹ ದರವಲ್ಲಿಯ ಹಣ. ಲಾಭಾಂಶಕ್ಕೆ ಮಿತಿಯಿರುವ ಸಂಭವನಿದೆ. ಆದರೆ, ಹೆಚ್ಚು ಲಾಭವಾದಾಗ, ಲಾಭಾಂಶದ ರೂಪದಲ್ಲಿ ಕೊಡಲು ಬಾರದೆ ಇರುವಾಗ ಬೋನಸ್ಸಿನ ರೂಪದಲ್ಲಿ ಕೊಡುವ ಸೌಕರ್ಯ ಉಂಟಾಗುವುದು. ಲಾಭಾಂಶವು ಹಕ್ಕಿನಿಂದ ಪಡೆಯಬಹುದಾದ ಹಣವಾಗಿದ್ದರೆ, ಬೋನಸ್ಸು ಹಾಗಲ್ಲ ನ್ಯಾಯವಾಗಿ ದೊರೆಯುವ ಹಣದ ಮೇಲೆ, ಸಂಸ್ಥೆಯ ಸಂಚಾಲಕರು ಉದಾರತನದ ರೀತಿಯಲ್ಲಿ ಹಂಚುವ ಹಣವೆಂದರೆ ಬೋನಸ್ಸು. ಅದಕ್ಕೂ ಕ್ರಮ-ಮಿತಿ ಇದೆ.

ಲಾಭಾಂಶವಾಗಲೀ, ಬೋನಸ್ಸಾಗಲಿ, ನಿಕ್ಕಿ ಲಾಭದ ಹಣದಿಂದ ಹಂಚಲ್ಪಡಬೇಕೆಂದು ಈ ಕಲಮು ಹೇಳುತ್ತದೆ.

**೫೭. ನಿಕ್ಕಿ ಲಾಭಗಳು ಹಾಗೂ ಅವುಗಳ ವಿಲೇವಾಟ.**

(೧) ಗೊತ್ತು ಮಾಡಬಹುದಾದಂತಹ ನಿಯಮಗಳ ಅನುಸಾರವಾಗಿ ಸಹಕಾರಿ ಸಂಘಗಳ ನಿಕ್ಕಿ ಲಾಭಗಳನ್ನು ನಿರ್ಧರಿಸತಕ್ಕದ್ದು: ಮತ್ತು ಬೇರೆ ಬೇರೆ ಸಹಕಾರಿ ಸಂಘಗಳ ವರ್ಗಗಳಿಗೆ ಬೇರೆ ಬೇರೆ ನಿಯಮಗಳನ್ನು ಮಾಡಬಹುದು.

(೨) ಯಾವುದೇ ವರುಷದಲ್ಲಿಯ ನಿಕ್ಕಿ ಲಾಭಗಳಲ್ಲಿಯ ನೂರಕ್ಕೆ ಇಪ್ಪತ್ತೈದರಕಿಂತ ಕಡಿಮೆಯಲ್ಲದಷ್ಟು ನಿಕ್ಕಿ ಲಾಭಗಳಲ್ಲಿಯ ಹಣವನ್ನು ಸಹಕಾರಿ ಸಂಘವು ರಿಜರ್ವ ಫಂಡಿಗೆ ಹಸ್ತಾಂತರಿಸತಕ್ಕದ್ದು.

(೩) ಬಾಕಿ ಉಳಿದ ನಿಕ್ಕಿ ಲಾಭಗಳನ್ನು ಈ ಕೆಳಗಿನ ಉದ್ದೇಶಗಳಲ್ಲಿ ಎಲ್ಲ ಇಲ್ಲವೆ ಯಾವುದೇ ಉದ್ದೇಶಗಳಿಗಾಗಿ ಉಪಯೋಗಿಸಬಹುದು:—

(ಅ) ಸಂದಾಯವಾದ (Paidup) ಶೇರುಗಳ ಮೇಲೆ ಸದಸ್ಯರಿಗೆ ಗೊತ್ತುಮಾಡಿದ ಮಿತಿಯನ್ನು ಮೀರದ ದರದಂತೆ ಲಾಭಾಂಶವನ್ನು ಕೊಡುವುದಕ್ಕಾಗಿ;

(ಬ) ನಿಯಮಗಳ ಅನ್ವಯವಾಗಿ ರಚಿತವಾದ ಸಹಕಾರಿ ಶಿಕ್ಷಣ ನಿಧಿಯು ಪೋಟನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದ ನಿಕ್ಕಿ ಲಾಭಗಳಲ್ಲಿಯ ಪ್ರತಿಶತ ಭಾಗವನ್ನು ಕೊಡುವುದಕ್ಕಾಗಿ;

(ಕ) ಪೋಟ ನಿಯಮಗಳಲ್ಲಿ ನಿರ್ದಿಷ್ಟ ಪಡಿಸಿದ ರೀತಿಯಲ್ಲಿ ಮತ್ತು ಅಷ್ಟರ ಮಟ್ಟಿಗೆ ಸಂಘದೊಂದಿಗೆ ಅವರು ಮಾಡಿದ ವ್ಯವಹಾರದ ರಕಮಿನ ಮೇಲೆ ಇಲ್ಲವೆ ಗಾತ್ರದ ಮೇಲೆ ಸದಸ್ಯರಿಗೆ ಬೋನಸ್ಸು ಕೊಡುವುದಕ್ಕಾಗಿ;

ಆದರೆ, ಪತ್ತಿನ ಸಂಘದಲ್ಲಿಯ ಸದಸ್ಯರಿಗೆ ಯಾವುದೇ ಬೋನಸ್ಸು ಕೊಡಲ್ಪಡತಕ್ಕದ್ದಲ್ಲ;

(ಡ) ಪೋಟ ನಿಯಮಗಳಲ್ಲಿ ನಿರ್ದಿಷ್ಟ ಪಡಿಸಬಹುದಾದಂತಹ ವಿಶಿಷ್ಟ ನಿಧಿಗಳನ್ನು ರಚಿಸುವುದಕ್ಕಾಗಿ ಇಲ್ಲವೆ ಅವುಗಳಿಗೆ ವಂತಿಗೆಯನ್ನು ಸಲ್ಲಿಸುವುದಕ್ಕಾಗಿ;

(ಇ) ೧೮೯೦ (ಕೇಂದ್ರ, ಕಾಯಿದೆ ನಂ. ೬-೧೮೯೦) ರ ಚಾರಿಟೇಬಲ್ ಎಂಡೋಮೆಂಟ ಆ್ಯಕ್ಟದ ಕಲಮು ೨ ರಲ್ಲಿ ವ್ಯಾಖ್ಯೆ ಮಾಡಿದ ಹಾಗೆ ಇರುವ ಯಾವುದೇ ಧರ್ಮಾರ್ಥ ಉದ್ದೇಶಕ್ಕಾಗಿ, ನಿಕ್ಕಿ ಲಾಭಗಳಲ್ಲಿಯ ಪ್ರತಿಶತ ಹತ್ತರಕಿಂತ ಹೆಚ್ಚು ಆಗದಷ್ಟು ಹಣವನ್ನು ದಾನ ಕೊಡುವುದಕ್ಕಾಗಿ; ಮತ್ತು

(ಫ) ಪೋಟ ನಿಯಮಗಳಲ್ಲಿ ನಿರ್ದಿಷ್ಟ ಪಡಿಸಿದ ರೀತಿಯಲ್ಲಿ ಮತ್ತು ಅಷ್ಟರ ಮಟ್ಟಿಗೆ ಸಂಘದ ನೌಕರರಿಗೆ ಬೋನಸ್ಸು ಕೊಡುವುದಕ್ಕಾಗಿ:—

ಆದರೆ, ಯಾವುದೇ ನೌಕರನಿಗೆ ಯಾವುದೇ ವರುಷದಲ್ಲಿ ಕೊಡಬಹುದಾದ ಬೋನಸ್ಸು ಅವನ ಎರಡು ತಿಂಗಳ ಪಗಾರಕ್ಕಿಂತ ಹೆಚ್ಚು ಆಗತಕ್ಕದ್ದಲ್ಲ.

**ವಿವೇಚನೆ**

ನಿಕ್ಕಿ ಲಾಭಗಳು ಎಂದರೇನು? ಅವುಗಳ ವಿಲೇವಾಟ ಮಾಡುವುದು ಹೇಗೆ ಎಂಬ ಬಗ್ಗೆ ಈ ಕಲಮಿನಲ್ಲಿ ಮಾರ್ಗದರ್ಶನ ಮಾಡುವ ಮಾತುಗಳನ್ನು ಹೇಳಲಾಗಿದೆ.

ನಿಕ್ಕಿ ಲಾಭಗಳನ್ನು ನಿರ್ಣಯಿಸಲು ನಿಯಮಗಳು ಇವೆಯೆಂಬುದು ಮುಖ್ಯ ಮಾತು. ನಿಯಮಗಳ ಸಹಾಯದಿಂದ ನಿಕ್ಕಿ ಲಾಭಗಳನ್ನು ನಿರ್ಧರಿಸತಕ್ಕದ್ದು. ಈ ನಿಯಮಗಳು ಎಲ್ಲ ಮಾದರಿಯ ಸಹಕಾರಿ ಸಂಘಗಳಿಗೆ ಒಂದೇ ರೀತಿಯವು ಇಲ್ಲ. ಬೇರೆ ಬೇರೆ ವರ್ಗದ ಸಂಘಗಳಿಗೆ ಬೇರೆ ಬೇರೆ ನಿಯಮಗಳು ಇರುತ್ತವೆ. ಯಾವ ಮಾದರಿಯ ಸಂಘಕ್ಕೆ ಯಾವ ನಿಯಮಗಳು ಇವೆಯೋ ಅವುಗಳ ಅನುಸಾರವಾಗಿ ಆ ಸಂಘದ ನಿಕ್ಕಿ ಲಾಭಗಳನ್ನು ನಿರ್ಧರಿಸತಕ್ಕದ್ದು; ಇದು ಮಹತ್ವದ ಮಾತು.

ಒಮ್ಮೆ ಸಂಬಂಧ ಪಟ್ಟ ನಿಯಮಗಳ ಅನುಸಾರವಾಗಿ ನಿಕ್ಕಿ ಲಾಭಗಳು ನಿರ್ಧರಿಸಲ್ಪಟ್ಟ ಮೇಲೆ ಯಾವುದೇ ಒಂದು ವರುಷಕ್ಕೆ ಆ ನಿಕ್ಕಿ ಲಾಭದಲ್ಲಿಯ ನೂರಕ್ಕೆ ಇಪ್ಪತ್ತೈದರಕಿಂತ ಕಡಿಮೆಯಾಗದಷ್ಟು ಹಣವನ್ನು ತೆಗೆದು ಅದನ್ನು ಆ ಸಂಘದ ರಿಜರ್ವ ಫಂಡಿಗೆ ಹಸ್ತಾಂತರಿಸತಕ್ಕದ್ದು. ಹೀಗೆ ರಿಜರ್ವ ಫಂಡಿಗೆ ಹಸ್ತಾಂತರಿಸಿದ ನಂತರ ಉಳಿದ ನಿಕ್ಕಿ ಲಾಭದ ಹಣವನ್ನು ಈ ಕಲಮಿನಲ್ಲಿ ಹೇಳಿದ ಬೇರೆ ಬೇರೆ ಉದ್ದೇಶಗಳಿಗಾಗಿ ಅಲ್ಲಿ ಕಾಣಿಸಿದಂತೆ ಉಪಯೋಗಿಸಬಹುದು. ಯಾವ ಉದ್ದೇಶಗಳಿಗೆ ಉಪಯೋಗಿಸಬಹುದು ಎಂಬುದನ್ನು ಇಲ್ಲಿ ಹೇಳಿದೆ.

ಸದಸ್ಯರು ಶೇರುಗಳನ್ನು ಕೊಂಡಿರುವುರು. ಶೇರು ಹಣ ಪೂರ್ತಿ ಸಂದಾಯವಾದಂತಹ ಶೇರುಗಳಿಗೆ ಲಾಭಾಂಶವನ್ನು ಹಂಚುವುದು. ಪೂರ್ತಿ ಹಣ ಸಂದಾಯವಾಗದೆ ಇರುವ ಶೇರುಗಳಿಗೆ ಲಾಭಾಂಶ ಹಂಚತಕ್ಕದ್ದಲ್ಲ ಎಂಬ ಸೂಚನೆ ಇಲ್ಲಿ ಇದೆಯೆಂಬುದನ್ನು ಮರೆಯಲಾಗದು. ಈ ಲಾಭಾಂಶವನ್ನು ಯಾವ ದರದಿಂದ ಹಂಚಬೇಕು; ಅದಕ್ಕೆ ಹಾಕಲಾದ ಮಿತಿಯನ್ನು ಮೀರದೆ ಇರುವ ದರದಂತೆ ಲಾಭಾಂಶವನ್ನು ಹಂಚಬಹುದು. ಈ ಮಿತಿಯನ್ನು ನಿಯಮಗಳಿಂದ ಗೊತ್ತು ಮಾಡಲಾಗಿರುವುದು. ಸದಸ್ಯರಿಗೆ ಅವರು ಪೂರ್ತಿ ಹಣ ಕೊಟ್ಟ ಶೇರುಗಳ ಮೇಲೆ ಗೊತ್ತುಮಾಡಲ್ಪಟ್ಟ ಮಿತಿಯ ಒಳಗೆ ಇರುವ ದರದಂತೆ ಲಾಭಾಂಶವನ್ನು ಹಂಚಲು ನಿಕ್ಕಿ ಲಾಭದ ಹಣವನ್ನು ಉಪಯೋಗಿಸಬಹುದು.

ಸಹಕಾರಿ ಸಂಘಗಳ ನಿಯಮಗಳು ಸಹಕಾರಿ ಶಿಕ್ಷಣ ನಿಧಿ ಎಂಬುದೊಂದು ನಿಧಿಯನ್ನು ರಚನೆ ಮಾಡಿರುವುವು. ಈ ನಿಧಿಯ ಬಗ್ಗೆ ಪೋಟ ನಿಯಮಗಳು ಇರುವುವು. ಈ ಪೋಟ ನಿಯಮಗಳು ನಿರ್ದಿಷ್ಟ ಪಡಿಸಿದ ಪ್ರಮಾಣದಲ್ಲಿ ನೂರಕ್ಕೆ ಇಂತಿಷ್ಟು ಎಂದು ಗೊತ್ತಾದ ಹಣವನ್ನು ಆ ಸಹಕಾರಿ ಶಿಕ್ಷಣ ನಿಧಿಗೆ ನಿಕ್ಕಿ ಲಾಭದಲ್ಲಿಯ ಹಣದಿಂದ ಕೊಡಬಹುದು.

ಸದಸ್ಯರಿಗೆ ಲಾಭಾಂಶವನ್ನು ಕೊಡುವುದು ಶೇರುಗಳ ಮೂಲಕ ಕ್ರಮ ಪ್ರಾಪ್ತವಾದ ಸಂಗತಿ. ಆದರೆ ಸದಸ್ಯರು ಕೆಲಸ ಮಾಡಿದ್ದಕ್ಕಾಗಿ ಅವರಿಗೆ ಆ ಕೆಲಸದ ಬಗ್ಗೆ ಬೋನಸ್ಸು ಕೊಡಬಹುದು. ಕೆಲಸವನ್ನು ಹಣದ ಬೆಲೆಯ ದೃಷ್ಟಿಯಿಂದ ನೋಡಬಹುದು ಇಲ್ಲವೆ ಗಾತ್ರದಿಂದ ನೋಡಬಹುದು. ಆದರ ಮೇಲೆ ಬೋನಸ್ಸು. ಈ ಬೋನಸ್ಸು ಕೊಡುವ ಬಗ್ಗೆ ಪೋಟ ನಿಯಮಗಳು ನಿರ್ದಿಷ್ಟ ಪಡಿಸುವುವು. ಆದರೆ ಬೋನಸ್ಸು ಯಾವ ಕಾರಣದಿಂದಲೂ ಪತ್ತಿನ ಸಂಘದ ಸದಸ್ಯರಿಗೆ ಕೊಡಲ್ಪಡತಕ್ಕದ್ದಲ್ಲ. ಬೋನಸ್ಸು ಸದಸ್ಯರು ಸಂಘದೊಂದಿಗೆ ಮಾಡಿದ ಕೆಲಸದ ಮೇಲೆ ಇರುವುದರಿಂದ ಪತ್ತಿನ ಸಂಘದಲ್ಲಿಯ ಕೆಲಸದ ಮೇಲೆ ಬೋನಸ್ಸು ಕೊಡಬಾರದೆಂಬ ನಿರ್ಬಂಧ ಹಾಕಲಾಗಿದೆ.

ಪೋಟ ನಿಯಮಗಳಲ್ಲಿ ಹೇಳಿದ ವಿಶೇಷ ನಿಧಿಗಳನ್ನು ರಚನೆ ಮಾಡುವುದಕ್ಕೆ, ರಚಿತವಾದ ನಿಧಿಗಳಿಗೆ ವಂತಿಗೆ ಕೊಡುವುದಕ್ಕೆ ನಿಕ್ಕಿ ಲಾಭದಲ್ಲಿಯ ಹಣವನ್ನು ಉಪಯೋಗಿಸಬಹುದು.

ಕೇಂದ್ರ ಸರಕಾರದ ಕಾಯಿದೆ ನಂ. ೬-೧೮೯೦ ರ ಧರ್ಮಾರ್ಥ ದಾನದ ಕಾಯಿದೆಯಲ್ಲಿ ಕಲಮು (೨) ರಲ್ಲಿ ವ್ಯಾಖ್ಯೆ ಮಾಡಲಾದ ಧರ್ಮಾರ್ಥ ಉದ್ದೇಶಗಳಿಗಾಗಿ ದಾನ ಕೊಡುವುದಕ್ಕೆ ಉಪಯೋಗಿಸಬಹುದು. ಈ ದಾನಗಳಿಗೆ ಮಿತಿ ಹಾಕಲಾಗಿದೆ. ನಿಕ್ಕಿ ಲಾಭಗಳಲ್ಲಿ ನೂರಕ್ಕೆ ಹತ್ತರಕಿಂತ ಹೆಚ್ಚು ಆಗದಷ್ಟು ರಕಮನ್ನು ದಾನವಾಗಿ ಕೊಡಬಹುದು ೧೮೯೦ ರ ಆ ಕಾಯಿದೆಯ ಕಲಮು (೨) ರಲ್ಲಿ ಹೇಳಿದ ಧರ್ಮಾರ್ಥ ಉದ್ದೇಶಗಳೆಂದರೆ: ಬಡವರಿಗೆ ಪರಿಹಾರ, ಶಿಕ್ಷಣ, ವೈದ್ಯಕೀಯ ಪರಿಹಾರ, ಸಾರ್ವಜನಿಕ ಸಾಮಾನ್ಯ ಉಪಯುಕ್ತತೆಯನ್ನು ಮುಂದುವರಿಸುವ ಕಾರ್ಯ; ಆದರೆ ಪ್ರತ್ಯೇಕವಾಗಿ ಧಾರ್ಮಿಕ ಶಿಕ್ಷಣ ಇಲ್ಲವೆ ಪೂಜೆಗಳಿಗಾಗಿ ಇರುವಂತಹ ಉದ್ದೇಶವು ಈ ಕಲಮಿನ ಅರ್ಥದಲ್ಲಿ ಧಾರ್ಮಿಕ ಉದ್ದೇಶವು ಅಲ್ಲ.

ಸದಸ್ಯರಿಗೆ ಬೋನಸ್ಸು ಕೊಡಬೇಕೆಂದರೆ ಕೊಡಬಹುದೆಂದು ಹೇಳಲಾಗಿದೆ. ಅದರಂತೆ ಸಂಘದಲ್ಲಿಯ ನೌಕರರಿಗೂ ಬೋನಸ್ಸು ಕೊಡಬಹುದು. ಯಾವ ರೀತಿಯಲ್ಲಿ ಮತ್ತು ಎಷ್ಟು ಎಂಬುದನ್ನು ಪೋಟ ನಿಯಮಗಳು ಹೇಳುವುವು. ಆದರೆ

ಅದಕ್ಕೆ ಮಿತಿಯಿದೆ. ಯಾವುದೇ ಒಂದು ವರುಷದಲ್ಲಿ ಯಾವನೇ ಒಬ್ಬ ನೌಕರನಿಗೆ ಆವನ ಎರಡು ತಿಂಗಳ ಪಗಾರದಕಿಂತ ಹೆಚ್ಚು ಬೋನಸ್ಸು ಕೊಡತಕ್ಕದ್ದಲ್ಲ.

ಇವುಗಳೆಲ್ಲವನ್ನು ಕೊಡಬಹುದು ಎಂದು ಹೇಳಿದೆ. ಅಂದರೆ ಕೊಡಲಿಕ್ಕೇ ಬೇಕು ಎಂದು ಅಲ್ಲ. ಕೊಟ್ಟರೆ ಅದು ಕಾಯಿದೆಗೆ ವಿರುದ್ಧವಾದ ಉಪಯೋಗ ವಾಗುವದಿಲ್ಲ ಎಂದು ಇತಿ-ಮಿತಿ ಹಾಕಲಾಗಿದೆ. ಈ ಕಟ್ಟುಗಳಲ್ಲಿ ನಿಕ್ಕಿ ಲಾಭದ ಹಣದ ಉಪಯೋಗವನ್ನು ಸಹಕಾರಿ ಸಂಘವು ಮಾಡಬಹುದು.

## ೫೮. ನಿಧಿಗಳನ್ನು ತೊಡಗಿಸುವುದು.

ಸಹಕಾರಿ ಸಂಘವು ತನ್ನ ನಿಧಿಗಳನ್ನು—

(ಅ) ಸರಕಾರದ ಸೇವಿಂಗ್ಸ ಬ್ಯಾಂಕಿನಲ್ಲಿ; ಇಲ್ಲವೆ

(ಬ) ೧೮೮೨ (ಕೇಂದ್ರ ಕಾಯಿದೆ ನಂ. ೨—೧೮೮೨) ರ ಇಂಡಿಯನ್ ಟ್ರಸ್ಟ್ಸ ಆ್ಯಕ್ಟದ ಕಲಮು ೨೦ ರಲ್ಲಿ ನಿರ್ದಿಷ್ಟ ಪಡಿಸಲಾದ ಯಾವುದೇ ಸೆಕ್ಯುರಿಟಿ (ಭದ್ರತಾ ಠೇವು) ಗಳಲ್ಲಿ; ಇಲ್ಲವೆ;

(ಕ) ಬೇರೆ ಯಾವುದೇ ಸಹಕಾರಿ ಸಂಘದ ಶೇರುಗಳಲ್ಲಿ ಇಲ್ಲವೆ ಭದ್ರತಾ ಠೇವುಗಳಲ್ಲಿ; ಇಲ್ಲವೆ.

(ಡ) ರಜಿಸ್ಟ್ರಾರನಿಂದ ಒಪ್ಪಿಗೆ ಕೊಡಲ್ಪಟ್ಟ ಯಾವುದೇ ಸಹಕಾರಿ ಬ್ಯಾಂಕಿನಲ್ಲಿ ಇಲ್ಲವೆ ಶೇಡೂಲ್ಡ ಬ್ಯಾಂಕಿನಲ್ಲಿ.

ತೊಡಗಿಸಬಹುದು ಇಲ್ಲವೆ ಠೇವು ಇಡಬಹುದು.

### ವಿವೇಚನೆ

ಇಲ್ಲಿ ಎರಡು ವಿಧಾನಗಳು ಇವೆ. ಸಹಕಾರಿ ಸಂಘವು ತನ್ನ ನಿಧಿಗಳ ಹಣವನ್ನು ತೊಡಗಿಸಬಹುದು ಇಲ್ಲವೆ ಠೇವು ಇಡಬಹುದು. ತೊಡಗಿಸುವುದೆಂದರೆ ಠೇವು ಇಟ್ಟಂತೆ ಅಲ್ಲ, ಎಂಬುದು ಸ್ಪಷ್ಟವಾಗಿದೆ. ಉತ್ಪನ್ನವನ್ನು ಉತ್ಪಾದಿಸುವ ವ್ಯವಹಾರಗಳಲ್ಲಿ ಹಣವನ್ನು ಹಾಕುವುದು ಎಂದರೆ ತೊಡಗಿಸುವುದು. ಠೇವು ಇಡುವುದೆಂದರೆ ತನ್ನ ಹತ್ತಿರ ಇರುವ ಹಣವನ್ನು ಭದ್ರತೆಗಾಗಿ ಇನ್ನೊಂದು ಕಡೆಗೆ-ಬ್ಯಾಂಕಿನಲ್ಲಿ-ಇಡುವುದು. ಠೇವು ಇಟ್ಟ ಹಣವು ಗೊತ್ತು ಮಾಡಿಕೊಂಡ ದರದ ಬಡ್ಡಿಯನ್ನು ತರುವುದು. ಆದರೆ ಅದು ಆ ಹಣದಿಂದ ಬಂದ ಉತ್ಪನ್ನವಲ್ಲ. ವ್ಯವಹಾರದಲ್ಲಿ ಹಣವನ್ನು ತೊಡಗಿಸಿ ಆ ವ್ಯವಹಾರದಿಂದ ಉತ್ಪನ್ನ ಪಡೆಯುವುದು ಉದ್ದೇಶವಾಗಿರುವಾಗ ತೊಡಗಿಸುವುದು ಎಂಬ ಅರ್ಥ. ಠೇವು ಎಂದರೆ ಬ್ಯಾಂಕಿನಲ್ಲಿ ಇಡುವುದು; ಭದ್ರವಾಗಿ ಇಡುವುದು. ತೊಡಗಿಸಿದ ಹಣದಿಂದ ಉತ್ಪನ್ನ ಪಡೆಯಬೇಕೆಂದು ಇಚ್ಛೆ ಇದ್ದರೂ ಅಲ್ಲಿ ಹಾನಿಯಾಗಬಹುದಾದ ಸಂಭವವೂ ಇರುವುದು. ಆದರೆ ಠೇವಿನಲ್ಲಿ ಹಾಗೆ ಇಲ್ಲ. ಠೇವಿನಲ್ಲಿ ಕೇವಲ ಗೊತ್ತು ಮಾಡಿದ ದರದಂತೆ ಬಡ್ಡಿ ಮಾತ್ರ ಬರುವುದು; ತೊಡಗಿಸಿದ ಹಣದಿಂದ ವ್ಯವಹಾರವು ಉತ್ತಮವಾದರೆ, ಹೆಚ್ಚು ಉತ್ಪನ್ನ ಬರುವುದು.

ಈ ಅರ್ಥದಲ್ಲಿ ಸಹಕಾರಿ ಸಂಘವು ತನ್ನ ನಿಧಿಗಳ ಹಣವನ್ನು ತೊಡಗಿಸ ಬಹುದು ಇಲ್ಲವೆ ಠೇವು ಇಡಬಹುದು. ಎಲ್ಲಿ ತೊಡಗಿಸಬಹುದು ಇಲ್ಲವೆ ಠೇವು ಇಡಬಹುದು? ಎಂಬ ಬಗ್ಗೆ ವಿವರಗಳನ್ನು ಕೊಡಲಾಗಿದೆ.

ಸರಕಾರಿ ಸೇವಿಂಗ್ಸ ಬ್ಯಾಂಕಿನಲ್ಲಿ; ಬೇರೆ ಯಾವುದೇ ಸಹಕಾರಿ ಸಂಘದ ಶೇರುಗಳಲ್ಲಿ ಇಲ್ಲವೆ ಸೆಕ್ಯುರಿಟಿಗಳಲ್ಲಿ; ಯಾವುದೇ ಸಹಕಾರಿ ಬ್ಯಾಂಕಿನಲ್ಲಿ ಇಲ್ಲವೆ ಶೆಡ್ಯೂಲ್ಡ ಬ್ಯಾಂಕಿನಲ್ಲಿ ಇಲ್ಲವೆ ಇಂಡಿಯನ್ ಟ್ರಸ್ಟ ಆ್ಯಕ್ಟದ ಕಲಮು ೨೦ ರಲ್ಲಿ ಹೇಳಿದ ಯಾವುದೇ ಸೆಕ್ಯುರಿಟಿಗಳಲ್ಲಿ; ಇಂಡಿಯನ್ ಟ್ರಸ್ಟ ಆ್ಯಕ್ಟದ ಕಲಮು ೨೦ ಸೆಕ್ಯುರಿಟಿಗಳ ಬಗ್ಗೆ ಏನು ಹೇಳುವುದು?

"ಯಾವುದೇ ಸ್ಥಾನಿಕ ಸರಕಾರದ ಇಲ್ಲವೆ ಭಾರತ ಸರಕಾರದ ಪ್ರಾಮಿಸರಿ ನೋಟುಗಳು, ಡಿಬೆಂಚರು; ಸರಕಾರವು ಆಶ್ವಾಸನ ಕೊಟ್ಟ ಸಂಸ್ಥೆಯ ಪ್ರಾಮಿಸರಿ ನೋಟುಗಳು, ಡಿಬೆಂಚರುಗಳು ಸರಕಾರದ ಪ್ರಾಮಿಸರಿ ನೋಟುಗಳು ಹಾಗೂ ಡಿಬೆಂಚರುಗಳೆಂದೇ ಗಣಿಸಲಾಗುವುದು. ರೇಲ್ವೆಯ ಡಿಬೆಂಚರು, ಇತರ ಕಂಪನಿಗಳ ಡಿಬೆಂಚರು, ಕೇಂದ್ರ ಇಲ್ಲವೆ ರಾಜ್ಯ ಸರಕಾರದ ಕಾಯಿದೆಗಳ ಮೂಲಕವಾಗಿ ಹೊರಡಿಸಲಾದ ಮುನಸಿಪಾಲಿಟಿಯ, ಪೋರ್ಟ ಟ್ರಸ್ಟ, ಮುಂತಾದವುಗಳ ಡಿಬೆಂಚರು"

ಆ ಆ್ಯಕ್ಟದ ಕಲಮು ೨೦ ರಲ್ಲಿ ಹೇಳಿದ ಸಾರಾಂಶವನ್ನೂ ಮೇಲೆ ಕೊಡಲಾಗಿದೆ. ಅದರಲ್ಲಿ ಅಡಕವಾದ ಸಂಗತಿಯೆಂದರೆ, ಯಾವ ಸಾಲ ಪತ್ರದ ಭದ್ರತೆಯ ಆಶ್ವಾಸನವಿದೆಯೋ ಅಂತಹ ಸಾಲ ಪತ್ರಗಳಲ್ಲಿ, ಭದ್ರತಾ ಠೇವುಗಳಲ್ಲಿ ತೊಡಗಿಸಲು ಅಡ್ಡಿಯಿಲ್ಲ ಎಂದು ಅರ್ಥವಾಗುವುದು. ಸಾರ್ವಜನಿಕ ವಿಶ್ವಾಸದ ಹಣವು ಭದ್ರವಾಗಿರಬೇಕೆಂದು ಈ ನಿರ್ಬಂಧ ಹಾಕಲಾಗಿದೆ. ಅದನ್ನು ತಿಳಿದು ಸಹಕಾರಿ ಸಂಘವು ತನ್ನ ನಿಧಿಗಳಲ್ಲಿಯ ಹಣವನ್ನು ತೊಡಗಿಸಬಹುದು ಇಲ್ಲವೆ ಠೇವು ಠೇವು ಇಡಬಹುದು. ನಿಕ್ಕಲ್ಲಿ ತೊಡಗಿಸಬಾರದು ಇಲ್ಲವೆ ಠೇವು ಇಡಬಾರದು ಎಂದು ಅರ್ಥ.

## ೫೯. ಸಾಲಪಡೆಯುವುದರ ಮೇಲೆ ನಿರ್ಬಂಧಗಳು

ಪೋಟನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದ ಇಲ್ಲವೆ ಗೊತ್ತುಮಾಡಬಹುದಾದ ಅಂತಹ ಕರಾರುಗಳ ಮೇಲೆ ಹಾಗೂ ಅಂತಹ ಪರಿವ್ಯಾಪ್ತಿಯಲ್ಲಿ ಮಾತ್ರ ಸಹಕಾರಿ ಸಂಘವು ಠೇವುಗಳನ್ನು ಇಲ್ಲವೆ ಸಾಲಗಳನ್ನು ಸ್ವೀಕರಿಸತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ಸಾಲಗಳನ್ನು ಇಲ್ಲವೆ ಠೇವುಗಳನ್ನು ಸ್ವೀಕರಿಸಲು ಈ ಕಲಮು ಅಧಿಕಾರ ಕೊಡುತ್ತದೆ. ಆದರೆ ಈ ಅಧಿಕಾರವು ಇದರಲ್ಲಿ ಹಾಕಿದ

ನಿರ್ಬಂಧಗಳಿಗೆ ಅಂಕಿತವಾಗಿದೆ. ಆ ನಿರ್ಬಂಧಗಳು ಪೋಟನಿಯಮಗಳಲ್ಲಿ ಹೇಳ ಲಾಗಿರುವುವು. ಪೋಟನಿಯಮಗಳು ಸಂಘವು ಯಾವ ಕರಾರಿನ ಮೇಲೆ ಸಾಲ-ಗಳನ್ನು ಇಲ್ಲವೆ ಠೇವುಗಳನ್ನು ಸ್ವೀಕರಿಸಬೇಕು ಎಂಬುದನ್ನು ಹೇಳುವುದಲ್ಲದೆ, ಎಷ್ಟು ಮಿತಿಯ ವರೆಗೆ ಸ್ವೀಕರಿಸಬೇಕು ಎಂಬುದನ್ನು ಹೇಳುತ್ತವೆ. ಆ ಮಿತಿ ಹಾಗು ಕರಾರುಗಳಿಗೆ ಒಳಪಟ್ಟು ಸಹಕಾರಿ ಸಂಘವು ಸಾಲಗಳನ್ನು ಇಲ್ಲವೆ ಠೇವುಗಳನ್ನು ಸ್ವೀಕರಿತತಕ್ಕದ್ದು. ಈ ನಿರ್ಬಂಧಗಳನ್ನು ಮೀರಿ ಸಾಲಗಳನ್ನು ಇಲ್ಲವೆ ಠೇವು-ಗಳನ್ನು ಸ್ವೀಕರಿಸಲು ಈ ಕಲಮು ಅಧಿಕಾರ ಕೊಡುವುದಿಲ್ಲ.

## ೬೦. ಸಾಲಗಳನ್ನು ಕೊಡುವುದರ ಮೇಲೆ ನಿರ್ಬಂಧಗಳು

(೧) ಸದಸ್ಯನಲ್ಲದ ಬೇರೆ ಯಾವುದೇ ವ್ಯಕ್ತಿಗೆ ಸಹಕಾರಿ ಸಂಘವು ಸಾಲ ವನ್ನು ಕೊಡತಕ್ಕದ್ದಲ್ಲ.

ಆದರೆ, ರಜಿಸ್ಟ್ರಾರನ ಸಾಮಾನ್ಯ ಇಲ್ಲವೆ ವಿಶಿಷ್ಟ ಪರವಾನಿಗಿಯಿಂದ ಬೇರೆ ಸಹಕಾರಿ ಸಂಘಕ್ಕೆ ಸಹಕಾರಿ ಸಂಘವು ಸಾಲಗಳನ್ನು ಕೊಡಬಹುದು.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ ಠೇವುದಾರನಿಗೆ ಅವನ ಠೇವಿನ ಆಧಾರದ ಮೇಲೆ ಸಹಕಾರಿ ಸಂಘವು ಸಾಲವನ್ನು ಕೊಡಬಹುದು.

**ವಿವೇಚನೆ**

ಸಹಕಾರಿ ಸಂಘವು ಸಾಲಗಳನ್ನು ತನ್ನ ಸದಸ್ಯರಿಗೆ ಮಾತ್ರ ಕೊಡತಕ್ಕದ್ದು. ಸದಸ್ಯರಲ್ಲದ ವ್ಯಕ್ತಿಗೆ ಸಾಲವನ್ನು ಕೊಡತಕ್ಕದ್ದಲ್ಲ ಎಂಬುದು ಮುಖ್ಯ ಮಾತು. ಇದನ್ನು ಅನುಲಕ್ಷಿಸಿ ಸಾಲವನ್ನು ಕೊಡಬಹುದು. ಸದಸ್ಯರಲ್ಲದವರ ಸಂಗಡ ವ್ಯವಹಾರ ಮಾಡಬಾರದು ಎಂಬುದು ಒಂದು ಸಂಗತಿಯಾದರೆ ಸದಸ್ಯರಿಗೆ ಹೆಚ್ಚು ಸೌಕರ್ಯ ಒದಗಿಸಬೇಕೇ ಹೊರತು ಹೆರವರಿಗೆ ನೆರವಾಗಿ ತಮ್ಮ ಸದಸ್ಯ ರಿಗೆ ನೆರವಿಲ್ಲದೆ ಕೂಡ್ರಿಸಬಾರದು ಎಂಬು ಇನ್ನೊಂದು ಬದಿಯ ಮಾತಾಗಿದೆ. ಇದಕ್ಕೆ ಒಂದು ಅಪವಾದವಿದೆ; ಹಾಗೆ ನೋಡಿದರೆ ಅದು ಅಪವಾದವಲ್ಲವೇನೋ ಅನ್ನಿಸುವಂತಿದೆ. ಸದಸ್ಯನಲ್ಲದ ವ್ಯಕ್ತಿಗೆ ಸಾಲಕೊಡಬಾರದೆಂದು ಹೇಳಿದೆಯ ಹೊರತು ಸಂಘಕ್ಕೆ ಕೊಡಬಾರದೆಂದು ಹೇಳಿಲ್ಲ. ಅಪವಾದದಲ್ಲಿ ಅದನ್ನು ಹೇಳಿದೆ. ಬೇರೆ ಸಹಕಾರಿ ಸಂಘಕ್ಕೆ ಸಾಲಕೊಡಲು ಅಡ್ಡಿಯಿಲ್ಲ. ಈ ಸಹಕಾರಿ ಸಂಘವು ಸದಸ್ಯ ಇಲ್ಲದೇ ಇದ್ದರೂ ಸಾಲಕೊಡಲು ಅಡ್ಡಿಯಿಲ್ಲ. ಈ ಸದಸ್ಯನಲ್ಲದ ಸಂಘಕ್ಕೆ ಸಾಲಕೊಡಬೇಕಾದರೆ ರಜಿಸ್ಟ್ರಾರನ ಪರವಾನಗಿ ಬೇಕು. ರಜಿಸ್ಟ್ರಾರನು ಸಾಮಾನ್ಯ ವಾಗಿ ಇಲ್ಲವೆ ವಿಶಿಷ್ಟವಾಗಿ ಪರವಾನಗಿ ಕೊಡಬಹುದು. ಸಾಮಾನ್ಯವಾಗಿ ಅನೇಕ ಸಂಘಗಳಿಗೆ ಕೂಡಿ ಒಂದು ಪರಿಪತ್ರವಾಗಿ ಪರವಾನಗಿ ಕೊಡಬಹುದು; ಇಲ್ಲವೆ ಯಾವುದೊಂದು ಸಂಘಕ್ಕೆ ವಿಶಿಷ್ಟವಾಗಿ ಪರವಾನಗಿ ಕೊಡಬಹುದು.

ಸದಸ್ಯನಲ್ಲದ ವ್ಯಕ್ತಿಗೆ ಸಾಲಕೊಡಬಾರದು ಎಂದು ಹೇಳಿ ಸದಸ್ಯನಲ್ಲದ ಸಂಘಕ್ಕೆ ರಜಿಸ್ಟ್ರಾರನ ಪರವಾನಗಿಯಿಂದ ಕೊಡಬಹುದೆಂದು ಹೇಳಿದ ಮೇಲೆ ಇನ್ನೂ ಒಂದು ಅಪವಾದಾತ್ಮಕ ಮಾತು ಈ ಕಲಮಿನಲ್ಲಿದೆ. ಅದು ಠೇವುದಾರನ ಸಂಬಂಧವಾಗಿ; ಯಾವುದೇ ವ್ಯಕ್ತಿಯು ಠೇವುದಾರನೆಂದು ಆಗಿರುವಾಗ ಅವನು ಇಟ್ಟ ಠೇವು ಹಣವನ್ನು ಆಧಾರವಾಗಿಟ್ಟುಕೊಂಡು ಸಹಕಾರಿ ಸಂಘವು ಅವನಿಗೆ ಸಾಲವನ್ನು ಕೊಡಬಹುದು. ಠೇವು ಹಣವನ್ನು ಆಧಾರವಾಗಿಟ್ಟುಕೊಂಡು, ಎಂದು ಹೇಳಿದ್ದರಿಂದ ಆಧಾರವಾಗಿರುವ ಹಣದಕಿಂತ ಹೆಚ್ಚು ಸಾಲವನ್ನು ಕೊಡಬಾರದು ಎಂಬ ಸೂಚನೆ ಅದರಲ್ಲಿ ಅಡಕವಾಗಿದೆ,

## ೬೧. ಸದಸ್ಯರಲ್ಲದವರ ಸಂಗಡ ಇತರ ವ್ಯವಹಾರಗಳ ಮೇಲೆ ನಿರ್ಬಂಧಗಳು

ಕಲಮು ೫೯ ಮತ್ತು ೬೦ ರಲ್ಲಿ ಅನುಕೂಲಿಸಲಾದುದನ್ನು ಬಿಟ್ಟು, ಸಹಕಾರಿ ಸಂಘದ ವ್ಯವಹಾರಗಳು ಸದಸ್ಯರಲ್ಲದ ಇತರ ವ್ಯಕ್ತಿಗಳೊಡನೆ, ಗೊತ್ತು ಮಾಡಬಹುದಾದ ನಿರ್ಬಂಧಗಳು, ಯಾವುದಾದರೂ ಇದ್ದರೆ, ಅವುಗಳ ಅಂಕಿತವಾಗಿರತಕ್ಕದ್ದು.

**ವಿವೇಚನೆ**

ಕಲಮು ೫೯ ಮತ್ತು ೬೦ ರಲ್ಲಿ ಸಹಕಾರಿ ಸಂಘವು ಸಾಲವನ್ನು ಪಡೆಯುವ ಬಗ್ಗೆ ಹಾಗೂ ಕೊಡುವ ಬಗ್ಗೆ ಇದ್ದ ನಿರ್ಬಂಧಗಳ ಬಗ್ಗೆ ಹೇಳಲಾಗಿದೆ. ಆ ವ್ಯವಹಾರಗಳನ್ನು ಬಿಟ್ಟು ಬೇರೆ ಯಾವುದಾದರೂ ವ್ಯವಹಾರವನ್ನು ಸಹಕಾರಿ ಸಂಘವು ಸದಸ್ಯರಲ್ಲದ ವ್ಯಕ್ತಿಗಳೊಡನೆ ಮಾಡಬೇಕಾದರೆ, ಆ ವ್ಯವಹಾರಗಳು ಗೊತ್ತುಮಾಡಬಹುದಾದ ನಿರ್ಬಂಧಗಳ ಅಂಕಿತವಾಗಿರತಕ್ಕದ್ದು. ಈ ನಿರ್ಬಂಧಗಳು ನಿಯಮುಗಳಿಂದ ಗೊತ್ತು ಮಾಡಲ್ಪಡುವುವು ಎಂದು ತಿಳಿಯಬೇಕು. ನಿಯಮುಗಳು ಒಂದು ವೇಳೆ ನಿರ್ಬಂಧಗಳನ್ನು ಗೊತ್ತು ಮಾಡಿದರೆ ಅದರ ಅಂಕಿತವಾಗಿ ವ್ಯವಹಾರಗಳು ನಡೆಯಬೇಕು. ನಿಯಮುಗಳು ನಿರ್ಬಂಧಗಳನ್ನು ಗೊತ್ತು ಮಾಡದೆ ಇದ್ದರೆ ? ಸದಸ್ಯರಲ್ಲದ ವ್ಯಕ್ತಿಗಳೊಡನೆ ಕಲಮು ೫೯-೬೦ ರಲ್ಲಿ ಹೇಳಿದುದನ್ನು ಬಿಟ್ಟು ಬೇರೆ ವ್ಯವಹಾರ ಮಾಡಬಾರದು ಎಂದು ಅರ್ಥವಾಗುವುದು. ನಿರ್ಬಂಧಗಳನ್ನು ನಿಯಮುಗಳು ಗೊತ್ತು ಮಾಡದಿದ್ದರೆ ಬೇಕಾದವರೊಡನೆ ಬೇಕಾದ ವ್ಯವಹಾರ ಮಾಡಬಹುದು ಎಂದು ಅರ್ಥ ಹೊರಡುವುದಿಲ್ಲ.

## ೬೨. ಪ್ರಾವಿಡೆಂಟ ಫಂಡು

(೧) ತನ್ನ ನೌಕರರ ಹಿತಕ್ಕಾಗಿ ಸಹಕಾರಿ ಸಂಘವು ವಂತಿಗೆಯ ಪ್ರಾವಿಡೆಂಟ ಫಂಡು ಎಂದು ಸ್ಥಾಪಿಸಬಹುದು; ಅದಕ್ಕೆ ಸಂಘದ ಪೋಟನಿಯಮುಗಳ

ಅನುಸಾರವಾಗಿ ನೌಕರನಿಂದ ಹಾಗೂ ಸಂಘದಿಂದ ಕೊಡಲ್ಪಟ್ಟ ವಂತಿಗೆಯನ್ನು ಜಮಾ ಮಾಡತಕ್ಕದ್ದು.

(೨) ಉಪಕಲಮು (೧) ರನ್ವಯುವಾಗಿ ಸಹಕಾರಿ ಸಂಘದಿಂದ ಸ್ಥಾಪಿಸಲ್ಪಟ್ಟ ವಂತಿಗೆಯ ಪ್ರಾವಿಡೆಂಟ ಫಂಡು—

(ಅ) ಸಂಘದ ವ್ಯವಹಾರಕ್ಕಾಗಿ ಉಪಯೋಗಿಸಲ್ಪಡತಕ್ಕದ್ದಲ್ಲ;

(ಬ) ಸಂಘದ ಸೊತ್ತಿನ ಭಾಗವಾಗಿ ರೂಪುಗೊಳ್ಳತಕ್ಕದ್ದಲ್ಲ; ಮತ್ತು

(ಕ) ಯಾವುದೇ ನ್ಯಾಯಾಲಯುದ ಇಲ್ಲವೆ ಬೇರೆ ಅಧಿಕಾರದ ಯಾವುದೇ ಇತರ ಕ್ರಮಕ್ಕೆ ಒಳಪಡತಕ್ಕದ್ದಲ್ಲ ಇಲ್ಲವೆ ಜಪ್ತಿಗೆ ಪಾತ್ರವಾಗತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘವು ತನ್ನ ನೌಕರ ವರ್ಗದವರಿಗಾಗಿ ಒಂದು ಪ್ರಾವಿಡೆಂಟ ಫಂಡನ್ನು ಸ್ಥಾಪಿಸಬಹುದು. ಇದು ವಂತಿಗೆಯ ಪ್ರಾವಿಡೆಂಟ ಫಂಡು. ಅಂದರೆ ನೌಕರರನ್ನು ವಂತಿಗೆ ಸಲ್ಲಿಸಬೇಕು; ಸಂಘವು ಪ್ರತಿಯೊಬ್ಬ ನೌಕರನಿಗಾಗಿ ವಂತಿಗೆ ಸಲ್ಲಿಸಬೇಕು. ಹೀಗೆ ವ್ಯವಸ್ಥೆ ಇರುವ ಪ್ರಾವಿಡೆಂಟ ಫಂಡಿಗೆ ವಂತಿಗೆಯ ಪ್ರಾವಿಡೆಂಟದ ಫಂಡು ಎಂದು ಹೆಸರು. ನೌಕರನು ಎಷ್ಟು ವಂತಿಗೆ ಸಲ್ಲಿಸಬೇಕು, ಸಂಘವು ಪ್ರತಿಯೊಬ್ಬ ನೌಕರನಿಗಾಗಿ ಎಷ್ಟು ಸಲ್ಲಿಸಬೇಕು ಎಂಬುದನ್ನು ಸಂಘದ ಪೋಟ ನಿಯುಮಗಳು ಹೇಳುವುವು. ಅವುಗಳ ಅನುಸಾರವಾಗಿ ವಂತಿಗೆ ಸಲ್ಲಿಸಬೇಕು. ಆ ವಂತಿಗೆಯನ್ನು ಪ್ರಾವಿಡೆಂಟ ಫಂಡಿಗೆ ಜಮಾ ಮಾಡತಕ್ಕದ್ದು.

ಸಹಕಾರಿ ಸಂಘವು ಸ್ಥಾಪಿಸಲಾದ ವಂತಿಗೆಯ ಪ್ರಾವಿಡೆಂಟ ಫಂಡನ್ನು ಪ್ರತ್ಯೇಕವಾಗಿ ಇಡತಕ್ಕದ್ದು. ಅದನ್ನು ಸಂಘದ ವ್ಯವಹಾರಗಳಾಗಿ ಉಪಯೋಗಿಸತಕ್ಕದ್ದಲ್ಲ; ಅದು ಸಂಘದ ಸೊತ್ತುಗಳಲ್ಲಿ ಭಾಗವಾಗಿ ರೂಪುಗೊಳ್ಳತಕ್ಕದ್ದಲ್ಲ. ಅವನ್ನು ಯಾವುದೇ ನ್ಯಾಯಾಲಯು ಇಲ್ಲವೆ ಇತರ ಅಧಿಕಾರವು ಜಪ್ತಿ ಮಾಡಲು ಬರುವುದಿಲ್ಲ; ಇತರ ಯಾವುದೇ ಕ್ರಮಕ್ಕೆ ಅದು ಅಂಕಿತವಾಗಿರತಕ್ಕದ್ದಲ್ಲ.

ಹೀಗೆ ನಿರ್ದಿಷ್ಟಪಡಿಸಿ ಪ್ರಾವಿಡೆಂಟ ಫಂಡಿಗೆ ಕಾಯಿದೆಯಿಂದ ಸಂರಕ್ಷಣೆ ಒದಗಿಸಲಾಗಿದೆ. ವ್ಯವಹಾರಕ್ಕೆ ಉಪಯೋಗವಾಗುವುದು ಬಂಡವಲು ಇಲ್ಲವೆ ಸಾಲ ಇಲ್ಲವೆ ಠೇವು. ಪ್ರಾವಿಡೆಂಟ ಫಂಡು ಈ ಯಾವ ವರ್ಗದಲ್ಲಿಯೂ ಬರುವುದಿಲ್ಲ. ಬರುವಂತೆ ಮಾಡಲೂ ಬಾರದು. ಸೊತ್ತು ಸಂಘದ ಋಣ ವಿಮೋಚನೆಗಾಗಿ ಇರುವ ಆಸ್ತಿಯು. ಪ್ರಾವಿಡೆಂಟ ಫಂಡು ಸಂಘದ ಆಸ್ತಿಯಲ್ಲ; ಆಸ್ತಿ ಆಗಬಾರದು. ಋಣ ವಿಮೋಚನೆಗಾಗಿ ಅದು ಬಳಸಲ್ಪಟ್ಟಿರಬಾರದೆಂದೇ ಅದು ಸೊತ್ತಿನ ಭಾಗವಾಗಿ ರೂಪಿಸಬಾರದೆಂದು ಹೇಳಿದೆ.

ಯಾವುದೇ ನ್ಯಾಯಾಲಯದಿಂದ ಇಲ್ಲವೆ ಇತರ ಅಧಿಕಾರದಿಂದ ಅದು ಜಪ್ತಿ ಮಾಡಲ್ಪಡತಕ್ಕದ್ದಲ್ಲ; ಬೇರೆ ಕ್ರಮದ ಅಂಕಿತವೂ ಅದು ಆಗತಕ್ಕದ್ದಲ್ಲ. ಜಪ್ತಿ ಆಗಲೀ ಕ್ರಮವಾಗಲೀ ಸಂಘದ ವ್ಯವಹಾರಕ್ಕೆ ಸಂಬಂಧಿಸಿದ್ದೆಂದು ಅರ್ಥ ಮಾಡ ಬೇಕಾಗುವುದು. ವೈಯುಕ್ತಿಕ ನೌಕರನ ವ್ಯವಹಾರದ ವಿಷಯವು ಇಲ್ಲಿ ಬರ ಲಾರದು. ಆದ್ದರಿಂದ ಸಂಘದ ವ್ಯವಹಾರಕ್ಕೆ ಸಂಬಂಧವಾಗಿ ಯಾವುದೇ ನ್ಯಾಯಾಲಯ ಇಲ್ಲವೆ ಬೇರೆ ಜಪ್ತಿಯ ಹುಕುಮು ತೆಗೆದರೂ ಬೇರೆ ಕ್ರಮವನ್ನು ಕೈಕೊಂಡರೂ ಆ ಹುಕುಮು ಇಲ್ಲವೆ ಕ್ರಮವು ಸಂಘವು ಸ್ಥಾಪಿಸಿದ ವಂತಿಗೆಯ ಪ್ರಾವಿಡೆಂಟ ಫಂಡದ ಹಣಕ್ಕೆ ಕೈ ಹಚ್ಚತಕ್ಕದ್ದಲ್ಲ ಆ ಫಂಡು ಜಪ್ತಿ ಪಾತ್ರವಾಗಿಲ್ಲ ಹಾಗೂ ಯಾವ ಕ್ರಮಕ್ಕೂ ಅಂಕಿತವಾಗಿಲ್ಲ ಎಂದು ಸ್ಪಷ್ಟ ಪಡಿಸಿ ಅದಕ್ಕೆ ಕಾಯಿ ದೆಯಿಂದ ಸಂರಕ್ಷಣೆ ಕೊಡಲಾಗಿದೆ.

ಪ್ರಾವಿಡೆಂಟ ಫಂಡದಲ್ಲಿಯ ಹಣವು ಆ ನೌಕರನಿಗೆ ಅವನು ನಿವೃತ್ತಿಯಾದ ಮೇಲೆ ದೊರೆಯುವಂತಹದು; ಅವನ ಮರಣ ಸಂಭವಿಸಿದರೆ ಅವನ ಅವಲಂಬಿತ ರಿಗೆ ದೊರೆಯುವಂತಹದು; ಆದ್ದರಿಂದ ನಿವೃತ್ತಿ ಪೂರ್ವದಲ್ಲಿ ಅದರ ಮೇಲೆ ಯಾರ ಅಧಿಕಾರವೂ ಇಲ್ಲವೆಂದು ಅರ್ಥ. ನಿಯಮಗಳು ಅನುಕೂಲ ಮಾಡಿಕೊಟ್ಟಿದ್ದರೆ ಅವನಿಗೆ ಅದರ ಮೇಲೆ ಸಾಲ ದೊರೆಯಬಹುದು. ಆದರೆ ನೌಕರಿಯಲ್ಲಿರುವ ತನಕ ಅದನ್ನು ಅವನಿಗೆ ತೆಗೆದುಕೊಳ್ಳಲು ಬಾರದು. ಆದ್ದರಿಂದ ಅದರ ಮೇಲೆ ನೌಕರನದೂ ಸಂಘದ್ದೂ ಅಧಿಕಾರವು ವಿಶಿಷ್ಟ ಪರಿಸ್ಥಿತಿಯಲ್ಲಿ ಮಾತ್ರ ಉಂಟಾ ಗುವುದರಿಂದ ಸಂಘದ ವ್ಯವಹಾರಕ್ಕಾಗಿ ಅದು ಬಂಡವಲು ಆಗದು, ಋಣ ವಿಮೋ ಚನೆಗಾಗಿ ಸೊತ್ತು ಆಗದು, ನ್ಯಾಯಾಲಯದ ಜಪ್ತಿ ಹುಕುಮಿಗೆ ಇಲ್ಲವೆ ಇತರ ಕ್ರಮಕ್ಕೆ ಅದು ಅಂಕಿತವಾಗದು. ಅದು ಪ್ರತ್ಯೇಕವಾಗಿಯೇ ಉಳಿಯುವುದು. ಹಾಗೆ ಉಳಿಯಬೇಕೆಂದೇ ಈ ಕಲಮಿನಿಂದ ಸಂಘಕ್ಕೆ ನಿರ್ಬಂಧವನ್ನು ಹಾಕ ಲಾಗಿದೆ.

## ಪ್ರಕರಣ : ೮ ಲೆಕ್ಕ ತಪಾಸಣೆ, ವಿಚಾರಣೆ, ಪರಿಶೀಲನೆ ಹಾಗೂ ಸರಚಾರ್ಜ

### ೬೩. ಲೆಕ್ಕ ತಪಾಸಣೆ

(೧) ಪ್ರತಿಯೊಂದು ಸಹಕಾರಿ ಸಂಘದ ಲೆಕ್ಕ ಪತ್ರಗಳನ್ನು ಒಂದು ವರ್ಷಕ್ಕೆ ಒಮ್ಮೆಯಾದರೂ ರಜಿಸ್ಟ್ರಾರನು ಲೆಕ್ಕ ತಪಾಸಣೆ ಮಾಡತಕ್ಕದ್ದು ಇಲ್ಲವೆ ಈ ಸಂಬಂಧದಲ್ಲಿ ಲಿಖಿತವಾಗಿರುವ ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯಿಂದ ಲೆಕ್ಕ ತಪಾಸಿಸತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿರುವ ಲೆಕ್ಕ ತಪಾಸಣೆಯು ಅತೀತಕಾಲ ಬಾಕಿಯಾಗಿರುವ ಋಣಗಳು, ಯಾವುದಾದರೂ ಇದ್ದರೆ, ಅವುಗಳ ಪರೀಕ್ಷಣ, ನಗದು ಶಿಲ್ಕು ಹಾಗೂ ಭದ್ರತಾ ಠೇವು-ಪತ್ರಗಳು ಸರಿಯಾಗಿದೆಯೋ ಇಲ್ಲವೊ ಎಂಬುದನ್ನು ನೋಡುವುದು ಸೊತ್ತು ಹಾಗೂ ಸಾಲಗಳ ಮೌಲ್ಯ ಮಾಪನ, ಸಂಘದ ಕಾರ್ಯ ಹಾಗೂ ಇತರ ಗೊತ್ತುಮಾಡಿದ ವಿವರದ ಪರೀಕ್ಷಣ ಇವೆಲ್ಲ ವನ್ನು ಒಳಗೊಳ್ಳತಕ್ಕದ್ದು.

(೩) ರಜಿಸ್ಟ್ರಾರನಿಗೆ ಇಲ್ಲವೆ ಅಧಿಕರಿಸಲ್ಪಟ್ಟ ವ್ಯಕ್ತಿಗೆ ಸಂಘದ ಒಡೆತನ ದಲ್ಲಿದ್ದ ಇಲ್ಲವೆ ಸಂಘದ ಅಧೀನದಲ್ಲಿದ್ದ ಎಲ್ಲ ಪುಸ್ತಕಗಳು, ಲೆಕ್ಕಪತ್ರಗಳು, ದಾಖಲೆ ಪತ್ರಗಳು, ಕಾಗದಗಳು, ಭದ್ರತಾ ಠೇವುಪತ್ರಗಳು, ನಗದು ಹಣ ಹಾಗೂ ಇತರ ಆಸ್ತಿಗಳು ಎಲ್ಲ ಸಮಯದಲ್ಲಿಯೂ ದೊರಕತಕ್ಕದ್ದು, ಮತ್ತು ಇಂತಹ ಪುಸ್ತಕಗಳು, ಲೆಕ್ಕಪತ್ರಗಳು, ದಾಖಲೆ ಪತ್ರಗಳು, ಕಾಗದಗಳು, ಭದ್ರತಾಠೇವು ಪತ್ರಗಳು, ನಗದು ಹಣ ಹಾಗೂ ಇತರ ಆಸ್ತಿಗಳು ಯಾರ ಸ್ವಾಧೀನದಲ್ಲಿ ಇರುವುವೊ ಇಲ್ಲವೊ ಅವುಗಳನ್ನು ಭದ್ರವಾಗಿಡಲು ಯಾರು ಹೊಣೆಗಾರರಾಗಿರುವರೋ ಆ ವ್ಯಕ್ತಿಯನ್ನು ರಜಿಸ್ಟ್ರಾರನು ಇಲ್ಲವೆ ಅಧಿಕರಿಸಲ್ಪಟ್ಟ ವ್ಯಕ್ತಿಯು ಯಾವುದೇ ಸಮಯದಲ್ಲಿ ಸಂಘದ ಮುಖ್ಯ ಕಚೇರಿ ಇರುವ ಇಲ್ಲವೆ ಅದರ ಯಾವುದೇ ಶಾಖಾ ಕಚೇರಿ ಇರುವ ಸ್ಥಳದಲ್ಲಿಯ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಅವುಗಳನ್ನು ಹಾಜರಪಡಿಸಲು ಕರೆಯಿಸಬಹುದು.

(೪) ಸಂಘದ ನೌಕರನೆಂದು ಇಲ್ಲವೆ ಅಧಿಕಾರಿಯೆಂದು ಆಗಿರುವ ಇಲ್ಲವೆ ಯಾವುದೇ ಕಾಲಕ್ಕೆ ಆಗಿದ್ದ ಪ್ರತಿಯೊಬ್ಬ ವ್ಯಕ್ತಿಯು ಮತ್ತು ಪ್ರತಿಯೊಬ್ಬ ಸದಸ್ಯನು ಇಲ್ಲವೆ ಹಿಂದಿನ ಸದಸ್ಯನು ಸಂಘದ ಕಾರ್ಯ ಹಾಗೂ ವ್ಯವಹಾರಗಳ ಬಗ್ಗೆ ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯು ಬೇಡಬಹುದಾದಂತಹ ಮಾಹಿತಿಯನ್ನು ಒದಗಿಸತಕ್ಕದ್ದು.

(೫) ಲೆಕ್ಕ ತಪಾಸಣೆಯ ಪರಿಣಾಮವು ಸಹಕಾರಿ ಸಂಘದ ಕಾರ್ಯದಲ್ಲಿ ಯಾವುದೇ ದೋಷಗಳನ್ನು ಎತ್ತಿ ತೋರಿದರೆ ರಜಿಸ್ಟ್ರಾರನು ಅಂತಹ ದೋಷಗಳನ್ನು ಆ ಸಂಘದ ಲಕ್ಷ್ಯಕ್ಕೆ ತರಬಹುದು ಮತ್ತು ಆ ಸಂಘವು ಮತ್ತೊಂದು ಸಂಘಕ್ಕೆ ಹೊಂದಿಕೊಂಡಿದ್ದರೆ, ಆ ಇನ್ನೊಂದು ಸಂಘದ ಲಕ್ಷ್ಯಕ್ಕೂ ಸಹ ತರಬಹುದು.

**ವಿವೇಚನೆ**

ಸಹಕಾರಿ ಸಂಘದ ಲೆಕ್ಕತಪಾಸಣೆಯನ್ನು ರಜಿಸ್ಟ್ರಾರನು ಮಾಡತಕ್ಕದ್ದು ಇಲ್ಲವೆ ರಜಿಸ್ಟ್ರಾರನು ಲಿಖಿತವಾಗಿ ಕೊಟ್ಟ ಸಾಮಾನ್ಯ ಇಲ್ಲವೆ ವಿಶಿಷ್ಟ ಹುಕುಮಿನಿಂದ ಅಧಿಕರಿಸಿದ ವ್ಯಕ್ತಿಯ ಮುಖಾಂತರ ಲೆಕ್ಕ ತಪಾಸಣೆಯನ್ನು ಮಾಡಿಸತಕ್ಕದ್ದು.

ಈ ಲೆಕ್ಕ ತಪಾಸಣೆಯು ಪ್ರತಿಯೊಂದು ಸಹಕಾರಿ ಸಂಘದ ಲೆಕ್ಕ ತಪಾಸಣೆಯು; ಅದು ವರುಷಕ್ಕೆ ಒಂದು ಸಲವಾದರೂ ನಡೆಯತಕ್ಕದ್ದು. ಸಂಘದ ಅಧಿಕೃತ ವರುಷದಲ್ಲಿ ಒಮ್ಮೆಯಾದರೂ ಲೆಕ್ಕ ತಪಾಸಣೆ ನಡೆಯಬೇಕು.

ಲೆಕ್ಕ ತಪಾಸಣೆ ಎಂದರೇನು? ಅದರಲ್ಲಿ ಏನೇನು ಬರುವುದು? ಎಂಬ ಬಗ್ಗೆ ಸ್ಪಷ್ಟಮಾಡಲಾಗಿದೆ. ಸಾಮಾನ್ಯವಾಗಿ ಆಯ-ವೆಚ್ಚವನ್ನು ಪರಿಶೀಲಿಸುವುದು ಲೆಕ್ಕ ತಪಾಸಣೆ ಎನ್ನಿಸುವುದು. ಅದನ್ನು ಮಾಡುವಾಗ ಲೆಕ್ಕದಲ್ಲಿ ಒಳ ಹೊಕ್ಕು ನೋಡಬೇಕಾಗುವುದು. ಅತೀತಕಾಲ ಬಾಕಿಯಾಗಿರುವ ಋಣಗಳು ಯಾವು, ಎಷ್ಟು, ಆ ಬಗ್ಗೆ ಏನು ಕ್ರಮ ಕೈಕೊಳ್ಳಲಾಗಿದೆ, ಎಂಬುದನ್ನು ನೋಡ ಬೇಕು. ನಗದು ಶಿಲ್ಕು ಹಾಗು ಭದ್ರತಾ ಠೇವು ಪತ್ರಗಳು ಎಷ್ಟು ಇವೆ—ಅದು ಲೆಕ್ಕಕ್ಕೆ ಸರಿ ಹೊಂದುವುದೋ ಇಲ್ಲವೋ? ಸೊತ್ತು ಸಾಲಗಳು ಎಷ್ಟು ಇವೆ, ಅವುಗಳ ಬೆಲೆ ಎಷ್ಟು? ಇವುಗಳನ್ನು ನೋಡುವುದಲ್ಲದೆ, ಸಂಘವು ಹೇಗೆ ಕಾರ್ಯ ಮಾಡುತ್ತಿದೆ? ಈ ಸಂಬಂಧವಾಗಿ ಇತರ ವಿವರಗಳನ್ನು ಕೂಡ ನೋಡುವುದು ಲೆಕ್ಕ ತಪಾಸಣೆಯಲ್ಲಿಯ ಕಾರ್ಯವಾಗುವುದು. ಅಂದರೆ ಲೆಕ್ಕ ತಪಾಸಣೆ ಮಾಡಿದ ಮೇಲೆ ಸಂಘದ ಸ್ಥಿತಿಗತಿ ಹೇಗೆ ಅದೆ ಎಂಬುದರ ಸ್ಪಷ್ಟ ಕಲ್ಪನೆ ಬರುವಂತೆ ಇರ ಬೇಕು. ಲಾಭದಾಯಕವಾಗಿದೆಯೋ, ಲುಕಸಾನು ಆಗುತ್ತಿದೆಯೋ, ಇದು ತಿಳಿಯ ಬೇಕಾಗುವುದು. ಈ ಎಲ್ಲ ಸ್ಥಿತಿಗತಿಯನ್ನು ತಿಳಿಯಲು ಲೆಕ್ಕತಪಾಸಣೆ ಮಾಡ ಬೇಕಾಗುವುದು. ಅದು ವರುಷಕ್ಕೆ ಒಮ್ಮೆ ಆಗಬೇಕಾದ ಕಾರ್ಯವಾಗುವುದರಿಂದ ಪರಿಸ್ಥಿತಿಯು ಕೈಮೀರಿ ಹೋಗುವುವುಕ್ಕಿಂತ ಮೊದಲೇ ಪರಿಸ್ಥಿತಿಯ ಜ್ಞಾನವಾಗು ವುದು. ಅದಕ್ಕೆ ಒಂದು ವರುಷದಲ್ಲಿ ಒಮ್ಮೆಯಾದರೂ ಲೆಕ್ಕ ತಪಾಸಣೆ ನಡೆಯ ಬೇಕು ಎಂದು ಹೇಳಲಾಗಿದೆ.

ಸಾರ್ವಜನಿಕ ಹಣದ ವಿನಿಯೋಗದಿಂದ ನಡೆವ ಸಂಸ್ಥೆಯಾಗಿರುವುದರಿಂದ ಹಣದ ಸದ್ವಿನಿಯೋಗವಾಗಿದೆಯೋ ಇಲ್ಲವೋ ಎಂಬುದನ್ನು ನೋಡಬೇಕಾಗುವುದು. ವಿನಿಯೋಗದಲ್ಲಿ ದೋಷಗಳು ಉಂಟಾಗಬಹುದು. ಬುದ್ಧಿ ಪೂರ್ವಕವಾಗಿ ತಪ್ಪು—ಮೋಸಮಾಡಿ ಲೆಕ್ಕದಲ್ಲಿ ತಪ್ಪು ಉಂಟಾಗಿದೆಯೋ ಇಲ್ಲವೆ ಕೈತಪ್ಪಿನಿಂದ ಉಂಟಾಗಿದೆಯೋ ಇದು ಮುಖ್ಯ. ಕೈತಪ್ಪಿನಿಂದ ಉಂಟಾದುದನ್ನು, ದೃಷ್ಟಿ ದೋಷದಿಂದ ಉಂಟಾದುದನ್ನು ಸರಿಪಡಿಸಲು ಸುಲಭವಾಗುವುದು. ಆದರೆ ಬುದ್ಧಿ ಪೂರ್ವಕ ಮೋಸಮಾಡಬೇಕೆಂಬ ದೃಷ್ಟಿಯಿಂದ ಮಾಡಿದ ತಪ್ಪುಗಳಿದ್ದರೆ ಅದರ ಪರಿಣಾಮ ಬೇರೆಯಾಗುವುದು. ಅಂತಹವೂ ಕೂಡ ಲಕ್ಷ್ಯಕ್ಕೆ ಬರಬೇಕೆಂದೂ ಅದರ ಬಗ್ಗೆ ಕ್ರಮತೆಗೆದುಕೊಂಡು ಸಂಘವು ಭದ್ರವಾಗಿ ಉಳಿಯುವಂತೆ ಮಾಡಲು ಅನುಕೂಲವಾಗಬೇಕೆಂದೂ ವಾರ್ಷಿಕ ಲೆಕ್ಕ ತಪಾಸಣೆ ಇರುವುದು.

ಸದಸ್ಯರನ್ನು ಹೊಣೆಗಾರಿಕೆಯಿಂದ ಸಂರಕ್ಷಿಸುದಕ್ಕೆ, ಸಾರ್ವಜನಿಕರಲ್ಲಿ ವಿಶ್ವಾಸ ಹುಟ್ಟಿಸುವುದಕ್ಕೆ, ಅವರ ಸಾಲ-ಭದ್ರತೆಗಳ ಸಲುವಾಗಿ ಹಾಗೂ ಸಂಘವು ಮುಣಗದೆ ಮುಂದರಿಯುವುದಕ್ಕಾಗಿ ಲೆಕ್ಕ ತಪಾಸಣೆಯು ಅಗತ್ಯ.

ವರುಷ ವರುಷವೂ ಲೆಕ್ಕ ತಪಾಸಣೆ ನಡೆದ ಮೇಲೆ ಅತೀತಕಾಲ ಬಾಕಿಯಾದ ಋಣವು ಹೇಗೆ ಉಳಿಯುವುದು? ಎಂಬ ಪ್ರಶ್ನೆ ಉಂಟಾಗುವುದು. ಆದರೆ ಲೆಕ್ಕ ತಪಾಸಣೆಯಲ್ಲಿ ಅದು ಕಂಡು ಬಂದರೂ ಅದರ ವಸೂಲಿಯ ಕಾರ್ಯ ಸಂಘದ್ದು. ವಸೂಲಿಯನ್ನು ಮಾಡದೆ ಸಾಲದ ಅವಧಿಯನ್ನು ಹೆಚ್ಚಿಸುವ ಸಂದರ್ಭಗಳೂ ಉಂಟಾಗಿರುವುವು. ಇದನ್ನು ಲಕ್ಷಿಸಬೇಕಾಗುವುದು. ವಸೂಲಾಗದೆ ಅವು ಯಾಕೆ ಉಳಿದಿವೆ. ವಸೂಲು ಆಗುವ ಸ್ಥಿತಿಯಲ್ಲಿ ಇವೇಯೋ ಇಲ್ಲವೊ; ಇದು ಮುಖ್ಯಮಾತ್ರ ಅಥಾವೆ ಪತ್ರಿಕೆಯಲ್ಲಿ ಕಂಡಂತೆ ನಗದು ಶಿಲ್ಕು ಇದೆಯೋ ಇಲ್ಲವೋ? ಭದ್ರುತಾ ಠೇವು ಪತ್ರಗಳು ಸರಿಯಾಗಿ ಇವೆಯೋ ಇಲ್ಲವೊ? ಇವನ್ನು ನೋಡುವುದರಿಂದ ಸಂಬಂಧಪಟ್ಟವರು ಅಪರಾತಫರಾ ಮಾಡಿದ ಬಗ್ಗೆ ತಿಳಿವುದು.

ಆಸ್ತಿ-ಹಾಗೂ ಋಣಗಳ ಮೌಲ್ಯ ಮಾಪನವು ಒಂದು ವಿಶಿಷ್ಟವಾದ ಮಹತ್ವದ ಸಂಗತಿ. ಆಸ್ತಿಯ ಬೆಲೆ ಕಾಲಕಾಲಕ್ಕೆ ಬದಲಾಗುವುದು. ಆಸ್ತಿಯು ಆಧಾರವಾಗಿರುವುದು. ಆಧಾರದ ಬೆಲೆ ಕಡಿಮೆಯಾದರೆ ಋಣವು ಹೆಚ್ಚು ಆದಂತೆ. ಋಣವು ಆಸ್ತಿಯಕಿಂತ ಹೆಚ್ಚು ಆದರೆ, ಸಂಘವು ನಡೆಯುವುದು ಕಠಿಣವಾಗುವುದು. ಅದಕ್ಕಾಗಿ ಆಸ್ತಿ-ಋಣಗಳ ಬೆಲೆಯನ್ನು ಲೆಕ್ಕ ತಪಾಸಣೆಯ ಕಾಲಕ್ಕೆ ನಿರ್ಧರಿಸಿ ಆ ಬಗ್ಗೆ ಕೈಕೊಳ್ಳಬೇಕಾದ ಕ್ರಮವನ್ನು ಲೆಕ್ಕ ತಪಾಸಣೆಯ ಕಾಲಕ್ಕೆ ಸೂಚಿಸಬೇಕಾಗುವುದು.

ಈ ಎಲ್ಲ ಸಂಗತಿಗಳನ್ನು ಕಂಡು ಹಿಡಿಯಲಿಕ್ಕೆ ಲೆಕ್ಕ ತಪಾಸು ಮಾಡುವವರಿಗೆ ಸಂಘದ ಎಲ್ಲ ಕಾಗದ ಪತ್ರಗಳು, ದಾಖಲೆ ಪತ್ರಗಳು, ಲೆಕ್ಕದ ಪುಸ್ತಕಗಳು, ಆಸ್ತಿಗಳ ವಿವರವು, ಋಣಗಳ ವಿವರವು ಬೇಕಾಗುತ್ತಗುತ್ತದೆ. ಆದ್ದರಿಂದ ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಎಲ್ಲ ಮಾಹಿತಿ ಒದಗಿಸುವ ಸಾಧನಗಳನ್ನು ನೋಡಿಕೊಳ್ಳಲು ಲೆಕ್ಕ ತಪಾಸಿಗರಿಗೆ ಅಧಿಕಾರವನ್ನು ಕೊಡಲಾಗಿದೆ. ಆ ಕಾಗದಪತ್ರ, ದಾಖಲೆ ಪತ್ರ ಮುಂತಾದುವು ಯಾರ ಹತ್ತರ ಇರುವುವೋ ಆ ಅಧಿಕಾರಿ ಇಲ್ಲವೆ ನೌಕರನು ಅವುಗಳನ್ನು ತಂದು ಹಾಜರ ಪಡಿಸುವ ಹಾಗೆ ಅವನನ್ನು ಕರೆಯಿಸಿಕೊಳ್ಳಲು ಲೆಕ್ಕ ತಪಾಸಿಗನಿಗೆ ಅಧಿಕಾರವಿದೆ. ಅವುಗಳನ್ನು ಸಾರ್ವಜನಿಕ ಸ್ಥಳದಲ್ಲಿ ಹಾಜರ ಪಡಿಸಿಕೊಳ್ಳತಕ್ಕದ್ದೆಂದು ನಿರ್ಬಂಧ ಹಾಕಲಾಗಿದೆ. ಸಂಘದ ಮುಖ್ಯ ಕಚೇರಿ ಇರುವ ಇಲ್ಲವೆ ಶಾಖಾ ಕಚೇರಿ ಇರುವ ಸ್ಥಳದಲ್ಲಿ ಬೇರೆ ಯಾವುದೇ ಸಾರ್ವಜನಿಕ

ಕಚೇರಿಯಲ್ಲಿ ಹಾಜರ ಪಡಿಸಿಕೊಳ್ಳಬಹುದು. ಖಾಸಗಿ ಸ್ಥಳದಲ್ಲಿ, ಬೇರೆ ಎಲ್ಲಿಯಾದರೂ ಹಾಜರ ಪಡಿಸಿಕೊಳ್ಳಲು ಬರುವುದಿಲ್ಲವೆಂಬ ಹಾಗೆ ಸೂಚನೆ ಇದೆ.

ಪುಸ್ತಕಗಳು, ಕಾಗದ ಪತ್ರಗಳು, ದಾಖಲೆ ಪತ್ರಗಳು ಹಾಜರ ಪಡಿಸಲ್ಪಟ್ಟರೂ ಒಮ್ಮೊಮ್ಮೆ ಅವುಗಳಿಂದ ಲೆಕ್ಕ ತಪಾಸಿಗನಿಗೆ ಬೇಕಾದ ಮಾಹಿತಿ ಸಿಕ್ಕುವುದಿಲ್ಲ. ಆಗ ಅವನು ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಅಧಿಕಾರಿ, ನೌಕರ, ಸದಸ್ಯ, ಹಿಂದಿನ ಸದಸ್ಯ ಇವರಿಂದ ಮಾಹಿತಿ ಪಡೆದುಕೊಳ್ಳುವ ಅಧಿಕಾರವೂ ಅವನಿಗೆ ಕೊಡಲ್ಪಟ್ಟಿದೆ. ಯಾವ ಮಾಹಿತಿ ಎಂಬುದನ್ನು ರಜಿಸ್ಟ್ರಾರ ಇಲ್ಲವೆ ಅವನಿಂದ ಅಧಿಕಾರ ಪಡೆದ ವ್ಯಕ್ತಿಯು ನಿರ್ಣಯಿಸುವನು. ಅವನು ಬೇಡಿದ ಎಲ್ಲ ಮಾಹಿತಿಯನ್ನು ಸಂಬಂಧಪಟ್ಟ ಅಧಿಕಾರಿ, ನೌಕರ, ಸದಸ್ಯ ಇಲ್ಲವೆ ಹಿಂದಿನ ಸದಸ್ಯ ಒದಗಿಸತಕ್ಕದ್ದು.

ಸಂಘದ ವ್ಯವಹಾರದ ಕಾಗದ ಪತ್ರ-ಲೆಕ್ಕ ಪತ್ರ-ದಾಖಲೆ ಪತ್ರ ಮುಂತಾದವನ್ನು ನೋಡಿ, ಬೇಕಾದ ಮಾಹಿತಿಯನ್ನು ಪಡೆದು ಲೆಕ್ಕ ತಪಾಸಣೆ ಮಾಡಿದ ನಂತರ ಕಂಡುಬಂದ ದೋಷಗಳನ್ನು ಆ ಸಂಘದ ಲಕ್ಷ್ಯಕ್ಕೆ ತರುವುದು ಲೆಕ್ಕತಪಾಸಿಗನ ಕರ್ತವ್ಯವಾಗಿದೆ. ಈ ಸಂಘವು ಬೇರೊಂದು ಸಂಘಕ್ಕೆ ಹೊಂದಿಕೊಂಡಿದ್ದ ಸಂಘವಾಗಿದ್ದರೆ ಆ ಸಂಘದ ಲಕ್ಷ್ಯಕ್ಕೆ ಕೂಡ ಲೆಕ್ಕ ತಪಾಸಣೆಯಲ್ಲಿ ಕಂಡು ಬಂದ ದೋಷಗಳನ್ನು ತರಬೇಕು. ಏಕೆಂದರೆ ಸಂಬಂಧಪಟ್ಟವರು ಆ ಬಗ್ಗೆ ಮುಂದಿನ ಕ್ರಮ ಕೈಕೊಳ್ಳಬೇಕೆಂಬುದೇ ಇದರ ಉದ್ದೇಶವಾಗಿದೆ. ಕಂಡ ದೋಷಗಳ ತಿದ್ದುಪಡಿ ಮಾಡಲು ಅವಕಾಶ ಕಲ್ಪಿಸಿ ಕೊಟ್ಟಂತೆ ಆಗುವುದು.

## ೬೪. ರಜಿಸ್ಟ್ರಾರನಿಂದ ವಿಚಾರಣೆ

(೧) ರಜಿಸ್ಟ್ರಾರನು ತನ್ನ ಸ್ವಂತ ನಿರ್ಣಯದ ಮೇಲೆ ತಾನೇ ಆಗಲೀ ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯಿಂದಾಗಲೀ ಲಿಖಿತ ಹುಕುಮಿನಿಂದ ಸಹಕಾರಿ ಸಂಘದ ರಚನೆ, ಕಾರ್ಯ ಹಾಗೂ ಆರ್ಥಿಕ ಸ್ಥಿತಿಯ ಬಗ್ಗೆ ವಿಚಾರಣೆ ನಡೆಸಬಹುದು.

(೨) ಉಪಕಲಮು (೧) ರಲ್ಲಿ ಹೇಳಲಾದ ಸ್ವರೂಪದ ವಿಚಾರಣೆಯು ಈ ಕೆಳಗೆ ಕಾಣಿಸಿದವರು ಮಾಡಿದ ಅರ್ಜಿಯ ಪರಿಣಾಮವಾಗಿ ನಡೆಸಲ್ಪಡತಕ್ಕದ್ದು.

(ಅ) ಸಂಬಂಧಪಟ್ಟ ಸಹಕಾರಿ ಸಂಘವು ಯಾವುದಕ್ಕೆ ಹೊಂದಿಕೊಂಡಿರುವುದೋ ಆ ಸಹಕಾರಿ ಸಂಘದ ಅರ್ಜಿಯ ಮೂಲಕ;

(ಬ) ಸಂಘದ ಕಮಿಟಿಯ ಬಹು ಸಂಖ್ಯಾಕ ಸದಸ್ಯರ ಅರ್ಜಿಯ ಮೂಲಕ; ಇಲ್ಲವೆ

(ಕ) ಸಂಘದ ಒಟ್ಟು ಸದಸ್ಯ ಸಂಖ್ಯೆಯಲ್ಲಿ ಒಂದು. ಮೂರಾಂಶದಕ್ಕಿಂ ಕಡಿಮೆಯಲ್ಲಿದಷ್ಟು ಸದಸ್ಯರ ಅರ್ಜಿಯ ಮೂಲಕ.

(೩) ರಜಿಸ್ಟ್ರಾರನಿಗೆ ಇಲ್ಲವೆ ಉಪಕಲಮು (೧) ರನ್ವಯವಾಗಿ ಅವನಿಂ ಅಧಿಕರಿಸಲ್ಪಟ್ಟ ವ್ಯಕ್ತಿಗೆ ಈ ಕಲಮಿನನ್ವಯವಾಗಿರುವ ವಿಚಾರಣೆಯ ಉದ್ದೇ ಗಳಿಗಾಗಿ ಈ ಕೆಳಗಿನ ಅಧಿಕಾರಗಳು ಇರತಕ್ಕದ್ದು, ಅವು ಯಾವುವೆಂಪರೆ—

(ಅ) ಸಂಘದ ಒಡೆತನದಲ್ಲಿದ್ದ ಇಲ್ಲವೆ ಅದರ ಸ್ವಾಧೀನದಲ್ಲಿದ್ದ ಪುಸ್ತಕಗಳು ಲೆಕ್ಕಪತ್ರಗಳು, ದಾಖಲೆ ಪತ್ರಗಳು, ಭದ್ರತಾ ಠೇವುಪತ್ರಗಳು, ನಗದು ಹಣ ಮತ್ತು ಇತರ ಆಸ್ತಿಗಳು ಇವುಗಳನ್ನು ನೋಡಲು ಸದಾಕಾಲವೂ ಅವಕಾಶ ಇ ತಕ್ಕದ್ದು ಮತ್ತು ಇಂತಹ ಪುಸ್ತಕಗಳು, ಲೆಕ್ಕಪತ್ರಗಳು, ದಾಖಲೆ ಪತ್ರಗಳು ಭದ್ರತಾ ಠೇವು ಪತ್ರಗಳು, ನಗದು ಹಣ ಇಲ್ಲವೆ ಇತರ ಆಸ್ತಿಗಳು ಇವುಗಳನ್ನು ಸ್ವಾಧೀನದಲ್ಲಿಕೊಂಡ ಇಲ್ಲವೆ ಇವುಗಳ ಭದ್ರತೆಗಾಗಿ ಹೊಣೆಗಾರನಾಗಿರುವ ಯಾವುದೇ ವ್ಯಕ್ತಿಯನ್ನು ಸಂಘದ ಮುಖ್ಯ ಕಾರ್ಯಾಲಯ ಇಲ್ಲವೆ ಅದರ ಶಾಖಾ ಕಚೇರಿ ಇರುವ ಸ್ಥಳದಲ್ಲಿಯ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ತಂದು ಹಾಜರ ಮಾಡಲು ಕರೆಯಿಸಬಹುದು.

(ಬ) ಸಂಘದ ಯಾವುದೇ ವ್ಯವಹಾರಗಳ ಬಗ್ಗೆ ಮಾಹಿತಿಯಿದೆಯೆಂದು ಅವನಿಗೆ ನಂಬಲು ಕಾರಣವಿದ್ದ ಯಾವುದೇ ವ್ಯಕ್ತಿಯನ್ನು ಸಂಘದ ಮುಖ್ಯ ಕಚೇರಿ ಇಲ್ಲವೆ ಅದರ ಯಾವುದೇ ಶಾಖಾ ಕಚೇರಿ ಇರುವ ಸ್ಥಳದಲ್ಲಿಯ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ತನ್ನ ಎದುರು ಹಾಜರಾಗಬೇಕೆಂದು ಅವನು ಕರೆಯಿಸಬಹುದು. ಮತ್ತು ಅಂತಹ ವ್ಯಕ್ತಿಯನ್ನು ಪ್ರತಿಜ್ಞೆಯ ಮೇಲೆ ಪರೀಕ್ಷಣ ಮಾಡಬಹುದು.

(ಕ) (i) ಸಂಘದ ಸಾಮಾನ್ಯ ಸಭೆಯನ್ನು ಕರೆಯುವುದರ ಸಲುವಾಗಿ ನೋಟೀಸು ಕೊಡಲು ಕಾಲಾವಧಿಯನ್ನು ನಿರ್ದಿಷ್ಟ ಪಡಿಸುವ ಯಾವುದೇ ನಿಯಮ ಇಲ್ಲವೆ ಪೋಟ ನಿಯಮದಲ್ಲಿ ಏನೇ ಹೇಳಲಾಗಿದ್ದರೂ ಸಂಘದ ಅಧಿಕಾರಿಗಳು ಸಾಮಾನ್ಯ ಸಭೆಯನ್ನು, ಸಂಘದ ಮುಖ್ಯ ಕಚೇರಿಯು ಇರುವ ಇಲ್ಲವೆ ಅದರ ಯಾವುದೇ ಶಾಖಾ ಕಚೇರಿ ಇರುವಲ್ಲಿ ಅಂತಹ ಸ್ಥಳದಲ್ಲಿ ಮತ್ತು ಅಂತಹ ವೇಳೆಗೆ ಮತ್ತು ಅವನಿಂದ ನಿರ್ದೇಶಿಸಲ್ಪಟ್ಟಂತಹ ವಿಷಯಗಳನ್ನು ನಿರ್ಧರಿಸುವುದಕ್ಕೆ ಕರೆಯಲು ಹಚ್ಚಬಹುದು ಮತ್ತು ಸಂಘದ ಅಧಿಕಾರಿಗಳು ಇಂತಹ ಸಭೆಯನ್ನು ಕರೆಯಲು ನಿರಾಕರಿಸಿದರೆ ಇಲ್ಲವೆ ತಪ್ಪಿದರೆ, ಆ ಸಭೆಯನ್ನು ತಾನೇ ಕರೆಯುವುದಕ್ಕೆ ಅವನಿಗೆ ಅಧಿಕಾರ ಇರತಕ್ಕದ್ದು;

(ii) ವಾಕ್ಯಾವಳಿ (i) ರನ್ವಯವಾಗಿ ಕರೆಯಲಾದ ಯಾವುದೇ ಸಭೆಯು ಸಂಘದ ಪೋಟನಿಯಮಗಳ ಅನ್ವಯವಾಗಿ ಕರೆಯಲಾದ ಸಾಮಾನ್ಯ ಸಭೆಯ ಅಧಿಕಾರಗಳನ್ನು ಪಡೆದಿರತಕ್ಕದ್ದು. ಮತ್ತು ಅದರ ಕಾರ್ಯ ಕಲಾಪಗಳು, ಅಂತಹ

ಸಭೆಗೆ ಕಾರ್ಯಾವಶ್ಯಕ ಸಂಖ್ಯೆಯು ಆವಶ್ಯಕವಾಗಿಲ್ಲವೆಂಬುದನ್ನು ಹೊರತುಪಡಿಸಿ, ಅಂತಹ ವೋಟನಿಯಮಗಳಿಂದ ಕ್ರಮ ಪಡಿಸಲ್ಪಡತಕ್ಕದ್ದು.

(೪) ಈ ಕಲಮಿನನ್ವಯವಾಗಿ ವಿಚಾರಣೆಯು ಮಾಡಲ್ಪಟ್ಟಾಗ ವಿಚಾರಣೆಯ ಪರಿಣಾಮವನ್ನು ಆ ಸಂಘಕ್ಕೆ ಮತ್ತು ಆ ಸಂಘವು ಹೊಂದಿಕೊಂಡಂತಹ ಸಂಘವು ಯಾವುದಾದರೂ ಇದ್ದರೆ, ಆ ಸಹಕಾರಿ ಸಂಘಕ್ಕೂ ರಜಿಸ್ಟ್ರಾರನು ತಿಳಿಸತಕ್ಕದ್ದು.

## ವಿವೇಚನೆ

ಸಹಕಾರಿ ಸಂಘದ ರಚನೆ ಕಾರ್ಯ ಮತ್ತು ಆರ್ಥಿಕ ಸ್ಥಿತಿ ಇವುಗಳ ಬಗ್ಗೆ ರಜಿಸ್ಟ್ರಾರನು ವಿಚಾರಣೆ ನಡೆಸಬಹುದು. ಈ ವಿಚಾರಣೆಯನ್ನು ರಜಿಸ್ಟ್ರಾರನು ತಾನಾಗಿಯೇ ಸ್ವಯಂ ಪ್ರೇರಣೆಯಿಂದ ನಡೆಸಬಹುದು. ಇಲ್ಲವೆ ಯಾರಾದರೂ ಅರ್ಜಿ ಮಾಡಿದರೆ ಅದರ ಮೂಲಕವಾಗಿ ವಿಚಾರಣೆ ನಡೆಸಬಹುದು. ವಿಚಾರಣೆಯನ್ನು ತಾನೇ ಮಾಡಬಹುದು. ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ಬೇರೆ ವ್ಯಕ್ತಿಯಿಂದ ಮಾಡಿಸಬಹುದು. ವಿಚಾರಣೆ ನಡೆಸಬೇಕೆಂದು ನಿರ್ಣಯಿಸಿದರೆ ರಜಿಸ್ಟ್ರಾರನು ಲೇಖೀ ಹುಕುಮು ಹೊರಡಿಸಿ ನಂತರ ವಿಚಾರಣೆ ನಡೆಸಬೇಕು.

ಯಾರಾದರೂ ಅರ್ಜಿ ಮಾಡಿದರೆ ವಿಚಾರಣೆ ನಡೆಸಬಹುದೆಂದು ಹೇಳಲಾದ ಮೇಲೆ ಯಾರು ಅರ್ಜಿ ಮಾಡಬೇಕು? ಯಾರು ಅರ್ಜಿ ಮಾಡಿದರೆ ವಿಚಾರಣೆ ನಡೆಸಬೇಕು ಎಂಬ ಪ್ರಶ್ನೆ ಬರುವುದು. ಅದರ ಬಗ್ಗೆ ವಿವರವನ್ನು ಒದಗಿಸಲಾಗಿದೆ.

ಯಾವ ಸಹಕಾರಿ ಸಂಘಕ್ಕೆ ಆ ಸಂಘವು ಹೊಂದಿಕೊಂಡಿರುವುದೋ ಆ ಸಹಕಾರಿ ಸಂಘವು ಅರ್ಜಿ ಮಾಡಬಹುದು; ಆ ಸಂಘದ ಕಮಿಟಿಯ ಬಹು ಸಂಖ್ಯಾಕ ಸದಸ್ಯರು ಅರ್ಜಿ ಮಾಡಬಹುದು; ಆ ಸಂಘದ ಒಟ್ಟು ಸದಸ್ಯರಲ್ಲಿಯ ೧/೩ದಕ್ಕಿಂತ ಕಡಿಮೆ ಇಲ್ಲದಷ್ಟು ಸದಸ್ಯರು ಅರ್ಜಿ ಮಾಡಬಹುದು. ಅಂದರೆ ಸಂಬಂಧ ಇದ್ದವರು ಅರ್ಜಿ ಮಾಡಬಹುದು; ಅಂತಹರು ಅರ್ಜಿ ಮಾಡಿದರೆ ಮಾತ್ರ ರಜಿಸ್ಟ್ರಾರನು ವಿಚಾರಣೆ ನಡೆಸಬಹುದು. ಕಮಿಟಿಯ ಬಹು ಸಂಖ್ಯಾಕ ಸದಸ್ಯರು ಇಲ್ಲವೆ ಸಂಘದ ಒಟ್ಟು ಸಂಖ್ಯೆಯ ೧/೩ದ ಕಿಂತ ಹೆಚ್ಚು ಎಂದು ಹೇಳಿದ್ದಕ್ಕೆ ಕಾರಣವಿದೆ. ವಿಚಾರಣೆ ನಡೆಸುವುದು ನಿಜವಾಗಿಯೂ ಸಂಘದ ಸದಸ್ಯರಿಗೆ ಬೇಕಾಗಿದೆ ಎಂದು ಅರ್ಥ. ವಿಶಿಷ್ಟ ಸಂಖ್ಯೆಯಲ್ಲಿ ಸದಸ್ಯರು ಅರ್ಜಿ ಮಾಡಬೇಕೆಂದರೆ ಅಂತಹ ಪ್ರಸಂಗ ಬಂದರೆ ಅಷ್ಟು ಸದಸ್ಯರು ಅರ್ಜಿ ಮಾಡುವರು.

ವಿಚಾರಣೆ ನಡೆಸಬೇಕೆಂದು ರಜಿಸ್ಟ್ರಾರನು ನಿರ್ಣಯಿಸಿದ ಬಗ್ಗೆ ಹುಕುಮು ಹೊರಡಿಸಿದ ನಂತರ ವಿಚಾರಣೆ ಪ್ರಾರಂಭ. ಈ ವಿಚಾರಣೆಯನ್ನು ತಾನು ಸ್ವತಃ

ನಡೆಸಬಹುದು ಇಲ್ಲವೆ ಬೇರೊಬ್ಬನನ್ನು ಅಧಿಕರಿಸಬಹುದು. ಯಾರೇ ವಿಚಾರಣೆ ನಡೆಸಿದರೂ ವಿಚಾರಣೆಗಾಗಿ ಅವರಿಗೆ ಅಧಿಕಾರ ಉಂಟಾಗಬೇಕಾಗುವುದು. ವಿಚಾರಣೆ ನಡೆಸುವವರಿಗೆ ಯಾವ ಯಾವ ಅಧಿಕಾರಗಳು ಉಂಟಾಗುವುವು ಎಂಬುದನ್ನು ಈ ಕಲಮು ಹೇಳುವುದು.

ಸಂಘದ ಸ್ಥಿತಿಗತಿಯನ್ನು ತಿಳಿಸುವ ಪುಸ್ತಕಗಳು, ಲೆಕ್ಕಪತ್ರಗಳು, ದಾಖಲೆ ಪತ್ರಗಳು, ಭದ್ರತಾ ಠೇವುಪತ್ರಗಳು, ನಗಮುಹಣ, ಇತರ ಆಸ್ತಿ ಇವುಗಳನ್ನು ಪರಿಶೀಲನೆ ಮಾಡಲು ಅಧಿಕಾರ ಇರತಕ್ಕದ್ದು. ಇವು ಯಾರ ಸ್ವಾಧೀನದಲ್ಲಿ ಇರುವುವೋ ಇಲ್ಲವೆ ಅವುಗಳ ಭದ್ರತೆಗಾಗಿ ಯಾರು ಹೊಣೆಗಾರರಿರುವುರೋ ಆ ವ್ಯಕ್ತಿಯು ವಿಚಾರಣೆ ನಡೆಸುವವನ ಎದುರು ಅವುಗಳನ್ನು ತಂದು ಹಾಜರಮಾಡಬೇಕು ಎಂದು ಕರೆಯಿಸುವ ಅಧಿಕಾರ ಇದೆ. ಸಂಘದ ವ್ಯವಹಾರಕ್ಕೆ ಸಂಬಂಧಪಟ್ಟ ಮಾಹಿತಿ ಇರುವ ವ್ಯಕ್ತಿಯನ್ನು ಸಾಕ್ಷಿಗಾಗಿ ಕರೆಯಿಸಿಕೊಳ್ಳುವ ಅಧಿಕಾರ ಇದೆ. ಸಾಕ್ಷಿಯನ್ನು ಕೇಳುವಾಗ ಸಾಕ್ಷಿದಾರನಿಗೆ ಪ್ರತಿಜ್ಞಾವಿಧಿಸುವ ಅಧಿಕಾರವೂ ಇದೆ.

ಕಾಗದ ಮತ್ತು ದಾಖಲೆಪತ್ರ ಮುಂತಾದವುಗಳನ್ನು ಹಾಜರ ಮಾಡೆಂದು ಹೇಳುವ ಅಧಿಕಾರವಿದೆ. ಆದರೆ ಅವುಗಳನ್ನು ಎಲ್ಲಿ ಹಾಜರಪಡಿಸಿಕೊಳ್ಳಬೇಕೆಂಬ ಬಗ್ಗೆ ನಿರ್ಬಂಧ ಹಾಕಲಾಗಿದೆ. ಸಂಘದ ಮುಖ್ಯಕಚೇರಿ ಇಲ್ಲವೆ ಶಾಖಾಕಚೇರಿ ಇರುವ ಸ್ಥಾನದಲ್ಲಿಯ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಹಾಜರಪಡಿಸಿಕೊಳ್ಳಬಹುದು. ಅದರಂತೆ ಸಾಕ್ಷಿನುಡಿಯಲು ಮಾಹಿತಿ ಕೊಡಲು ಆ ವ್ಯಕ್ತಿಯನ್ನು ಕೂಡ ಅಂತಹ ಮುಖ್ಯ ಕಚೇರಿ ಇಲ್ಲವೆ ಶಾಖಾ ಕಚೇರಿ ಇರುವ ಸ್ಥಳದಲ್ಲಿಯ ಸಾರ್ವಜನಿಕ ಕಚೇರಿಗೆ ಕರೆಯಿಸಿಕೊಳ್ಳಬಹುದು. ಅಂದರೆ ವಿಚಾರಣೆಯು ಖಾಸಗಿ ವಿಷಯವಲ್ಲ; ವಿಚಾರಣೆಯು ಯಾವ ಸಂಘಕ್ಕೆ ಸಂಬಂಧಪಟ್ಟಿರುವುದೋ ಅದರ ಪುಸ್ತಕ, ಲೆಕ್ಕಪತ್ರ ಮುಂತಾದವುಗಳನ್ನು ಮುಖ್ಯ ಕಚೇರಿ ಇರುವ ಊರಲ್ಲಿ ತರಿಸಬಹುದು. ಶಾಖಾ ಕಚೇರಿ ಇರುವ ಊರಲ್ಲಿ ತರಿಸಬಹುದು. ಅದೂ ಅವುಗಳನ್ನು ಆಯಾ ಕಚೇರಿಗಳಲ್ಲಿಯೇ ಪರಿಶೀಲನೆ ಮಾಡಬೇಕೆಂದಲ್ಲ. ಬೇರೆ ಯಾವುದೇ ಸಾರ್ವಜನಿಕ ಕಚೇರಿಯಲ್ಲಿ ಮಾಡಬಹುದಾಗಿದೆ. ವಿಚಾರಣೆ ನಡೆಸುವುದು ಸಾರ್ವಜನಿಕವಾಗಿಯಾದರೂ ಅದು ಸ್ವತಂತ್ರವಾಗಿರಬೇಕು. ಅಲ್ಲದೆ ಆ ಕಾಗದಪತ್ರ, ದಾಖಲೆಪತ್ರ, ಲೆಕ್ಕಪತ್ರ ಮುಂತಾದವು ಭದ್ರವಾಗಿರಲೂಬೇಕು. ಆದ್ದರಿಂದ ಈ ನಿರ್ಬಂಧವನ್ನು ಹಾಕಲಾಗಿದೆಯೆಂದು ತೋರುತ್ತದೆ.

ಯಾವುದಾದರೂ ವಿಷಯಗಳು ಸಾಮಾನ್ಯ ಸಭೆಯೆದುರು ಚರ್ಚಿಸಲ್ಪಡಬೇಕೆಂದು ರಜಿಸ್ಟ್ರಾರನಿಗೆ ಅನ್ನಿಸಿದರೆ, ಅವನು ಆ ಸಭೆಯನ್ನು ಕರೆಯಲು ಸಂಘದ ಅಧಿಕಾರಿಗೆ ಹೇಳಬಹುದು. ಹೀಗೆ ಕರೆಯಲು ಹೇಳಿದ ಸಭೆಗೆ

ಇಂತಿಷ್ಟೇ ಕಾಲಾವಧಿಯ ನೋಟೀಸು ಕೊಡಬೇಕೆಂಬ ಅಗತ್ಯವಿಲ್ಲ, ನಿಯಮದಲ್ಲಿ ಇಲ್ಲವೆ ಪೋಟ ನಿಯಮದಲ್ಲಿ ನೋಟೀಸಿನ ಕಾಲಾವಧಿಯಬಗ್ಗೆ ಏನೇ ಹೇಳಿದ್ದರೂ ಈ ಸಭೆಯು ಅವಸರದ ಸಭೆಯೆಂಬ ಹಾಗೆ ಕರೆಯಲು ಸಂಘದ ಅಧಿಕಾರಿಗಳಿಗೆ ಹೇಳಬಹುದು. ಸಭೆಯನ್ನು ಸಂಘದ ಮುಖ್ಯ ಕಚೇರಿ ಇಲ್ಲವೆ ಶಾಖಾ ಕಚೇರಿ ಇರುವ ಸ್ಥಳದಲ್ಲಿ ಗೊತ್ತುಮಾಡಿದ ಸ್ಥಳ-ವೇಳೆಗೆ ಕರೆಯಬಹುದು ಮತ್ತು ಅದು ರಜಿಸ್ಟ್ರಾರನು ನಿರ್ದೇಶಿಸಿದ ವಿಷಯಗಳನ್ನು ನಿರ್ಧರಿಸಬೇಕು. ರಜಿಸ್ಟ್ರಾರನು ಹೇಳಿದರೂ ಸಂಘದ ಅಧಿಕಾರಿಗಳು ಆ ಸಾಮಾನ್ಯ ಸಭೆಯನ್ನು ಕರೆಯಲು ನಿರಾಕರಿಸಿದರೆ ಇಲ್ಲವೆ ತಪ್ಪಿದರೆ, ರಜಿಸ್ಟ್ರಾರನು ತಾನೇ ಆ ಸಭೆಯನ್ನು ಕರೆಯಬಹುದು. ಹೀಗೆ ಕರೆದ ಸಾಮಾನ್ಯ ಸಭೆಗೆ ಅದು ಸಂಘದ ಪೋಟ ನಿಯಮಗಳ ಅನುಸಾರವಾಗಿ ಕರೆದ ಸಾಮಾನ್ಯ ಸಭೆಗೆ ಇರುವ ಎಲ್ಲ ಅಧಿಕಾರಗಳೂ ಇರುವುವು. ಅಂದರೆ ಅದು ಕ್ರಮಬದ್ಧವಾದ ಸಭೆಯೆಂದು ಅರ್ಥ. ಮತ್ತು ಇಂತಹ ಸಭೆಗೆ ಕೋರಂ ಆವಶ್ಯಕವಿಲ್ಲ. ಇದಕ್ಕೊಂದು ಕಾರಣವಿದೆ. ಕೋರಂ ಇಲ್ಲದೆ ಸಭೆ ನಡೆವ ಹಾಗಿಲ್ಲವೆಂಬುದಾದರೆ ಸಭೆಯು ಕರೆಯಲ್ಪಟ್ಟರೂ ಕಾರ್ಯವಾಗದ ಹಾಗೆ ಆಗುವುದು. ವಿಚಾರಣೆಯ ಅಂಗವಾಗಿ ಸೇರಿಸಲಾದ ಸಭೆಯಾಗಿರುವುದರಿಂದ ಸದಸ್ಯರು ಬುದ್ಧಿಪೂರ್ವಕ ಗೈರಹಾಜರಿ ಉಳಿವ ಸಂಭವವಿರುವುದು. ಅದನ್ನು ಲಕ್ಷ್ಯಕ್ಕೆ ತಂದು ಈ ಮಾತನ್ನು ಹೇಳಲಾಗಿದೆ.

ಈ ಕಲಮಿನ ಪ್ರಕಾರ ನಡೆಸಲಾದ ವಿಚಾರಣೆಯ ಪರಿಣಾಮವನ್ನು, ಸಂಬಂಧಪಟ್ಟ ಆ ಸಂಘಕ್ಕೆ ರಜಿಸ್ಟ್ರಾರನು ತಿಳಿಸತಕ್ಕದ್ದು. ಅಲ್ಲದೆ, ಆ ಸಂಘವು ಬೇರೊಂದು ಸಂಘಕ್ಕೆ ಹೊಂದಿಕೊಂಡ ಸಂಘವಾಗಿದ್ದರೆ; ಆ ಇನ್ನೊಂದು ಸಂಘಕ್ಕೂ ತಿಳಿಸತಕ್ಕದ್ದು.

ಈ ಕಲಮಿನಲ್ಲಿ ವಿಚಾರಣೆಯ ಸಲುವಾಗಿ ಪರಿಶೀಲನೆ ಮಾಡುವುದರಲ್ಲಿ ಪುಸ್ತಕಗಳು, ಎಂಬ ಶಬ್ದ ಬಂದಿದೆ. ಅದರ ಅರ್ಥ ಲಾಯಬ್ರರಿ ಪುಸ್ತಕವೆಂದು ಅಲ್ಲ. ಸಂಘದ ವ್ಯವಹಾರಗಳನ್ನು ನಮೂದ ಮಾಡಿದ ಕಾರ್ಯಕಲಾಪಗಳ ಪುಸ್ತಕ, ಲೆಕ್ಕಪತ್ರದ ಪುಸ್ತಕ, ಆಸ್ತಿಗಳ ವಿವರವುಳ್ಳ ಪುಸ್ತಕ ಮುಂತಾದುವು ಎಂದು ತಿಳಿಯಬೇಕು.

## ೬೫. ಸಹಕಾರಿ ಸಂಘದ ಪುಸ್ತಕಗಳ ಪರಿಶೀಲನೆ

(೧) ರಜಿಸ್ಟ್ರಾರನು ತನ್ನ ಸ್ವಂತ ಪ್ರೇರಣೆಯಿಂದ ಇಲ್ಲವೆ ಸಹಕಾರಿ ಸಂಘದ ಧನಕೋನು ಮಾಡಿದ ಅರ್ಜಿಯ ಮೂಲಕ ಸಂಘದ ಪುಸ್ತಕಗಳನ್ನು ತಾನೇ ಪರಿಶೀಲನೆ ಮಾಡಬಹುದು ಇಲ್ಲವೆ ಈ ಸಂಬಂಧದಲ್ಲಿ ಲಿಖಿತ ಹುಕುಮಿನಿಂದ ಅವನಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ಪರಿಶೀಲಿಸಬೇಕೆಂದು ಅವನು ನಿರ್ದೇಶಿಸಬಹುದು.

ಆದರೆ ಧನಕೋನ ಅರ್ಜಿಯ ಮೂಲಕ ಇತಂಹ ಯಾವುದೇ ಪರಿಶೀಲನೆಯು ಆ ಅರ್ಜದಾರನು—

(ಅ) ಆ ಸಾಲವು ಆಗ ಬಾಕಿಯಾಗಿದ್ದು ಅದನ್ನು ತಿರುಗಿಕೋ ಬೇಕೆಂಬ ಮಾಗಣಿ ಮಾಡಿದ್ದು ಯೋಗ್ಯ ಕಾಲಾವಧಿಯಲ್ಲಿ ಅದು ಕೊಡಲಿಲ್ಲವೆಂದ ರಜಿಸ್ಟ್ರಾರನಿಗೆ ಮನವರಿಕೆ ಮಾಡಿದ ಹೊರತು; ಮತ್ತು,

(ಬ) ರಜಿಸ್ಟ್ರಾರನು ಹೇಳಬಹುದಾದಷ್ಟು ಆ ಸೂಚಿತ ಪರಿಶೀಲನೆಯ ವೆಚ್ಚದ ಸಲುವಾಗಿ ಭದ್ರತೆಯೆಂದು ಅಂತಹ ಹಣವನ್ನು ರಜಿಸ್ಟ್ರಾರನ ಹತ್ತಿ ಠೇವು ಇಟ್ಟ ಹೊರತು

ನಡೆಸಲ್ಪಡತಕ್ಕದ್ದಲ್ಲ.

(೨) ಇಂತಹ ಯಾವುದೇ ಪರಿಶೀಲನೆಯ ಪರಿಣಾಮವನ್ನು ರಜಿಸ್ಟ್ರಾರನು—

(ಅ) ತನ್ನ ಸ್ವಂತ ಪ್ರೇರಣೆಯಿಂದ ಪರಿಶೀಲನೆ ಮಾಡಲ್ಪಟ್ಟಿದ್ದರೆ ಸಂಘಕ್ಕೆ; ಮತ್ತು,

(ಬ) ಧನಕೋನ ಅರ್ಜಿಯ ಮೂಲಕವಾಗಿ ಪರಿಶೀಲನೆ ಮಾಡಲ್ಪಟ್ಟಿದ್ದರೆ ಧನಕೋನಿಗೆ ಹಾಗೂ ಆ ಸಂಘಕ್ಕೆ,

ತಿಳಿಸತಕ್ಕದ್ದು.

**ವಿವೇಚನೆ**

ಸಂಘದ ವ್ಯವಹಾರಗಳ ಪುಸ್ತಕಗಳನ್ನು ಪರಿಶೀಲಿಸಲು ರಜಿಸ್ಟ್ರಾರನಿಗೆ ಈ ಕಲಮು ಅಧಿಕಾರ ಕೊಡುತ್ತದೆ. ಪರಿಶೀಲನೆಯನ್ನು ರಜಿಸ್ಟ್ರಾರನು ಸ್ವಂತ ಪ್ರೇರಣೆಯಿಂದ ಮಾಡಬಹುದು. ಅಂದರೆ ಅವನಿಗೆ ಸಂಘದ ವ್ಯವಹಾರಗಳ ಬಗ್ಗೆ ಯಾವುದೇ ಸಂಶಯ ಉಂಟಾಗಿದ್ದರೆ, ಅದರ ನಿವಾರಣೆಗಾಗಿ ತಾನೇ ತನ್ನ ಸ್ವಂತ ಪ್ರೇರಣೆಯಿಂದ ಪರಿಶೀಲನೆ ಮಾಡಬಹುದು. ಇಲ್ಲವೆ ಯಾವುದೇ ಧನಕೋನು ಅರ್ಜಿ ಮಾಡಿದರೆ, ಆ ಅರ್ಜಿಯ ಮೂಲಕವಾಗಿ ಪರಿಶೀಲನೆ ಮಾಡಬಹುದು. ಪರಿಶೀಲನೆಯನ್ನು ತಾನೇ ಸ್ವಂತ ಮಾಡಬಹುದು; ಇಲ್ಲವೆ ಈ ಸಂಬಂಧದಲ್ಲಿ ರಜಿಸ್ಟ್ರಾರನು ಲೇಖಿ ಹುಕುಮಿನ ಮೂಲಕ ಯಾವುದೇ ವ್ಯಕ್ತಿಯನ್ನು ಅಧಿಕರಿಸಿ ಅವನು ಪರಿಶೀಲನೆ ಮಾಡಬೇಕೆಂದು ನಿರ್ದೇಶಿಸಬಹುದು.

ತಾನೇ ಸ್ವಂತ ಪ್ರೇರಣೆಯಿಂದ ಪರಿಶೀಲನೆ ಮಾಡಬೇಕೆಂದಾಗ ವಿಶೇಷ ಕ್ರಮವಿಲ್ಲ. ಆದರೆ ಯಾವುದೇ ಧನಕೋನು ಅರ್ಜಿ ಮಾಡಿದ್ದರ ಮೂಲಕ ಪರಿಶೀಲನೆ ಮಾಡಬೇಕೆಂದು ಮನಸ್ಸು ಮಾಡಿದರೆ ಆಗ ಆ ಅರ್ಜದಾರನು ರಜಿಸ್ಟ್ರಾರನಿಗೆ ಕೆಲವೊಂದು ಸಂಗತಿಗಳನ್ನು ಮನವರಿಕೆ ಮಾಡಿಕೊಡಬೇಕು. ಧನಕೋನಿಗೆ ಅರ್ಜಿಯ ಕಾಲಕ್ಕೆ ಹಣವು ಬಾಕಿ ಬರುವುದಿರಬೇಕು. ಆ ಹಣವನ್ನು

ಕೊಡಲು ಧನಕೋನು ಮಾಗಣಿ ಮಾಡಿರಬೇಕು. ಅಪರೂ ಯೋಗ್ಯ ಕಾಲಾವಧಿ ಯಲ್ಲಿ ಆ ಹಣವನ್ನು ಸಂಘವು ಕೊಟ್ಟಿರದೆ ಇಬೇಕು. ಈ ಬಗ್ಗೆ ರಜಿಸ್ಟ್ರಾರನಿಗೆ ಮನವರಿಕೆಯಾಗಿರಬೇಕು. ಅಂದಾಗ ಪರಿಶೀಲನೆಗೆ ತೊಡಗಬಹುದು.

ಪ್ರತ್ಯಕ್ಷ ಪರಿಶೀಲನೆಗೆ ತೊಡಗುವ ಮುಂಚೆ ರಜಿಸ್ಟ್ರಾರನು ಇನ್ನೂ ಒಂದು ಕಾರ್ಯ ಆಗಿದೆಯೋ ಹೇಗೆ ನೋಡಬೇಕು. ಅರ್ಜಿ ಮಾಡಿದ ಧನಕೋನು ಪರಿಶೀಲನೆಯ ವೆಚ್ಚದ ಭದ್ರತೆಗಾಗಿ ರಜಿಸ್ಟ್ರಾರನು ಹೇಳಬಹುದಾದಷ್ಟು ಹಣ ವನ್ನು ರಜಿಸ್ಟ್ರಾರನ ಹತ್ತರ ಠೇವು ಇಟ್ಟಿರಬೇಕು. ಈ ಎಲ್ಲ ಸಂಗತಿಗಳು ಪರಿಶೀಲ ನೆಯಕಿಂತ ಮೊದಲು ಆಗಿದ್ದರೆ ಮಾತ್ರ ರಜಿಸ್ಟ್ರಾರನು ಧನಕೋನ ಅರ್ಜಿಯ ಮೂಲಕ ಪರಿಶೀಲನೆ ನಡೆಸಬಹುದು. ಇಲ್ಲವಾದರೆ ಪರಿಶೀಲನೆ ಮಾಡದೆ ಬಿಡ ಬಹುದು ಎಂಬ ನಿರ್ದಿಷ್ಟ ಸೂಚನೆ ಈ ಕಲಮಿನಲ್ಲಿ ಇದೆ.

ಇಷ್ಟೆಲ್ಲ ಆದ ಮೇಲೆ ರಜಿಸ್ಟ್ರಾರನು ಇಲ್ಲವೆ ಅವನಿಂದ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ವ್ಯಕ್ತಿಯು ಪರಿಶೀಲನೆ ನಡೆಸಿದ ನಂತರ ಆದ ಪರಿಣಾಮವನ್ನು ತಿಳಿಸುವುದು ರಜಿಸ್ಟ್ರಾರನ ಕರ್ತವ್ಯವಾಗಿದೆ. ಸ್ವಂತ ಪ್ರೇರಣೆಯಿಂದ ಪರಿಶೀಲನೆ ಮಾಡಲ್ಪಟ್ಟಿದ್ದರೆ ಅದರ ಪರಿಣಾಮವನ್ನು ಆ ಸಂಘಕ್ಕೆ ತಿಳಿಸತಕ್ಕದ್ದು. ಯಾವುದೇ ಧನಕೋನ ಅರ್ಜಿಯ ಮೂಲಕ ಪರಿಶೀಲನೆ ನಡೆಸಲ್ಪಟ್ಟಿದ್ದರೆ, ಪರಿಣಾಮವನ್ನು ಆ ಧನಕೋನಿಗೂ ಹಾಗೂ ಆ ಸಂಘಕ್ಕೂ ತಿಳಿಸತಕ್ಕದ್ದು. ಪರಿಶೀಲನೆಯ ಪರಿ ಣಾಮ ಏನಾಯಿತೆಂಬುದನ್ನು ಸಂಬಂಧಪಟ್ಟವರು ತಿಳಿಯುತಕ್ಕದ್ದೆಂದು ಈ ಕರ್ತವ್ಯವನ್ನು ರಜಿಸ್ಟ್ರಾರನು ಮಾಡಬೇಕೆಂದು ಹೇಳಲಾಗಿದೆ.

## ೬೬. ಲೆಕ್ಕದ ಪುಸ್ತಕಗಳನ್ನು ಹಾಗೂ ಆಸ್ತಿಯನ್ನು ಜಪ್ತಿ ಮಾಡಲು ಅಧಿಕಾರ

ಕಲಮು ೬೩ ರನ್ವಯವಾಗಿ ಲೆಕ್ಕ ತಪಾಸಣೆ ನಡೆಸುವ, ಕಲಮು ೬೪ ರನ್ವಯವಾಗಿ ವಿಚಾರಣೆ ನಡೆಸುವ ಇಲ್ಲವೆ ಕಲಮು ೬೫ ರನ್ವಯವಾಗಿ ಪರಿಶೀಲನೆ ನಡೆಸುವ ಯಾವುದೇ ಅಧಿಕಾರಿಗೆ ಇಲ್ಲವೆ ವ್ಯಕ್ತಿಗೆ ತಾನು ಲೆಕ್ಕ ತಪಾಸಣೆಯ ಕಾಲದಲ್ಲಿ, ವಿಚಾರಣೆಯ ಕಾಲದಲ್ಲಿ ಇಲ್ಲವೆ ಪರಿಶೀಲನೆಯ ಕಾಲದಲ್ಲಿ ಕಂಡುಹಿಡಿದ ಯಾವುದೇ ದೋಷದ ಇಲ್ಲವೆ ಅಕ್ರಮಗಳ ಸಾಬೀತು ಮಾಡುವುದರ ಸಂಬಂಧದಲ್ಲಿ ಅಂತಹ ಅಧಿಕಾರಿಗೆ ಇಲ್ಲವೆ ವ್ಯಕ್ತಿಗೆ ಅವಶ್ಯಕವೆಂದು ಗಣಿಸಬಹುದಾದ ಯಾವುದೇ ಪುರಾವೆಯನ್ನು ಇಲ್ಲದಾಗಿಸುವ, ಇಲ್ಲವೆ ರೂಪುಗೆಡಿಸುವ ಇಲ್ಲವೆ ಬದಲಿಸುವ ಇಲ್ಲವೆ ಕೈಚಳ ಮಾಡುವ ಉದ್ದೇಶದಿಂದ ಆ ಪುಸ್ತಕಗಳನ್ನು ಸಂಘದ ಹತ್ತಿರ ಇಟ್ಟರೆ, ವಿಕೃತಿಗೊಳಿಸಲ್ಪಡುವ ಸಂಭವವಿದೆಯೆಂದು ಇಲ್ಲವೆ ವಿಕೃತಿಗೊಳಿಸಲ್ಪ ಟ್ಟಿವೆಯೆಂದು ನಂಬಲು ಯೋಗ್ಯ ಕಾರಣಗಳು ಇದ್ದರೆ, ಇಂತಹ ಪುಸ್ತಕಗಳನ್ನು

ಇಲ್ಲವೆ ಆಸ್ತಿಯನ್ನು ಗೊತ್ತು ಮಾಡಬಹುದಾದಂತಹ ಕಾಲಾವಧಿಯ ವರೆಗೆ ಹಾಗೂ ಅಂತಹ ರೀತಿಯಲ್ಲಿ ಜಪ್ತಿ ಮಾಡುವ ಹಾಗೂ ಬಂಧಿಸಿಡುವ ಅಧಿಕಾರ ಅವನಿಗೆ ಇರತಕ್ಕದ್ದು.

## ವಿವೇಚನೆ

ಕಲಮು ೬೩ ಲೆಕ್ಕ ತಪಾಸಣೆಯ ಬಗ್ಗೆ ಇದೆ; ಕಲಮು ೬೪ ವಿಚಾರಣೆಯ ಬಗ್ಗೆ ಇದೆ; ಕಲಮು ೬೫ ಪರಿಶೀಲನೆಯ ಬಗ್ಗೆ ಇದೆ. ಈ ಕಾರ್ಯಗಳಿಗೆ ಸಂಘದ ಪುಸ್ತಕಗಳು, ಲೆಕ್ಕಪತ್ರಗಳು, ಕಾಗದಪತ್ರಗಳು, ದಾಖಲೆ ಪತ್ರಗಳು ಮುಂತಾದವುಗಳು ಬೇಕಾಗುವುವು. ಇವುಗಳನ್ನು ಆಯಾ ಕಾರ್ಯಕ್ಕಾಗಿ ಪಡೆದುಕೊಳ್ಳುವಂತೆ ಅವಕಾಶ ಸಂಬಂಧಪಟ್ಟ ಅಧಿಕಾರಿಗೆ ಇಲ್ಲವೆ ವ್ಯಕ್ತಿಗೆ ಇದೆ.

ಆದರೆ, ಲೆಕ್ಕ ತಪಾಸಣೆಯಲ್ಲಿ, ವಿಚಾರಣೆಯಲ್ಲಿ ಇಲ್ಲವೆ ಪರಿಶೀಲನೆಯಲ್ಲಿ ಕಂಡು ಬಂದ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ಮರೆಮಾಜುವ ದೃಷ್ಟಿಯಿಂದ ಆ ದೋಷಗಳನ್ನು ಇಲ್ಲವೆ ಅಕ್ರಮಗಳನ್ನು ಸಾಬೀತು ಮಾಡುವ ಪುರಾವೆಯನ್ನು ವಿಕೃತಗೊಳಿಸುವ ಸಂಭವ ಇರುತ್ತದೆ. ಈ ಪುಸ್ತಕಗಳು, ದಾಖಲೆ ಪತ್ರಗಳು ವಿಕೃತಗೊಳಿಸಲ್ಪಟ್ಟಿವೆ ಎಂದು ಆ ಅಧಿಕಾರಿಗೆ ಅನ್ನಿಸಿದರೆ ಅವನು ಅವುಗಳನ್ನು ಜಪ್ತಮಾಡಿ-ಬಂಧಿಸಿ ಇಡುವ ಅಧಿಕಾರವನ್ನು ಅವನಿಗೆ ಕೊಡಲಾಗಿದೆ. ಆ ಪುಸ್ತಕ ಮುಂತಾದವುಗಳನ್ನು ಸಂಘದ ಸ್ವಾಧೀನದಲ್ಲಿಯೆ ಬಿಟ್ಟರೆ, ಅವು ವಿಕೃತಗೊಳಿಸಲ್ಪಡುವ ಸಂಭವ ಇದೆಯೆಂದು ನಂಬಲು ಕಾರಣಗಳಿದ್ದರೆ ಆಗ ಕೂಡ ಅವುಗಳನ್ನು ಜಪ್ತಮಾಡಲು ಹಾಗೂ ಬಂಧಿಸಿ ಇಡಲು ಆ ಅಧಿಕಾರಿಗೆ ಇಲ್ಲವೆ ವ್ಯಕ್ತಿಗೆ ಅಧಿಕಾರ ಇದೆ. ಹೇಗೆ ಜಪ್ತಮಾಡಬೇಕು ಇಲ್ಲವೆ ಹೇಗೆ ಬಂಧಿಸಿಡಬೇಕು, ಎಷ್ಟು ಸಮಯದ ವರೆಗೆ ಬಂಧಿಸಿಡಬೇಕು ಎಂಬುವ ಬಗ್ಗೆ ನಿಯಮಗಳು ಹೇಳುವುವು.

ಪುರಾವೆ ವಿಕೃತಿಗೊಳಿಸುವುದೆಂದರೇನು? ಇದ್ದ ಪುರಾವೆಯನ್ನು ಇಲ್ಲದಂತೆ ಮಾಡುವುದು. ಅದನ್ನು ರೂಪುಗೆಡಿಸುವುದು, ಬದಲು ಮಾಡುವುದು, ಕೈಚಳಕ ಮಾಡುವುದು. ಈ ಎಲ್ಲ ಕಾರ್ಯಗಳು ಪುರಾವೆಯನ್ನು ಹಾಳುಮಾಡುವುದರ ಸಲುವಾಗಿ ಆಗಬಹುದೆಂಬ ನಂಬಿಕೆ ಉಂಟಾದರೆ ಮಾತ್ರ ಅವುಗಳನ್ನು ಜಪ್ತಿ ಮಾಡುವ ಹಾಗೂ ಬಂಧಿಸಿಡುವ ಅಧಿಕಾರ ಇದೆಯೆಂಬುದನ್ನು ತಿಳಿಯಬೇಕು.

ತಪ್ಪುಗಾರರ ತಪ್ಪು ಸಿಕ್ಕಬೇಕು; ಅಷ್ಟೇ ಅಲ್ಲ ಅವು ಸಾಬೀತಾಗಬೇಕು. ಅಂದಾಗ ಅದಕ್ಕೆ ದಂಡನೆ ಇದೆ. ಸಾಬೀತು ಮಾಡಲು ಪುರಾವೆ ಬೇಕು. ಅದನ್ನು ಇಲ್ಲದಾಗಿಸುವುದನ್ನು ಇಲ್ಲವೆ ವಿಕೃತಿಗೊಳಿಸುವುದನ್ನು ತಡೆಯಲು ಈ ಕಲಮು ಅಧಿಕಾರ ಕೊಡುತ್ತದೆ.

## ೬೭. ವಿಚಾರಣೆಯ ವೆಚ್ಚ

ಕಲಮು ೬೪ ರನ್ವಯವಾಗಿ ವಿಚಾರಣೆಯು ನಡೆಸಲಾಗಿರುವಾಗ ಇಲ್ಲವೆ ಕಲಮು ೬೫ ರನ್ವಯವಾಗಿ ಧನಕೋನ ಅರ್ಜಿಯ ಮೂಲಕ ಪರಿಶೀಲನೆಯು ನಡೆಸಲಾಗಿರುವಾಗ ಅದರ ವೆಚ್ಚವನ್ನು ಇಲ್ಲವೆ ಆ ವೆಚ್ಚದ ಅಂತಹ ಭಾಗವನ್ನು ಅವನಿಗೆ ಯೋಗ್ಯಕಂಡಂತೆ, ಯಾವ ಸಹಕಾರಿ ಸಂಘಕ್ಕೆ ಆ ಸಂಬಂಧಪಟ್ಟ ಸಂಘವು ಹೊಂದಿಕೊಂಡಿರುವುದೋ ಆ ಸಂಘ, ಈ ಸಂಘ; ಸದಸ್ಯರು ಇಲ್ಲವೆ ವಿಚಾರಣೆಯನ್ನು ಇಲ್ಲವೆ ಪರಿಶೀಲನೆಯನ್ನು ಬೇಡಿದ ಧನಕೋ ಮತ್ತು ಸಂಘದ ಅಧಿಕಾರಿಗಳು ಇಲ್ಲವೆ ಹಿಂದಿನ ಅಧಿಕಾರಿಗಳು ಇವರ ನಡುವೆ ರಜಿಸ್ಟ್ರಾರನು ಹಂಚಿ ಹಾಕಬಹುದು.

ಆದರೆ, (ಅ) ಈ ಕಲಮಿನನ್ವಯವಾಗಿ ವೆಚ್ಚವನ್ನು ಕೊಡಲು ಹೊಣೆಗಾರ ಮಾಡಲ್ಪಟ್ಟ ಸಂಘವು ಇಲ್ಲವೆ ಆ ವ್ಯಕ್ತಿಗೆ ತನ್ನ ವಾದವನ್ನು ಮಂಡಿಸಲು ಯೋಗ್ಯ ಅವಕಾಶವನ್ನು ಮಾಡಿಕೊಟ್ಟ ಹೊರತು ಈ ಕಲಮಿನನ್ವಯವಾಗಿ ವೆಚ್ಚವನ್ನು ಹಂಚಿಹಾಕುವ ಯಾವ ಹುಕುಮು ಮಾಡಲ್ಪಡಲಾಗದು;

(ಬ) ವೆಚ್ಚವನ್ನು ಯಾವ ಆಧಾರದ ಮೇಲೆ ಹಂಚಿ ಹಾಕಲಾಗಿದೆಯೆಂಬ ಬಗ್ಗೆ ರಜಿಸ್ಟ್ರಾರನು ಲೇಖಿ ಕಾರಣಗಳನ್ನು ಕೊಡತಕ್ಕದ್ದು.

### ವಿವೇಚನೆ

ವಿಚಾರಣೆಯನ್ನು ಕಲಮು ೬೪ ರನ್ವಯವಾಗಿ ನಡೆಸಲಾಗುವುದು; ಪರಿಶೀಲನೆಯನ್ನು ಕಲಮು ೬೫ ರನ್ವಯವಾಗಿ ನಡೆಸಲಾಗುವುದು, ಈ ವಿಚಾರಣೆ ಇಲ್ಲವೆ ಪರಿಶೀಲನೆ ನಡೆಸಲಾದರೆ ಅದಕ್ಕೆ ವೆಚ್ಚ ತಗಲುವುದು. ಈ ವೆಚ್ಚವನ್ನು ಯಾರು ವಹಿಸಬೇಕು? ಆ ಬಗ್ಗೆ ಈ ಕಲಮಿನಲ್ಲಿ ವಿಶದ ಮಾಡಲಾಗಿದೆ.

ವಿಚಾರಣೆಯಾಗಲೀ ಪರಿಶೀಲನೆಯಾಗಲೀ ರಜಿಸ್ಟ್ರಾರನು ಸ್ವಯಂಪ್ರೇರಣೆಯಿಂದ ಇಲ್ಲವೆ ಬೇರೆ ಸಂಬಂಧಪಟ್ಟ ಸಂಘ, ಸದಸ್ಯ, ಇಲ್ಲವೆ ಧನಕೊ ಇವರು ಮಾಡಿದ ಅರ್ಜಿಯ ಮೂಲಕ ನಡೆಸಲ್ಪಡುವುದೆಂಬುದನ್ನು ಆಯಾ ಕಲಮುಗಳಲ್ಲಿ ಹೇಳಲಾದುದನ್ನು ನೆನೆಯಬೇಕು. ಕಲಮು ೬೪ ರನ್ವಯವಾಗಿ ನಡೆಸಲಾದ ವಿಚಾರಣೆಯ ವೆಚ್ಚವು ಹಂಚಿ ಹಾಕಲ್ಪಡಬಹುದು. ಕಲಮು ೬೫ ರನ್ವಯವಾಗಿ ಧನಕೋ ಅರ್ಜಿ ಮಾಡಿದರೆ ಪರಿಶೀಲನೆ ಮಾಡಿದ ವೆಚ್ಚವನ್ನು ಹಂಚಿಹಾಕಬಹುದು. ಕಲಮು ೬೫ ರನ್ವಯವಾಗಿ ರಜಿಸ್ಟ್ರಾರನು ಸ್ವಂತ ಪ್ರೇರಣೆಯಿಂದ ಪರಿಶೀಲನೆ ಮಾಡಿದರೆ ಆ ವೆಚ್ಚವನ್ನು ಹಂಚಿ ಹಾಕಲು ಬರಲಾರದು ಎಂಬ ಸೂಚನೆ ಇಲ್ಲಿ ಅಡಕವಾದಂತಿದೆ.

ಯಾರ ನಡುವೆ ಹಂಚಿ ಹಾಕಬಹುದು ಆ ವೆಚ್ಚವನ್ನು? ಯಾವ ಸಂಘದ ವಿಚಾರಣೆ ಇಲ್ಲವೆ ಪರಿಶೀಲನೆ ನಡೆದಿರುವುದೋ ಆ ಸಂಘ, ಆ ಸಂಘವು ಯಾವ ಸಂಘಕ್ಕೆ ಹೊಂದಿಕೊಂಡಿರುವುದೋ ಆ ಸಂಸ್ಥೆ, ಸದಸ್ಯರು, ವಿಚಾರಣೆ ಇಲ್ಲವೆ ಪರಿಶೀಲನೆ ಬೇಡಿದ ಧನಕೋ ಮತ್ತು ಸಂಘದ ಇಂದಿನ ಇಲ್ಲವೆ ಹಿಂದಿನ ಅಧಿಕಾರಿಗಳು ಇವರ ನಡುವೆ ಹಂಚಿ ಹಾಕಬಹುದು. ಹಂಚಿ ಹಾಕುವ ಕಾರ್ಯವು ರಜಿಸ್ಟ್ರಾರನದು. ಯಾರ ಪಾಲಿಗೆ ಎಷ್ಟು ವೆಚ್ಚ ಎಂಬುದನ್ನು ಅವನೇ ನಿರ್ಣಯಿಸುವುದು

ಯಾವ ಸಂಘವು ಇಲ್ಲವೆ ಯಾವ ವ್ಯಕ್ತಿಯು ವೆಚ್ಚವನ್ನು ಕೊಡಲು ಪಾತ್ರವಾಗುವುದೋ ಅವನು ತನ್ನ ವಾದವನ್ನು ಮಂಡಿಸಲು ಅವನಿಗೆ ಅವಕಾಶ ಮಾಡಿಕೊಟ್ಟನಂತರ ರಜಿಸ್ಟ್ರಾರನು ವೆಚ್ಚವನ್ನು ಹಂಚಿ ಹಾಕಿದ ಹುಕುಮನ್ನು ಮಾಡತಕ್ಕದ್ದು. ರಜಿಸ್ಟ್ರಾರನು ಯಾವ ಆಧಾರದ ಮೇಲೆ ವೆಚ್ಚವನ್ನು ಯಾವ ಪ್ರಮಾಣದಿಂದ ಹಂಚಿ ಹಾಕಲ್ಪಟ್ಟಿದೆಯೆಂಬುದರ ಕಾರಣಗಳನ್ನು ತೋರಿಸಬೇಕಾಗುವುದು. ಅಂದರೆ ಕಾರಣಗಳನ್ನು ಲೇಖೀಯಾಗಿ ತೋರಿಸದೆ, ಮತ್ತು ವೆಚ್ಚವನ್ನು ಕೊಡಲು ಹೊಣೆಗಾರರಾದವರಿಗೆ ತಮ್ಮ ವಾದವನ್ನು ಮಂಡಿಸಲು ಯೋಗ್ಯ ಅವಕಾಶ ಮಾಡಿಕೊಡದೆ ವೆಚ್ಚವನ್ನು ಹಂಚಿ ಹಾಕಿದ ಹುಕುಮನ್ನು ರಜಿಸ್ಟ್ರಾರನು ಹೊರಡಿಸತಕ್ಕದ್ದಲ್ಲ.

ವೆಚ್ಚವನ್ನು ಹಂಚಿ ಹಾಕಬೇಕಾಗುವುದಾದರೂ ಏಕೆ? ಸಂಘದ ವ್ಯವಹಾರವನ್ನು ಸಾಗಿಸುವ ಅಧಿಕಾರಿಗಳು ಅನೇಕ. ಅವರು ಕಾಲ ಕಾಲಕ್ಕೆ ಬದಲು ಆಗಬಹುದು. ವಿಚಾರಣೆ ಇಲ್ಲಿವೆ ಪರಿಶೀಲನೆ ಮಾಡಿದಾಗ ಯಾರು ಯಾವ ವ್ಯವಹಾರಕ್ಕೆ ಹೊಣೆಗಾರರಾಗಿರುವರು ಎಂಬುದು ತಿಳಿದು ಬರುವುದು. ವ್ಯವಹಾರದ ಅವ್ಯವಸ್ಥೆಗೆ ಕಾರಣರಾದವರು ವೆಚ್ಚವನ್ನು ಕೊಡಲು ಹೊಣೆಗಾರರಾಗತಕ್ಕದ್ದು. ಹೀಗೆ ಹೊಣೆಗಾರರಾಗುವ ವ್ಯಕ್ತಿಗಳಲ್ಲಿ ಇಂದಿನ ಅಧಿಕಾರಿಗಳೂ ಇರಬಹುದು, ಹಿಂದಿನ ಅಧಿಕಾರಿಗಳೂ ಇರಬಹುದು. ಹಿಂದಿನ ಅಧಿಕಾರಿಗಳೂಕೂಡ ವೆಚ್ಚ ಕೊಡಲು ಹೊಣೆಗಾರರಾಗುವರು ಎಂಬುದು ತಿಳಿಯಬೇಕಾದ ಸಂಗತಿ. ತಾನು ಅಧಿಕಾರದಲ್ಲಿ ಇಲ್ಲವೆಂಬ ಕಾರಣದಿಂದ ಹೊಣೆಗಾರಿಕೆ ತಪ್ಪಿಸಿ ಕೊಳ್ಳಲು ಬರುವುದಿಲ್ಲ ವೆಂಬುದನ್ನು ಇಲ್ಲಿ ಹೇಳಿದಂತಿದೆ. ವಿಚಾರಣೆಯಲ್ಲಿ ಇಲ್ಲವೆ ಪರಿಶೀಲನೆಯಲ್ಲಿ ಸಂಘದ ವ್ಯವಹಾರದ ದುರವಸ್ಥೆಗೆ ಕಾರಣರಾದ ಎಲ್ಲ ವ್ಯಕ್ತಿಗಳೂ ವಿಚಾರಣೆಯು ಇಲ್ಲವೆ ಪರಿಶೀಲನೆಯ ವೆಚ್ಚವನ್ನು ಕೊಡಲು ಪಾತ್ರರಾಗುವರು. ಯಾರ ಹೊಣೆಗಾರಿಕೆ ಎಷ್ಟು? ಯಾರು ಯಾವ ಪ್ರಮಾಣದಲ್ಲಿ ವೆಚ್ಚವನ್ನು ಕೊಡಬೇಕು ಎಂಬುದನ್ನು ರಜಿಸ್ಟ್ರಾರನು ನಿರ್ಣಯಿಸುವನು. ಅದಕ್ಕೆ ಅವನು ಕಾರಣಗಳನ್ನು ತೋರಿಸುವನು. ಸಂಬಂಧಪಟ್ಟ ವ್ಯಕ್ತಿಯು ತನ್ನ ತಕರಾರು ಕೊಡಲು ಆಸ್ಪದ ಮಾಡಿಕೊಡುವನು.

## ೩೮. ರಜಿಸ್ಟ್ರಾರನಿಂದ ಹುಕುಮು

ಕಲಮು ೩೩ ರನ್ವಯವಾಗಿರುವ ಲೆಕ್ಕ ತಪಾಸಣೆಯಲ್ಲಿ ಇಲ್ಲವೆ ಕಲಮು ೩೪ ರನ್ವಯವಾಗಿರುವ ವಿಚಾರಣೆಯಲ್ಲಿ ಇಲ್ಲವೆ ಕಲಮು ೩೫ ರನ್ವಯವಾಗಿರುವ ಪರಿಶೀಲನೆಯಲ್ಲಿ ಕಂಡುಬಂದ ದೋಷಗಳನ್ನು ಸರಿಪಡಿಸಲು ಸಹಕಾರಿ ಸಂಘವನ್ನು ಇಲ್ಲವೆ ಅದರ ಅಧಿಕಾರಿಗಳನ್ನು ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಿದಂತೆ ಮತ್ತು ಅದರಲ್ಲಿ ಹೇಳಿದ ಕಾಲಾವಧಿಯಲ್ಲಿ ಕ್ರಮ ಕೈಕೊಳ್ಳುವಂತೆ ನಿರ್ದೇಶಿಸುವ ಹುಕುಮನ್ನು ರಜಿಸ್ಟ್ರಾರನು ಮಾಡಬಹುದು,

**ವಿವರಣೆ :** ಈ ಕಲಮಿನ ಉದ್ದೇಶಗಳಿಗಾಗಿ 'ದೋಷಗಳು' ಎಂದರೆ, ಈ ಕಾಯಿದೆಯ ಇಲ್ಲವೆ ಯಾವುದೇ ನಿಯಮದ ಇಲ್ಲವೆ ಪೋಟನಿಯಮದ ಇಲ್ಲವೆ ಆ ಕಾಲದಲ್ಲಿ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆ ಇಲ್ಲವೆ ಕಾಯಿದೇಶೀರ ಶರತುಗಳ ವಿರುದ್ಧವಾದ ಸಂಗತಿ ಎಂದು ಅರ್ಥ.

### ವಿವೇಚನೆ

ಲೆಕ್ಕ ತಪಾಸಣೆ ಮಾಡಿದಾಗ ಸಂಘದ ವ್ಯವಹಾರದಲ್ಲಿ ದೋಷಗಳು ಕಂಡು ಬಂದಿರುವುವು. ಸಂಘದ ವ್ಯವಹಾರದಲ್ಲಿ ಏನೇ ಅವ್ಯವಸ್ಥೆ ಆಗಿದೆಯೆಂದು ವಿಚಾರಣೆ ಇಲ್ಲವೆ ಪರಿಶೀಲನೆ ನಡೆದಾಗ ಆಗ ಕೂಡ ದೋಷಗಳು ಕಂಡು ಬಂದಿರುವುವು. ಹಾಗೆ ಲೆಕ್ಕ ತಪಾಸಣೆಯಲ್ಲಿ, ವಿಚಾರಣೆಯಲ್ಲಿ ಇಲ್ಲವೆ ಪರಿಶೀಲನೆಯಲ್ಲಿ ಕಂಡು ಬಂದ ದೋಷಗಳನ್ನು ಸರಿಪಡಿಸಲು ಈ ಕಲಮು ರಜಿಸ್ಟ್ರಾರನಿಗೆ ಅಧಿಕಾರ ಕೊಡುವುದು. ದೋಷಗಳು ಎಂದರೇನು ? ಹೀಗೆ ಮಾಡಬೇಕು ಇಲ್ಲವೆ ಹೀಗೆ ಮಾಡಬಾರದು ಎಂದು ಈ ಕಾಯಿದೆ, ಇದರ ನಿಯಮಗಳು, ಸಂಘದ ಪೋಟನಿಯಮಗಳು ಅಲ್ಲದೆ ಆ ಕಾಲದಲ್ಲಿ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆ ಇಲ್ಲವೆ ಶರತುಗಳು ವಿಧಿಸಿರುವಾಗ ಅದರ ವಿರುದ್ಧವಾಗಿ ನಡೆದ ಸಂಗತಿಯು, ಈ ಕಲಮಿನ ಅರ್ಥದಲ್ಲಿ ದೋಷವೆನ್ನಿಸುವುದು. ಅದನ್ನು ಸರಿಪಡಿಸಲು ಕ್ರಮ ಕೈಕೊಳ್ಳಬೇಕಾಗುವುದು. ಸಂಘವು ಇಲ್ಲವೆ ಅದರ ಅಧಿಕಾರಿಗಳು ಆ ಬಗ್ಗೆ ಕ್ರಮ ಕೈಕೊಳ್ಳಬೇಕೆಂದು ನಿರ್ದೇಶಿಸುವ ಹುಕುಮನ್ನು ರಜಿಸ್ಟ್ರಾರನು ಹೊರಡಿಸಬಹುದು. ಆ ಹುಕುಮಿನಲ್ಲಿ ಸರಿಪಡಿಸುವ ಕ್ರಮಗಳು ಯಾವು ಎಂಬುದನ್ನು ಮತ್ತು ಸರಿಪಡಿಸುವ ಕ್ರಮ ಯಾವ ಕಾಲಾವಧಿಯಲ್ಲಿ ಕೈಕೊಳ್ಳಲ್ಪಡಬೇಕೆಂಬುದನ್ನು ನಿರ್ದಿಷ್ಟಪಡಿಸಲ್ಪಟ್ಟಿರಬೇಕು. ಆ ಹುಕುಮು ನಿರ್ದೇಶಿಸದಂತೆ ಸಂಬಂಧಪಟ್ಟ ಸಂಘವು ಇಲ್ಲವೆ ಅದರ ಅಧಿಕಾರಿಗಳು ನಡೆದುಕೊಂಡು ಲೆಕ್ಕತಪಾಸಣೆಯಲ್ಲಿ ಇಲ್ಲವೆ ವಿಚಾರಣೆಯಲ್ಲಿ ಇಲ್ಲವೆ ಪರಿಶೀಲನೆಯಲ್ಲಿ ಕಂಡುಬಂದ ದೋಷಗಳನ್ನು ಸರಿಪಡಿಸತಕ್ಕದ್ದು.

## ೬೯. ಸರಚಾರ್ಜು

(೧) ಸಹಕಾರಿ ಸಂಘದ ಲೆಕ್ಕ ತಪಾಸಣೆಯ ಕಾಲದಲ್ಲಿ, ವಿಚಾರಣೆಯ ಕಾಲದಲ್ಲಿ, ಪರಿಶೀಲನೆಯ ಕಾಲದಲ್ಲಿ ಇಲ್ಲವೆ ದುಂಡು ಸುತ್ತಲ್ಪಡುವ ಕಾಲದಲ್ಲಿ ಸಂಘದ ಸಂಚಾಲನವನ್ನು ಇಲ್ಲವೆ ಸಂಘಟನೆಯನ್ನು ಒಪ್ಪಿಸಿ ಕೊಡಲ್ಪಟ್ಟ ಯಾವುದೇ ವ್ಯಕ್ತಿಯು ಇಲ್ಲವೆ ಸಂಘದ ಅಧಿಕಾರಿ ಇಲ್ಲವೆ ನೌಕರ ಆಗಿರುವ ಇಲ್ಲವೆ ಯಾವುದೇ ಕಾಲಕ್ಕೆ ಆಗಿದ್ದ ವ್ಯಕ್ತಿಯು ಈ ಕಾಯಿದೆಯ, ನಿಯಮಗಳ ಇಲ್ಲವೆ ಪೋಟ ನಿಯಮಗಳ ವಿರುದ್ಧವಾಗಿ ಯಾವುದೇ ಹಣವನ್ನು ಸಲ್ಲಿಸಿದ್ದಾನೆಂದು ಇಲ್ಲವೆ ವಿಶ್ವಾಸಘಾತದಿಂದ ಇಲ್ಲವೆ ಬುದ್ಧಿ ಪೂರ್ವಕ ದುರ್ಲಕ್ಷ್ಯದಿಂದ ಸಂಘದ ಸೊತ್ತುಗಳಲ್ಲಿ ಕೊರತೆಯನ್ನು ಉಂಟಾಗಿಸಿದ್ದಾನೆಂದು ಇಲ್ಲವೆ ಇಂತಹ ಸಂಘದ ಒಡೆತನದಲ್ಲಿದ್ದ ಯಾವುದೇ ಹಣ ಇಲ್ಲವೆ ಇತರ ಆಸ್ತಿಯನ್ನು ದುರುಪಯೋಗ ಮಾಡಿದ್ದಾನೆಂದು ಇಲ್ಲವೆ ಮೋಸದಿಂದ ತನ್ನ ಹತ್ತಿರ ಇಟ್ಟುಕೊಂಡಿದ್ದಾನೆಂದು ಕಂಡು ಬಂದರೆ, ರಜಿಸ್ಟ್ರಾರನು ತನ್ನ ಸ್ವಂತ ಪ್ರೇರಣೆಯಿಂದ ಇಲ್ಲವೆ ಕಮಿಟಿಯ ಇಲ್ಲವೆ ಲಿಕ್ವಿಡೇಟರ ಇಲ್ಲವೆ ಯಾವುದೇ ಧನಕೋನ ಅರ್ಜಿಯ ಮೂಲಕವಾಗಿ ತಾನೇ ಸ್ವತಃ ಅಂತಹ ವ್ಯಕ್ತಿಯ ವರ್ತನದ ಬಗ್ಗೆ ವಿಚಾರಣೆ ನಡೆಸಬಹುದು ಇಲ್ಲವೆ ಈ ಸಂಬಂಧದಲ್ಲಿ ಲೇಖೀ ಹುಕುಮಿನಿಂದ ಅವನಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ವಿಚಾರಣೆ ನಡೆಸಲು ನಿರ್ದೇಶಿಸಬಹುದು.

(೨) ಉಪಕಲಮು (೧) ರನ್ವಯವಾಗಿ ವಿಚಾರಣೆಯು ಮಾಡಲ್ಪಟ್ಟಾಗ ಸಂಬಂಧಪಟ್ಟ ವ್ಯಕ್ತಿಗಳಿಗೆ ತಮ್ಮ ವಾದವನ್ನು ಮಂಡಿಸಲು ಅವಕಾಶ ಮಾಡಿ ಕೊಟ್ಟು, ಆ ವ್ಯಕ್ತಿಯು ಬಡ್ಡಿ ಸಹಿತವಾಗಿ ಹಣವನ್ನು ತಿರುಗಿ ಕೊಡುವಂತೆ, ಇಲ್ಲವೆ ಹಣವನ್ನು ಭರಪಾಯಿ ಮಾಡುವಂತೆ ಇಲ್ಲವೆ ಆಸ್ತಿಯನ್ನು ಇಲ್ಲವೆ ಅದರ ಯಾವುದೇ ಭಾಗವನ್ನು ಮರಳಿ ಕೊಡುವಂತೆ ಇಲ್ಲವೆ ವಂತಿಗೆ ಹಾಗೂ ವೆಚ್ಚವನ್ನು ಕೊಡುವಂತೆ ಇಲ್ಲವೆ ರಜಿಸ್ಟ್ರಾರನು ನ್ಯಾಯ ಹಾಗೂ ಸಮಂಜಸವೆಂದು ಆಲೋಚಿಸಬಹುದಾದ ಅಂತಹ ವ್ಯಾಪ್ತಿಯಷ್ಟು ಲುಕಸಾನು ಭರಪಾಯಿಯನ್ನು ಕೊಡುವಂತೆ ಮಾಡುವ ಹುಕುಮನ್ನು ರಜಿಸ್ಟ್ರಾರನು ಮಾಡಬಹುದು.

### ವಿವೇಚನೆ

ಕಲಮು ೬೮, ಲೆಕ್ಕ ತಪಾಸಣೆ, ವಿಚಾರಣೆ ಹಾಗೂ ಪರಿಶೀಲನೆಯಲ್ಲಿ ಕಂಡು ಬಂದ ದೋಷಗಳ ಪರಿಹಾರವನ್ನು-ಸರಿಪಡಿಸುವಿಕೆಯನ್ನು ಮಾಡುವ ಬಗ್ಗೆ ಇದ್ದಿತು. ಈ ಕಲಮು ಮತ್ತೊಂದು ದೃಷ್ಟಿಯಿಂದ ಸರಿಪಡಿಸುವ ಕಾರ್ಯವನ್ನು ಮಾಡುವುದು.

ಸಂಘದ ವ್ಯವಹಾರವನ್ನು ಇಲ್ಲವೆ ಸಂಘಟನೆಯ ಕಾರ್ಯ ಮಾಡಲು ಒಪ್ಪಿಸಲ್ಪಟ್ಟ ವ್ಯಕ್ತಿಯು ಇಲ್ಲವೆ ಸಂಘದಲ್ಲಿ ಕಾರ್ಯ ಮಾಡುವ ಇಲ್ಲವೆ ಮಾಡಿದ

ನೌಕರ ಇಲ್ಲವೆ ಅಧಿಕಾರಿಯು ಸಂಘದ ಹಣ ಇಲ್ಲವೆ ಆಸ್ತಿಯ ಬಗ್ಗೆ ಅಪರಾತಫರಾ ಮಾಡಿದ್ದಾನೆಂದು ಕಂಡಬಂದರೆ, ಅವನ ವರ್ತನದ ಬಗ್ಗೆ ವಿಚಾರಣೆಯನ್ನು ನಡೆಸಲು ಮತ್ತು ಅವನಿಂದ ಲುಕಸಾನು ಭರಪಾಯಿ ತರೀಕ ಹಣವನ್ನು ತುಂಬಿಸಿಕೊಳ್ಳಲು ಈ ಕಲಮು ಆಧಿಕಾರ ಕೊಡುತ್ತದೆ.

ಆ ವ್ಯಕ್ತಿಯು ಏನೇನು ಮಾಡಿದ್ದರೆ ಈ ಕಲಮು ಹತ್ತುವುದು ? ಈ ಕಾಯಿದೆಯ ವಿರುದ್ಧವಾಗಿ ಇಲ್ಲವೆ ನಿಯಮಗಳ ವಿರುದ್ಧವಾಗಿ ಇಲ್ಲವೆ ಪೋಟ ನಿಯಮಗಳ ವಿರುದ್ಧವಾಗಿ ಅವನು ಯಾರಿಗಾದರೂ ಹಣವನ್ನು ಕೊಟ್ಟಿದ್ದರೆ, ಅವನ ವರ್ತನೆಯ ಬಗ್ಗೆ ವಿಚಾರಣೆ ನಡೆಸಲು ಈ ಕಲಮು ಹೇಳುವುದು. ಅದರಂತೆ ವಿಶ್ವಾಸಘಾತಮಾಡಿ ಇಲ್ಲವೆ ಬುದ್ಧಿಪೂರ್ವಕ ದುರ್ಲಕ್ಷ್ಯ ಮಾಡಿ ಸಂಘದ ಸೊತ್ತುಗಳಲ್ಲಿ ಕೊರತೆ ಉಂಟಾಗುವಂತೆ ಮಾಡಿರಬೇಕು. ಇಲ್ಲವೆ ಸಂಘದ ಹಣ-ಆಸ್ತಿಗಳನ್ನು ಅಪರಾತಪರಾ ಮಾಡಿರಬೇಕು ಇಲ್ಲವೆ ತನ್ನ ಹತ್ತರ ಮೋಸತನದಿಂದ ಇಟ್ಟುಕೊಂಡಿರಬೇಕು. ಅಂದಾಗ ಈ ಕಲಮು ಹತ್ತುವುದು. ರಜಿಸ್ಟ್ರಾರನು ಆ ವ್ಯಕ್ತಿಯ ವರ್ತನದ ಬಗ್ಗೆ ವಿಚಾರಣೆಯನ್ನು ಈ ಕಲಮಿನನ್ವಯವಾಗಿ ನಡೆಸುವನು. ತಾನೇ ನಡೆಸುವನು ಇಲ್ಲವೆ ಅವನು ಲೇಖೀ ಹುಕುಮಿನಿಂದ ಅಧಿಕಾರ ಕೊಟ್ಟು ಇನ್ನೊಬ್ಬನಿಂದ ವಿಚಾರಣೆ ಮಾಡಿಸುವನು.

ವಿಚಾರಣೆಯು ನಡೆಸಲ್ಪಟ್ಟ ನಂತರ ಯಾವ ವ್ಯಕ್ತಿಯು ಸಂಘದ ವ್ಯವಹಾರದಲ್ಲಿ ಹಣದ ಬಗ್ಗೆ, ಆಸ್ತಿಯ ಬಗ್ಗೆ ವ್ಯತ್ಯಯ ಮಾಡಿದ್ದಾನೆಂದು ಕಂಡು ಬಂದಿರುವುದೋ ಆ ವ್ಯಕ್ತಿಯು ತನಗೆ ಏನು ಹೇಳಬೇಕಾಗಿದೆ ಅದನ್ನು ಹೇಳಲು ಅವಕಾಶ ಮಾಡಿಕೊಡಬೇಕು. ನಂತರ ಆ ಬಗ್ಗೆ ಹುಕುಮು ಹೊರಡಿಸಬೇಕು. ಆ ಹುಕುಮಿನಿಂದ ಅವನು ಆ ಹಣವನ್ನು, ವೆಚ್ಚವನ್ನು, ಬಡ್ಡಿಸಹಿತವಾಗಿ, ಕೊಡುವಂತೆ, ಆಸ್ತಿಯನ್ನು ಮರುಳಿಕೊಡುವಂತೆ ಮಾಡಬಹುದು.

ರಜಿಸ್ಟ್ರಾರನು ಹುಕುಮು ಮಾಡುವಾಗ ಯಾವುದು ನ್ಯಾಯ ಹಾಗೂ ಸಮಂಜಸವೆಂದು ಅನಿಸುವುದೋ ಅದರಂತೆ ಹುಕುಮು ಮಾಡಬಹುದು ಎಂದು ಹೇಳಿದೆ. ಏಕೆಂದರೆ ಕಾಲಾಂತರದಲ್ಲಿ ನಡೆದ ಘಟನೆಗಳು ಅನೇಕ ವ್ಯಕ್ತಿಗಳ ಸಂಬಂಧ ಬಂದಿರುವುದು. ಆದ್ದರಿಂದ ಯಾವುದು ನ್ಯಾಯ ಹಾಗೂ ಸಮಂಜಸವೆನ್ನಿಸುವುದೋ ಹಾಗೆ ರಜಿಸ್ಟ್ರಾರನು ಹುಕುಮ ಮಾಡಿ ಸಂಬಂಧಪಟ್ಟ ವ್ಯಕ್ತಿಯಿಂದ ಹಣವನ್ನು-ಆಸ್ತಿಯನ್ನು ಮರಳಿಪಡೆಯಬಹುದು-ಲುಕಸಾನು ಭರಪಾಯಿ ಮಾಡಿಸಿಕೊಳ್ಳಬಹುದು. ವೆಚ್ಚವನ್ನು ಪಡೆಯಬಹುದು.

ಈ ಕಲಮಿನಲ್ಲಿ ಹೇಳಿದ ಕೃತಿಗಳು ಅಪರಾಧಗಳು ಎನಿಸುವುವು. ಆ ಬಗ್ಗೆ ಏನೂ ಹೇಳಿಲ್ಲ. ಆ ಬಗ್ಗೆ ಪ್ರತ್ಯೇಕ ಕ್ರಮ ಕೈಕೊಳ್ಳುವುದು ಬೇರೆ ಕಾಯಿದೆಯ

ವಿಷಯು. ಈ ಕಾಯಿದೆಯು ಪ್ರಕಾರ ಆದ ಲುಕ್ಸಾನ ತುಂಬಿಸಿಕೊಳ್ಳುವ ಪ್ರಥಮ ಕ್ರಮುವನ್ನು ಇಲ್ಲಿ ಹೇಳಲಾಗಿದೆ. ಅದು ರಜಿಸ್ಟ್ರಾರನ ಅಧಿಕಾರಕ್ಕೆ ಒಳಸೇರಿದ್ದು ಎಂಬುದನ್ನು ಈ ಕಲಮು ಸ್ಪಷ್ಟಪಡಿಸುವುದು.

## ಪ್ರಕರಣ ೯. ತಂಟೆಗಳ ನಿರ್ಣಯು

### ೭೩. ರಜಿಸ್ಟ್ರಾರನ ನಿರ್ಣಯುಕ್ಕೆ ಕಳಿಸಬಹುದಾದ ತಂಟೆಗಳು

(೧) ಆ ಕಾಲಕ್ಕೆ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸಹಕಾರಿ ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರದ ಸಂಬಂಧವಾಗಿ—

(ಅ) ಸದಸ್ಯರ, ಹಿಂದಿನ ಸದಸ್ಯರ ಮುತ್ತು ಸದಸ್ಯರ ಮೂಲಕ, ಹಿಂದಿನ ಸದಸ್ಯರ ಮೂಲಕ ಮುತ್ತು ಮೃತ ಸದಸ್ಯರ ಮೂಲಕ ಮಾಗಣಿ ಮಾಡುವ ವ್ಯಕ್ತಿಗಳ ನಡುವೆ, ಇಲ್ಲವೆ

(ಬ) ಸದಸ್ಯನ, ಹಿಂದಿನ ಸದಸ್ಯನ ಇಲ್ಲವೆ ಸದಸ್ಯನ, ಹಿಂದಿನ ಸದಸ್ಯನ ಇಲ್ಲವೆ ಮೃತ ಸದಸ್ಯನ ಮೂಲಕ ಮಾಗಣಿ ಮಾಡುವ ವ್ಯಕ್ತಿಯು ಮುತ್ತು ಸಂಘದ, ಅದರ ಕಮಿಟಿಯು ಇಲ್ಲವೆ ಸಂಘದ ಯಾವುದೇ ಅಧಿಕಾರಿ, ಏಜೆಂಟ ಇಲ್ಲವೆ ನೌಕರ ಇವರ ನಡುವೆ, ಇಲ್ಲವೆ

(ಕ) ಸಂಘ ಇಲ್ಲವೆ ಅದರ ಕಮಿಟಿ ಮುತ್ತು ಯಾವುದೇ ಹಿಂದಿನ ಕಮಿಟಿ, ಯಾವುದೇ ಅಧಿಕಾರಿ, ಏಜೆಂಟ ಇಲ್ಲವೆ ನೌಕರ ಇಲ್ಲವೆ ಯಾವುದೇ ಹಿಂದಿನ ಅಧಿಕಾರಿ, ಹಿಂದಿನ ಏಜೆಂಟ ಇಲ್ಲವೆ ಹಿಂದಿನ ನೌಕರ ಇಲ್ಲವೆ ಸಂಘದ ಮರಣ ಹೊಂದಿದ ಯಾವುದೇ ಅಧಿಕಾರಿಯು, ಮರಣ ಹೊಂದಿದ ಏಜೆಂಟನ ಇಲ್ಲವೆ ಮರಣ ಹೊಂದಿದ ನೌಕರನ ನಾಮುಕರಣದ ವ್ಯಕ್ತಿ, ವಾರಸದಾರ ಇಲ್ಲವೆ ಕಾಯಿದೇಶೀರ ಪ್ರತಿನಿಧಿ ಇವರ ನಡುವೆ, ಇಲ್ಲವೆ

(ಡ) ಸಂಘವು ಮುತ್ತು ಇತರ ಯಾವುದೇ ಸಂಘವು ಇವುಗಳ ನಡುವೆ,

ಯಾವುದೇ ತಂಟೆ ಉಂಟಾದರೆ, ಅಂತಹ ತಂಟೆಯು ನಿರ್ಣಯುಕ್ಕಾಗಿ ಅದನ್ನು ರಜಿಸ್ಟ್ರಾರನ ಕಡೆಗೆ ಕಳಿಸತಕ್ಕದ್ದು. ಮುತ್ತು ಇಂತಹ ತಂಟೆಯು ಸಂಬಂಧವಾಗಿ ಯಾವುದೇ ನ್ಯಾಯಾಲಯುವು ಯಾವುದೇ ದಾವೆ ಇಲ್ಲವೆ ಇತರ ಪ್ರಕರಣಗಳನ್ನು ಮನ್ನಿಸಲು ಅಧಿಕಾರ ಇರತಕ್ಕದಲ್ಲ.

(೨) ಉಪಕಲಮು (೧) ರ ಉದ್ದೇಶಗಳಿಗಾಗಿ, ಈ ಕೆಳಗೆ ಕಾಣಿಸಿದುವು ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರಕ್ಕೆ ಸಂಬಂಧಪಟ್ಟ ತಂಟೆಗಳೆಂದು ಗಣಿಸಲ್ಪಡಲಾಗುವುದು. ಅವು ಯಾವುವೆಂದರೆ,

(ಅ) ಸದಸ್ಯನಿಂದ ಇಲ್ಲವೆ ಮೃತ ಸದಸ್ಯನ ನಾಮಕರಣದ ವ್ಯಕ್ತಿ, ವಾರಸದಾರು ಇಲ್ಲವೆ ಕಾಯಿದೇಶೀರ ಪ್ರತಿನಿಧಿಯಿಂದ ಯಾವುದೇ ಋಣದ ಇಲ್ಲವೆ ಬಾಕಿಯಾಗಿರುವ ಮಾಗಣಿಯು, ಇಂತಹ ಋಣವು ಇಲ್ಲವೆ ಮಾಗಣಿಯು ಒಪ್ಪಿಕೊಳ್ಳಲ್ಪಟ್ಟಿರಲಿ ಬಿಡಲಿ, ಸಲುವಾಗಿ ಸಂಘವು ಮಾಡಿದ ಮಾಗಣಿ;

(ಬ) ಮುಖ್ಯ ಸಾಲಗಾರನ ತಪ್ಪಿನ ಪರಿಣಾಮವಾಗಿ, ಮುಖ್ಯ ಸಾಲಗಾರನಿಂದ ಸಲ್ಲಬೇಕಾಗಿದ್ದ ಯಾವುದೇ ಋಣ ಇಲ್ಲವೆ ಬಾಕಿಯಾಗಿದ್ದ ಮಾಗಣಿಯು, ಅದು ಒಪ್ಪಿಕೊಳ್ಳಲ್ಪಟ್ಟಿರಲಿ ಬಿಡಲಿ, ಸಂಬಂಧವಾಗಿ ಯಾವುದೇ ಹಣವನ್ನು ಜಾಮೀನುದಾರರಿಂದ ಸಂಘವು ವಸೂಲು ಮಾಡಿಕೊಂಡಿರುವಾಗ ಆ ಮುಖ್ಯ ಸಾಲಗಾರನ ವಿರುದ್ಧ ಜಾಮೀನುದಾರನ ಮಾಗಣಿಯು;

(ಕ) ಸಂಘದ ಅಧ್ಯಕ್ಷನ, ಉಪಾಧ್ಯಕ್ಷನ, ಚೇರಮನ್ನನ, ಉಪಚೇರಮನ್ನನ, ಸೆಕ್ರೆಟರಿಯ, ಕೋಶಾಧ್ಯಕ್ಷನ, ಇಲ್ಲವೆ ಕಮಿಟಿ ಸದಸ್ಯನ ಚುನಾವಣೆಯ ಸಂಬಂಧವಾಗಿ ಉಂಟಾದ ಯಾವುದೇ ತಂಟೆಯು.

(೩) ಈ ಕಲಮಿನ ಅನ್ವಯವಾಗಿ ರಜಿಸ್ಟ್ರಾರನ ಕಡೆಗೆ ಕಳಿಸಲಾದ ತಂಟೆಯು ಸಹಕಾರಿ ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರಕ್ಕೆ ಸಂಬಂಧವಾದ ತಂಟೆಯು ಆಹುದೋ ಅಲ್ಲವೋ ಎಂಬ ಪ್ರಶ್ನೆಯು ಉಂಟಾದರೆ, ಆ ಬಗ್ಗೆ ರಜಿಸ್ಟ್ರಾರನ ನಿರ್ಣಯ ಕೊನೆಯದಾಗಿರತಕ್ಕದ್ದು ಮತ್ತು ಆ ಬಗ್ಗೆ ಯಾವ ನ್ಯಾಯಲ್ಲಿಯದಲ್ಲಿ ಪ್ರಶ್ನೆ ಎತ್ತತಕ್ಕದ್ದಲ್ಲ.

**ವಿವೇಚನೆ**

ತಂಟೆಗಳೆಂದರೇನು ? ಯಾವ ತಂಟೆಗಳನ್ನು ನಿರ್ಣಯಕ್ಕಾಗಿ ರಜಿಸ್ಟ್ರಾರ ಕಡೆಗೆ ಕಳಿಸಬೇಕು ? ಎಂಬ ಬಗ್ಗೆ ಈ ಕಲಮು ಇದೆ. ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಸಹಕಾರಿ ಸಂಘದ ಸಂಬಂಧವಾಗಿರುವ ತಂಟೆಗಳನ್ನು ರಜಿಸ್ಟ್ರಾರನ ಕಡೆಗೆ ಕಳಿಸತಕ್ಕದ್ದು. ಆ ತಂಟೆಗಳು ಸಹಕಾರಿ ಸಂಘದ ರಚನೆ, ಸಂಚಾಲನ ಹಾಗೂ ವ್ಯವಹಾರಕ್ಕೆ ಸಂಬಂಧವಾದುವು ಇರಬೇಕು. ಈ ಮೂರು ಶಬ್ದಗಳಲ್ಲಿ ಸಹಕಾರಿ ಸಂಘದ ಎಲ್ಲ ವ್ಯವಹಾರಗಳೂ ಅಡಕವಾಗುವುವು. ಈ ವಿಷಯಗಳಿಗೆ ಸಂಬಂಧಿಸಿದ ತಂಟೆಗಳು ರಜಿಸ್ಟ್ರಾರನ ಕಡೆಗೆ ನಿರ್ಣಯಕ್ಕಾಗಿ ಕಳಿಸಲ್ಪಡಬೇಕು.

ತಂಟೆಗೆ ವಿಷಯವು ಇರುವಂತೆ ವ್ಯಕ್ತಿಗಳೂ ಇರುವರು. ಯಾರ ನಡುವಿನ ತಂಟೆಗಳನ್ನು ರಜಿಸ್ಟ್ರಾರನ ಕಡೆಗೆ ಕಳಿಸಬೇಕು ? ಸದಸ್ಯರು ಸದಸ್ಯರ ನಡುವೆ; ಹಿಂದಿನ ಸದಸ್ಯರ ಇಂದಿನ ಸದಸ್ಯರ ನಡುವೆ; ಇಂದಿನ ಸದಸ್ಯನ, ಹಿಂದಿನ ಸದಸ್ಯನ ಇಲ್ಲವೆ ಮರಣ ಹೊಂದಿದ ಸದಸ್ಯನ ಮೂಲಕವಾಗಿ ಮಾಗಣಿ ಮಾಡುವ ವ್ಯಕ್ತಿಗಳ

ಗಳ ನಡುವೆ, ಅಂದರೆ ಸಂಘದ ವ್ಯವಹಾರಕ್ಕೆ ಸಂಬಂಧಿಸಿದ ವಿಷಯದ ಬಗ್ಗೆ ಸದಸ್ಯರು ಇಲ್ಲವೆ ಅವನಿಂದ ಅಧಿಕಾರ ಪಡೆದ ವ್ಯಕ್ತಿ ಇವರ ನಡುವೆ ಉಂಟಾದ ತಂಟೆಯನ್ನು ರಜಿಸ್ಟ್ರಾರನ ಕಡೆಗೆ ಕಳಿಸತಕ್ಕದ್ದು.

ಅದರಂತೆ, ಇಂದಿನ, ಹಿಂದಿನ ಇಲ್ಲವೆ ಮರಣಹೊಂದಿದ ಸದಸ್ಯರು ಇಲ್ಲವೆ ಅವರ ಮೂಲಕ ಮಾಗಣಿ ಮಾಡುವ ವ್ಯಕ್ತಿಗಳು ಹಾಗೂ ಸಂಘ, ಕಮಿಟಿ, ಸಂಘದ ಅಧಿಕಾರಿ, ಏಜೆಂಟ, ಇಲ್ಲವೆ ನೌಕರ ಇವರ ನಡುವಿನ ತಂಟೆಯಿದ್ದರೂ ಅದನ್ನು ರಜಿಸ್ಟ್ರಾರರ ಕಡೆಗೆ ಕಳಿಸತಕ್ಕದ್ದು. ಒಂದು ಸಹಕಾರಿ ಸಂಘ ಮತ್ತು ಇನ್ನೊಂದು ಸಹಕಾರಿ ಸಂಘ ಇವರ ನಡುವಿನ ತಂಟೆಯಿದ್ದರೂ ಅದನ್ನು ರಜಿಸ್ಟ್ರಾರನ ಕಡೆಗೆ ಕಳಿಸತಕ್ಕದ್ದು. ವಿಷಯ ಹಾಗೂ ವ್ಯಕ್ತಿಗಳು ಸಹಕಾರಿ ಸಂಘಕ್ಕೆ ಸಂಬಂಧಪಟ್ಟವರಾಗಿದ್ದರೆ, ಅವರ ನಡುವಿನ ಆ ವಿಷಯದ ಬಗ್ಗೆ ತಂಟೆ ಯುಂಟಾದರೆ ಅದರ ನಿರ್ಣಯಕ್ಕಾಗಿ ಅದನ್ನು ರಜಿಸ್ಟ್ರಾರನ ಕಡೆಗೆ ಕಳಿಸತಕ್ಕದ್ದು. ಈ ತಂಟೆಯನ್ನು ದಾವೆಯ ಸ್ವರೂಪದಲ್ಲಿ ಇಲ್ಲವೆ ಇತರ ಪ್ರಕರಣದ ಸ್ವರೂಪದಲ್ಲಿ ಮನ್ನಿಸಲು ಯಾವುದೇ ನ್ಯಾಯಾಲಯಕ್ಕೆ ಅಧಿಕಾರ ಇರತಕ್ಕದ್ದಲ್ಲ ಎಂದೂ ಹೇಳಲಾಗಿದೆ. ಆದ್ದರಿಂದ ಸಹಕಾರಿ ಸಂಘದ ಸಂಬಂಧವಾಗಿರುವ ವಿಷಯ ಹಾಗೂ ವ್ಯಕ್ತಿಗಳ ನಡುವಿನ ತಂಟೆಗಳು ರಜಿಸ್ಟ್ರಾರನಿಂದ ನಿರ್ಣಯಿಸಲ್ಪಡಲು ಯೋಗ್ಯವಾದವುಗಳು ಎಂದು ಹೇಳಿದ ಹಾಗಾಯಿತು.

ತಂಟೆಯ ವಿಷಯದ ಬಗ್ಗೆ ಹೇಳುವಾಗ ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರಕ್ಕೆ **ಸಂಬಂಧವಾದ** ತಂಟೆಗಳು ಎಂದು ಹೇಳಿದ್ದರಿಂದ ಆ ಬಗ್ಗೆ ಈ ಕಲಮಿನಲ್ಲಿ ಮುಂದೆ ವಿವರಗಳನ್ನು ಕೊಡಲಾಗಿದೆ.

ಸದಸ್ಯನಿಂದ ಇಲ್ಲವೆ ಅವನಿಂದ ನಾಮಕರಣವಾದ ವ್ಯಕ್ತಿಯಿಂದ, ಮರಣ ಹೊಂದಿದ ಸದಸ್ಯನ ವಾರಸದಾರರಿಂದ ಇಲ್ಲವೆ ಕಾಯಿದೇಶೀರ ಪ್ರತಿನಿಧಿಯಿಂದ ಸಂಘಕ್ಕೆ ಬರಬೇಕಾಗಿದ್ದ ಯಾವುದೇ ಬಾಕಿ ಹಣ ಇಲ್ಲವೆ ಸಾಲ ಇವುಗಳು ಒಪ್ಪಿಕೊಳ್ಳಲ್ಪಟ್ಟ ಸಾಲಗಳು ಇಲ್ಲವೆ ಬಾಕಿ ಆಗಿರಲಿ ಬಿಡಲಿ, ಇವುಗಳ ಸಂಬಂಧವಾಗಿ ಸಂಘವು ಮಾಗಣಿ ಮಾಡಿದರೆ, ಅದು ಸಹಕಾರಿ ಸಂಘದ ವ್ಯವಹಾರಕ್ಕೆ **ಸಂಬಂಧವಾದ** ವಿಷಯವಾಗುವುದು. ಆ ತಂಟೆಯು ರಜಿಸ್ಟ್ರಾರನ ಕಡೆಗೆ ಕಳಿಸಲ್ಪಡಲು ಯೋಗ್ಯವಾದುದು ಆಗುವುದು.

ಸಂಘವು ಒಬ್ಬನಿಗೆ ಸಾಲ ಕೊಟ್ಟಿರುವುದು. ಆ ಸಾಲಕ್ಕಾಗಿ ಒಬ್ಬನು ಜಾಮೀನು ಆಗಿರುವನು. ಮುಖ್ಯ ಸಾಲಗಾರನು ಸಾಲದ ಹಣವನ್ನು ಸಲ್ಲಿಸಲು ತಪ್ಪಿರುವುದರಿಂದ ಸಂಘವು ಜಾಮೀನದಾರನ ಕಡೆಯಿಂದ ಸಾಲದ ಹಣವನ್ನು ವಸೂಲು ಮಾಡಿಕೊಂಡಿರುವುದು. ಆ ಜಾಮೀನದಾರನು ಆ ಮುಖ್ಯ ಸಾಲಗಾರನ ಕಡೆಯಿಂದ ತಾನು ಸಂಘಕ್ಕೆ ಸಲ್ಲಿಸಿದ ಹಣದ ಬಗ್ಗೆ ಮಾಗಣಿ ಮಾಡಿದರೆ ಆ

ತಂಟೆಯು ಸಂಘದ ವ್ಯವಹಾರಕ್ಕೆ **ಸಂಬಂಧಪಾದ** ತಂಟೆಯು ಆಗುವುದು. ಅದನ್ನು ರಜಿಸ್ಟ್ರಾರನ ಕಡೆಗೆ ಕಳಿಸಬಹುದು.

ಸಂಘದ ಚುನಾವಣೆಯು ನಡೆದು ಅದರಲ್ಲಿ ಪ್ರೆಸಿಡೆಂಟ, ವಾಯಿಸಪ್ರೆಸಿಡೆಂಟ, ಚೇರಮನ್, ಉಪಚೇರಮನ್, ಸೆಕ್ರೆಟರಿ, ಕೋಶಾಧ್ಯಕ್ಷ, ಸಂಘದ ಕಮೀಟಿಯ ಸದಸ್ಯ ಇವರ ಚುನಾವಣೆಯು ಸಂಬಂಧವಾಗಿ ತಂಟೆ ಉಂಟಾದರೆ ಆ ತಂಟೆಯು ಸಂಘದ ರಚನೆ, ಸಂಚಾಲದ **ಸಂಬಂಧವಾಗಿ** ಉಂಟಾದ ತಂಟೆಯಾಗುವುದು. ಅದನ್ನು ರಜಿಸ್ಟ್ರಾರನ ಕಡೆಗೆ ಕಳಿಸಬಹುದು.

ಹೀಗೆ ವಿವರವನ್ನು ಕೊಟ್ಟರೂ ತಂಟೆ ಉಂಟಾದ ಮೇಲೆ ತಂಟೆಯು ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರಕ್ಕೆ **ಸಂಬಂಧಪಾದ** ತಂಟೆಯು ಅಹುದೋ ಅಲ್ಲವೊ ಎಂದು ಮೂಲ ಪ್ರಶ್ನೆಯು ಉಂಟಾದರೆ, ಆ ಬಗ್ಗೆ ರಜಿಸ್ಟ್ರಾರನು ಕೊಟ್ಟ ನಿರ್ಣಯವು ಕೊನೆಯದು. ಈ ರಜಿಸ್ಟ್ರಾರನ ನಿರ್ಣಯವನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲಾಗದು.

ನ್ಯಾಯಾಲಯಕ್ಕೆ ಈ ತಂಟೆಗಳ ನಿರ್ಣಯದ ಬಗ್ಗೆ ದಾವೆ ಇಲ್ಲವೆ ಪ್ರಕರಣವನ್ನು ಮನ್ನಿಸುವ ಅಧಿಕಾರವೇ ಇಲ್ಲವೆಂದು ಮೊದಲೇ ಹೇಳಲಾಗಿದೆ. ಆದ್ದರಿಂದ ತಂಟೆಯ ಸ್ವರೂಪದ ಬಗ್ಗೆ ರಜಿಸ್ಟ್ರಾರನು ಕೊಟ್ಟ ನಿರ್ಣಯವನ್ನು ನ್ಯಾಯಾಲಯವು ಪ್ರಶ್ನಿಸಲು ಬರುವುದಿಲ್ಲ ಎಂದು ಹೇಳಿ ಈ ಸಂಬಂಧದಲ್ಲಿ ರಜಿಸ್ಟ್ರಾರನ ನಿರ್ಣಯವೇ ಕೊನೆಯದು, ಎಂದು ಹೇಳಲಾಗಿದೆ.

## ೭೧. ತಂಟೆಗಳ ನಿಕಾಲಿ

(೧) ಕಲಮು ೭೦ ರನ್ವಯವಾಗಿ ತಂಟೆಯು ರಜಿಸ್ಟ್ರಾರನ ಕಡೆಗೆ ಕಳಿಸಲ್ಪಟ್ಟ ಮೇಲೆ ರಜಿಸ್ಟ್ರಾರನು—

(ಅ) ತಂಟೆಯನ್ನು ತಾನೇ ನಿರ್ಣಯಿಸಬಹುದು, ಇಲ್ಲವೆ

(ಬ) ಈ ಸಂಬಂಧವಲ್ಲಿ ರಾಜ್ಯಸರಕಾರದಿಂದ ಅಧಿಕಾರ ವಹಿಸಿ ಕೊಡಲ್ಪಟ್ಟ ಯಾವುದೇ ವ್ಯಕ್ತಿಯ ಕಡೆಗೆ ತಂಟೆಯನ್ನು ನಿಕಾಲಿ ಮಾಡುವುದರ ಸಲುವಾಗಿ ಅವನು ಹಸ್ತಾಂತರಿಸಬಹುದು, ಇಲ್ಲವೆ

(ಕ) ರಜಿಸ್ಟ್ರಾರನಿಂದ ನೇಮಕ ಮಾಡಲ್ಪಟ್ಟ ಒಬ್ಬ ಮಧ್ಯಸ್ಥಗಾರನ ಕಡೆಗೆ ಆ ತಂಟೆಯನ್ನು ನಿಕಾಲೆಗಾಗಿ ಕಳಿಸಬಹುದು.

(೨) ಉಪಕಲಮು (೧) ರ ವಾಕ್ಯಾವಳಿ (ಬ) ದನ್ವಯವಾಗಿ ಹಸ್ತಾಂತರಿಸಲಾದ ಇಲ್ಲವೆ ವಾಕ್ಯಾವಳಿ (ಕ) ದನ್ವಯವಾಗಿ ಕಳಿಸಲಾದ ಯಾವುದೇ ತಂಟೆಯನ್ನು ಮರಳಿ ತನ್ನ ಕಡೆಗೆ ತೆಗೆದುಕೊಂಡು ಅದನ್ನು ತಾನೇ ನಿರ್ಣಯಿಸಬಹುದು.

(೩) ರಜಿಸ್ಟ್ರಾರನು ಇಲ್ಲವೆ ಈ ಕಲಮಿನನ್ವಯವಾಗಿ ನಿರ್ಣಯಕ್ಕಾಗಿ ತಂಟೆಯನ್ನು ಕಳಿಸಲ್ಪಟ್ಟ ಬೇರೆ ಯಾವುದೇ ವ್ಯಕ್ತಿಯು, ತಂಟೆಯು ಇನ್ನೂ

ನಿರ್ಣಯವಾಗುವುದಕ್ಕಿಂತ ಮೊದಲು ಅದರ ಚೌಕಶಿ ನಡೆದಾಗ ನ್ಯಾಯದ ಹಿತದ ದೃಷ್ಟಿಯಿಂದ ಅವನಿಗೆ ಆವಶ್ಯಕವೆನ್ನಿಸಬಹುದಾದಂತಹ ಮಧ್ಯಂತರ ಹುಕುಮು ಗಳನ್ನು ಮಾಡಬಹುದು;

(ಳ) ಕಲಮು ೭೦ ರಲ್ಲಿ ಏನೇ ಹೇಳಲಾಗಿದ್ದರೂ, ಆ ಕಲಮಿನ ಉಪ ಕಲಮು (೧) ರ ವಾಕ್ಯಾವಳಿ (ಅ) ಇಲ್ಲವೆ (ಬ) ದನ್ವಯವಾಗಿ ಯಾವುದೇ ತಂಟೆಯು ರಜಿಸ್ಟ್ರಾರನ ನಿರ್ಣಯಕ್ಕಾಗಿ ಅವನ ಕಡೆಗೆ ಕಳಿಸಲ್ಪಟ್ಟಾಗ, ಸಂಬಂಧ ಪಟ್ಟ ಸಂಘದ ಅರ್ಜಿಯ ಮೂಲಕ ರಜಿಸ್ಟ್ರಾರನಿಗೆ, ಸಂಘದ ಹಿತಸಂಬಂಧದ ಸಲುವಾಗಿ ತಂಟೆಯ ಪರಿಣಾಮಕಾರಿಯಾದ ನಿರ್ಣಯದ ಸಲುವಾಗಿ, ಅವನೆದರು ತಂಟೆಯಿರುವಾಗ ಪಕ್ಷಕಾರರೆಂದು ಯಾರನ್ನು ಮಾಡಲು ಬರುವುದಿಲ್ಲವೊ ಅವರನ್ನು ಪಕ್ಷಕಾರರನ್ನಾಗಿ ಮಾಡುವುದು ಆವಶ್ಯಕವೆಂದು ಮನವರಿಕೆಯಾದರೆ, ಆ ಸಂಘವು ಅಧಿಕಾರವಿರುವ ದಿವಾಣಿ ನ್ಯಾಯಾಲಯದಲ್ಲಿ ದಾವೆಯನ್ನು ತರುವುದಕ್ಕೆ ರಜಿಸ್ಟ್ರಾರನು ಪರವಾನಗಿ ಕೊಡಬಹುದು ಮತ್ತು ಇಂತಹ ದಾವೆಯನ್ನು ಮನ್ನಿಸಲು ದಿವಾಣಿ ನ್ಯಾಯಾಲಯವು ಸಮರ್ಥವಾಗಿರತಕ್ಕದ್ದು.

**ವಿವೇಚನೆ**

ಕಲಮು ೭೦ ತಂಟೆಗಳನ್ನು ನಿರ್ಣಯಕ್ಕಾಗಿ ರಜಿಸ್ಟ್ರಾರನ ಕಡೆಗೆ ಕಳಿಸ ತಕ್ಕದ್ದೆಂದು ಹೇಳಿತಲ್ಲದೆ ನ್ಯಾಯಾಲಯಕ್ಕೆ ಆ ತಂಟೆಗಳ ಬಗ್ಗೆ ಅಧಿಕಾರವಿಲ್ಲ ವೆಂದು ಸಾರಿ ಹೇಳಿತು. ರಜಿಸ್ಟ್ರಾರನು ಈ ತಂಟೆಗಳನ್ನು ಹೇಗೆ ನಿರ್ಣಯ ಮಾಡ ಬೇಕೆಂದು ಈ ೭೧ ನೆಯ ಕಲಮು ಹೇಳುವುದು.

ಅವನ ಕಡೆಗೆ ಕಳಿಸಲಾದ ತಂಟೆಯನ್ನು ಅವನು ಸ್ವತಃ ನಿರ್ಣಯಿಸ ಬಹುದು. ಎಲ್ಲ ತಂಟೆಗಳನ್ನು ನಿರ್ಣಯಿಸುವುದು ಒಬ್ಬನಿಗೆ ಸುಲಭಸಾಧ್ಯ ವಲ್ಲವಾದ್ದರಿಂದ ರಾಜ್ಯ ಸರಕಾರವು ಈ ತಂಟೆಗಳ ನಿರ್ಣಯದ ಅಧಿಕಾರವನ್ನು ಬೇರೆ ವ್ಯಕ್ತಿಗೆ ಕೊಡಬಹುದು. ಹಾಗೆ ಅಧಿಕಾರ ಪಡೆದ ವ್ಯಕ್ತಿಯ ಕಡೆಗೆ ರಜಿಸ್ಟ್ರಾರನು ತಂಟೆಗಳನ್ನು ನಿಕಾಲಿ ಮಾಡುವುದರ ಸಲುವಾಗಿ ಹಸ್ತಾಂತರ ಮಾಡಬಹುದು. ಇವೆರಡೂ ಮಾರ್ಗದ ಜತೆಗೆ ಇನ್ನೊಂದು ಮಾರ್ಗವಿದೆ. ರಜಿಸ್ಟ್ರಾರನು ಮಧ್ಯಸ್ಥಗಾರನನ್ನು ನೇಮಕಮಾಡಿ ಆ ವ್ಯಕ್ತಿಯ ಕಡೆಗೆ ಆ ತಂಟೆ ಯನ್ನು ಮಧ್ಯಸ್ಥಿಕೆಗಾಗಿ ಕಳಿಸಬಹುದು. ಈ ಮೂರು ದಾರಿಗಳನ್ನು ಹೇಳಿದರೂ ಇವು ಎಲ್ಲವೂ ರಜಿಸ್ಟ್ರಾರನೇ ನಿರ್ಣಯಕ್ಕೆ ತೆಗೆದುಕೊಂಡ ಹಾಗೆಯೆ ಹೊರತು ಬೇರೆ ನ್ಯಾಯಾಲಯಕ್ಕೆ ನಿರ್ಣಯಕ್ಕಾಗಿ ಕಳಿಸಿದ ಹಾಗಲ್ಲ; ಸರಕಾರದಿಂದ ನಿಯಮಿತವಾದ ಬೇರೆ ಅಧಿಕಾರಿಯ ಕಡೆಗೆ ಇಲ್ಲವೆ ತಾನೇ ನೇಮಕಮಾಡಿದ ಮಧ್ಯಸ್ಥಗಾರನ ಕಡೆಗೆ ಕಳಿಸಿದ ತಂಟೆಗಳನ್ನು ಮರಳಿ ತಾನು ತೆಗೆದುಕೊಂಡು ತಾನೇ ನಿರ್ಣಯವನ್ನು ರಜಿಸ್ಟ್ರಾರನು ಕೊಡಬಹುದಾಗಿದೆ.

ರಜಿಸ್ಟ್ರಾರನಾಗಲಿ, ಸರಕಾರ ನಿಯಮಿತ ವ್ಯಕ್ತಿಯಾಗಲಿ ರಜಿಸ್ಟ್ರಾರ ನಿಯಮಿತ ಮಧ್ಯಸ್ಥಗಾರನಾಗಲೀ ತಂಟೆಯ ಚೌಕಶಿ ಮಾಡುವಾಗ-ನಿರ್ಣಯದ ಕಿಂತ ಮೊದಲು, ನ್ಯಾಯದ ಹಿತದ ದೃಷ್ಟಿಯಿಂದ ಮಧ್ಯಂತರ ಹುಕುಮುಗಳನ್ನು ಮಾಡಬಹುದು. ಮಧ್ಯಂತರ ಹುಕುಮುಗಳು ತಾತ್ಪೂರ್ತಿಕ ಸ್ವರೂಪದವು. ಜಪ್ತಿಯಾಜ್ಞೆ, ತಾಕೀದಿ ಪ್ರತಿಬಂಧಕಾಜ್ಞೆ, ಮುಂತಾದವುಗಳನ್ನು ಹೊರಡಿಸ ಬಹುದಾಗಿದೆ. ನಿರ್ಣಯಕ್ಕಾಗಿ ಬಂದ ತಂಟೆಯ ವಿಷಯವು ಇದ್ದ ಸ್ಥಿತಿಯಲ್ಲಿಯೇ ಉಳಿದರೆ ತಂಟೆಯ ನಿರ್ಣಯವು ಯೋಗ್ಯ ಹಾಗೂ ನ್ಯಾಯವಾಗುವುದು. ಆದ್ದರಿಂದ ನ್ಯಾಯದ ಹಿತದ ದೃಷ್ಟಿಯಿಂದ ಈ ತರದ ಮಧ್ಯಂತರ ಹುಕುಮು ಮಾಡಲು ಆ ತಂಟೆಯ ನಿರ್ಣಯ ಮಾಡುವ ವ್ಯಕ್ತಿಗೆ ಈ ಕಲಮಿನಿಂದ ಅಧಿಕಾರ ಕೊಡಲಾಗಿದೆ.

ಸಾಮಾನ್ಯವಾಗಿ ಈ ಕಾಯಿದೆಯಿಂದ ಎಲ್ಲ ತಂಟೆಗಳು ರಜಿಸ್ಟ್ರಾರನ ಮುಖಾಂತರ ನಿರ್ಣಯವಾಗುವುವು. ಆದರೆ ಸಹಕಾರಿ ಸಂಘಕ್ಕೆ ಸಂಬಂಧ ಇಲ್ಲದವರನ್ನು ತಂಟೆಯಲ್ಲಿ ಪಕ್ಷಕಾರರನ್ನಾಗಿ ಮಾಡಲು ಬರುವುದಿಲ್ಲ. ಅವರನ್ನು ಪಕ್ಷಕಾರರನ್ನಾಗಿ ಮಾಡದೆ ತಂಟೆಯು ಪರಿಣಾಮಕಾರಿಯಾಗಿ ನಿರ್ಣಯಿಸಲು ಸಾಧ್ಯವಾಗುವುದಿಲ್ಲ. ಇಂತಹ ಬಿಕ್ಕಟ್ಟು ಬಂದಾಗ ಸಂಬಂಧಪಟ್ಟ ಸಂಘವು ರಜಿಸ್ಟ್ರಾರನಿಗೆ ಅರ್ಜಿ ಮಾಡಬೇಕು. ಆ ಅರ್ಜಿಯ ಸ್ಥಿತಿಗತಿಯನ್ನು ವಿಚಾರಿಸಿ, ಹಾಗೆ ತನ್ನ ಮುಂದೆ ಪಕ್ಷಕಾರರನ್ನಾಗಿ ಮಾಡಲು ಬರದೆ ಇರುವವರು ಪಕ್ಷಕಾರ ರಾಗುವುದು ಅವಶ್ಯಕವೆಂದು ರಜಿಸ್ಟ್ರಾರನಿಗೆ ಮನವರಿಕೆಯಾದರೆ ಈ ತಂಟೆಯನ್ನು ದಿವಾಣಿ ನ್ಯಾಯಾಲಯದಲ್ಲಿ ದಾವೆಯಾಗಿ ತರಲು ರಜಿಸ್ಟ್ರಾರನು ಆ ಸಂಘಕ್ಕೆ ಪರವಾನಗಿ ಕೊಡಬಹುದು. ಹೀಗೆ ಪರವಾನಗಿ ಕೊಟ್ಟಾಗ ದಿವಾಣಿ ನ್ಯಾಯಾ ಲಯವು ಈ ದಾವೆಯನ್ನು ಮನ್ನಿಸಲು ಸಮರ್ಥವಾಗುವುದು. ಆಗ ಕಲಮು ೭೦ ರಲ್ಲಿ ಹಾಕಿದ ನಿರ್ಬಂಧವು ಬಾಧಿಸುವುದಿಲ್ಲ.

ಅವಶ್ಯಕ ಪಕ್ಷಕಾರರಿಲ್ಲದೆ ತಂಟೆಯು ಕೊನೆಯದಾಗಿ ನಿರ್ಣಯಿತವಾಗುವು ದಿಲ್ಲ. ಅವರನ್ನು ಪಕ್ಷಕಾರರನ್ನಾಗಿ ಮಾಡದೆ ನಡೆದ ತಂಟೆಯ ಚೌಕಶಿಯೂ ಅದರ ಮೇಲಿನ ನಿರ್ಣಯವೂ ಪೂರ್ತಿಯಾಗುವುದಿಲ್ಲ; ಪಕ್ಷಕಾರರಲ್ಲದವರನ್ನು ನಿರ್ಣಯವು ಬಾಂಧಾಯಿಸುವುದಿಲ್ಲ. ಈ ಪ್ರಸಂಗಕ್ಕಾಗಿ ದಿವಾಣಿ ನ್ಯಾಯಾಲಯದ ನೆರವು ಬೇಕಾಗುವುದು. ಸಹಕಾರಿ ಸಂಘಗಳ ಕಾಯಿದೆಯು ತನ್ನ ದಿಗ್ಬಂಧನ ದಾಟಿ ಹೊರಗೆ ಬರಬೇಕಾಗುವುದು. ಆಗ ಆ ತಂಟೆಯು ಸಹಕಾರಿ ಸಂಘದ ವ್ಯವಹಾರಕ್ಕೆ ಸಂಬಂಧವಾಗಿದ್ದ ತಂಟೆಯಾದರೂ ಅದರ ಮೂಲ ಸ್ವರೂಪವು ದಿವಾಣಿಯದಾಗುವುದು. ಇಂತಹ ಪ್ರಸಂಗಗಳು ಅಸಾಮಾನ್ಯ ಪ್ರಸಂಗವೆಂದೇ ಆ ತರಹದ ಅನುಕೂಲತೆಯನ್ನು ಮಾಡಿ ಕೊಡಲಾಗಿದೆ.

## ಪ್ರಕರಣ : ೧೦ ಸಹಕಾರಿ ಸಂಘಗಳ ದುಂಡುಸುತ್ತುವಿಕೆ ಹಾಗೂ ಮುರಗಡೆ

### ೭೨. ಸಹಕಾರಿ ಸಂಘಗಳ ದುಂಡುಸುತ್ತುವಿಕೆ

(೧) ಕಲಮು ೬೪ ರನ್ವಯವಾಗಿ ವಿಚಾರಣೆ ನಡೆಸಲ್ಪಟ್ಟ ನಂತರ, ಇಲ್ಲವೆ ಕಲಮು ೬೫ ರನ್ವಯವಾಗಿ ಪರಿಶೀಲನೆ ಮಾಡಲ್ಪಟ್ಟ ನಂತರ, ಇಲ್ಲವೆ ಸಹಕಾರಿ ಸಂಘದ ಸದಸ್ಯರಲ್ಲಿಯ ಮೂರು ನಾಲ್ಕಾಂಶದಕಿಂತ ಕಡಿಮೆಯಲ್ಲದಷ್ಟು ಸದಸ್ಯರು ಮಾಡಿದ ಅರ್ಜಿಯು ಸ್ವೀಕಾರವಾದನಂತರ ಸಂಘವು ದುಂಡು ಸುತ್ತಲ್ಪಡತಕ್ಕದ್ದೆಂದು ರಜಿಸ್ಟ್ರಾರನ ಅಭಿಪ್ರಾಯವಾದರೆ, ಅದು ದುಂಡು ಸುತ್ತಲ್ಪಡಬೇಕೆಂದು ನಿರ್ದೇಶಿಸುವ ಹುಕುಮನ್ನು ಅವನು ಹೊರಡಿಸಬಹುದು.

(೨) ರಜಿಸ್ಟ್ರಾರನು ತನ್ನ ಸ್ವಂತ ಪ್ರೇರಣೆಯಿಂದ—

(ಅ) ಸಂಘದ ನೋಂದಣಿಯ ಕರಾರಿನಲ್ಲಿ ಸಂಘವು ಕನಿಷ್ಟಪಕ್ಷಕ್ಕೆ ಹತ್ತು ಸದಸ್ಯರುಳ್ಳದ್ದಾಗಿರತಕ್ಕದ್ದೆಂದು ಇದ್ದು ಸದಸ್ಯ ಸಂಖ್ಯೆಯು ಹತ್ತರಕಿಂತ ಕಡಿಮೆಯಾದಾಗ; ಇಲ್ಲವೆ

(ಬ) ಸಹಕಾರಿ ಸಂಘವು ಕಾರ್ಯವನ್ನು ಪ್ರಾರಂಭ ಮಾಡವೆ ಇರುವಾಗ ಇಲ್ಲವೆ ಕಾರ್ಯ ಮಾಡುವುದನ್ನು ನಿಲ್ಲಿಸಿರುವಾಗ,

ಸಹಕಾರಿ ಸಂಘವು ದುಂಡು ಸುತ್ತಲ್ಪಡಬೇಕೆಂದು ನಿರ್ದೇಶಿಸುವ ಹುಕುಮನ್ನು ಮಾಡಬಹುದು.

(೩) ಯಾವುದೇ ಪ್ರಸಂಗದಲ್ಲಿ ರಜಿಸ್ಟ್ರಾರನ ಅಭಿಪ್ರಾಯದ ಪ್ರಕಾರ ಸಂಘವು ಅಸ್ತಿತ್ವದಲ್ಲಿ ಉಳಿಯಬೇಕೆಂದು ಆದರೆ, ಸಹಕಾರಿ ಸಂಘವು ದುಂಡು ಸುತ್ತಲ್ಪಡಬೇಕೆಂಬ ಹುಕುಮನ್ನು ರಜಿಸ್ಟ್ರಾರನು ಯಾವುದೇ ಕಾಲಕ್ಕೆ ರದ್ದು ಮಾಡಬಹುದು.

**ವಿವೇಚನೆ**

ಕಲಮು ೬೪ ರನ್ವಯದ ವಿಚಾರಣೆಯಾಗಲೀ ಕಲಮು ೬೫ ರನ್ವಯದ ಪರಿಶೀಲನೆಯಾಗಲೀ ಸಂಘದ ಸ್ಥಿತಿಗತಿಯನ್ನು ತಿಳಿದುಕೊಳ್ಳುವುದಕ್ಕಾಗಿ ಇದೆ ಎಂಬುದನ್ನು ಗಮನಿಸಬೇಕು. ಹಾಗೆ ವಿಚಾರಣೆಯ ನಂತರ ಇಲ್ಲವೆ ಪರಿಶೀಲನೆಯ ನಂತರ ಸಂಘವು ನಡೆಯುವುದರ ಬದಲು ದುಂಡು ಸುತ್ತಲ್ಪಡಲು ಯೋಗ್ಯವಾಗಿದೆಯೆಂದು ರಜಿಸ್ಟ್ರಾರನ ಅಭಿಪ್ರಾಯವಾದರೆ, ಹಾಗೆ ದುಂಡು ಸುತ್ತಲ್ಪಡಬೇಕೆಂದು ನಿರ್ದೇಶನ ಮಾಡುವ ಹುಕುಮನ್ನು ರಜಿಸ್ಟ್ರಾರನು ಹೊರಡಿಸಬಹುದು. ಅಲ್ಲದೆ, ಸಹಕಾರಿ ಸಂಘದ ಸದಸ್ಯರಲ್ಲಿಯ ಮೂರು ನಾಲ್ಕಾಂಶದಷ್ಟು ಸದಸ್ಯರು ಆ ಸಂಘವು ದುಂಡು ಸುತ್ತಲ್ಪಡಬೇಕೆಂದು ರಜಿಸ್ಟ್ರಾರನಿಗೆ ಅರ್ಜಿ ಮಾಡಿದಾಗ

ಅದರ ಮೂಲಕ ರಜಿಸ್ಟ್ರಾರನ ಅಭಿಪ್ರಾಯವು ಕೂಡ ಆ ಸಂಘವು ದುಂಡು ಸುತ್ತಲ್ಪಡಬೇಕೆಂದು ಆದರೆ ಆಗ ಹಾಗೆ ನಿರ್ದೇಶನ ಕೊಡುವ ಹುಕುಮನ್ನು ರಜಿಸ್ಟ್ರಾರನು ಹೊರಡಿಸಬಹುದು. ವಿಚಾರಣೆ ಇಲ್ಲವೆ ಪರಿಶೀಲನೆ ಇಲ್ಲವೆ ಸದಸ್ಯರ ಅರ್ಜಿಯು ಕಾರಣವಾಗಿ ಹುಕುಮು ಹೊರಡಿಸಬಹುದಾದ ಪ್ರಸಂಗವಿದು. ಅಂದರೆ ಪರಿಸ್ಥಿತಿ ಜನ್ಯವಾದುದು.

ಇನ್ನೊಂದು ಬಗೆಯ ಪ್ರಸಂಗವು ಸಂಘದ ರಚನೆಯು ಕರಾರಿನಿಂದ ಉಂಟಾಗುವುದು. ಸಂಘದ ರಚನೆಯು ಕಾಲಕ್ಕೆ ಆ ಸಂಘವಲ್ಲಿ ಕನಿಷ್ಠ ಹತ್ತು ಸದಸ್ಯರಾದರೂ ಇರಲೇಬೇಕು ಎಂದು ನೋಂದಣಿಯ ಕಾಲಕ್ಕೆ ಕರಾರು ಹಾಕಿಕೊಂಡಿರುವಾಗ, ಮುಂದೆ ಕಾಲಾಂತರದಲ್ಲಿ ಆ ಸದಸ್ಯರ ಸಂಖ್ಯೆಯು ಹತ್ತರಕಿಂತ ಕಡಿಮೆಯಾಗಿದೆಯೆಂದು ರಜಿಸ್ಟ್ರಾರನಿಗೆ ಕಂಡು ಬಂದರೆ ಅವನು ತನ್ನ ಸ್ವಂತ ಪ್ರೇರಣೆಯಿಂದ ಆ ಸಂಘವು ದುಂಡು ಸುತ್ತಲ್ಪಡಬೇಕೆಂದು ನಿರ್ದೇಶಿಸುವ ಹುಕುಮನ್ನು ಮಾಡಬಹುದು

ಸಹಕಾರಿ ಸಂಘವು ರಚನೆಯಾಗಿ, ನೋಂದಣಿಯಾಗಿ ಅದು ಕಾರ್ಯವನ್ನೇ ಪ್ರಾರಂಭಿಸಲಿಲ್ಲ ಎಂದು ಕಂಡುಬಂದರೆ, ಇಲ್ಲವೆ ಕಾರ್ಯ ಮಾಡುವುದನ್ನು ಪ್ರಾರಂಭಿಸಿ ಮುಂದೆ ಕಾರ್ಯ ಮಾಡುವುದನ್ನು ನಿಲ್ಲಿಸಿದೆಯೆಂದು ಕಂಡುಬಂದರೆ, ಅಂತಹ ಸಂಘವು ದುಂಡು ಸುತ್ತಲ್ಪಡಬೇಕೆಂದು ನಿರ್ದೇಶಿಸುವ ಹುಕುಮನ್ನು ರಜಿಸ್ಟ್ರಾರನು ಸ್ವಂತ ಪ್ರೇರಣೆಯಿಂದ ಮಾಡಬಹುದು. ಈ ಪರಿಸ್ಥಿತಿಯಲ್ಲಿ ಹುಕುಮು ಮಾಡುವಾಗ ಒಂದು ಮಾತನ್ನು ಗಮನಿಸಬೇಕಾಗುವುದೆಂದು ಕಾಣುತ್ತದೆ. ಅದು ಕಾಯಿದೆಯಲ್ಲಿ ಹೇಳಲ್ಪಟ್ಟಿಲ್ಲ. ನೋಂದಣಿ ಮಾಡಲ್ಪಟ್ಟ ಮೇಲೆ **ಯೋಗ್ಯ ಸಮಯದ ವರೆಗೆ**— ಅದು ಕಾರ್ಯ ಪ್ರಾರಂಭಿಸದಿದ್ದರೆ, ಇಲ್ಲವೆ ಕಾರ್ಯ ಪ್ರಾರಂಭಿಸಿ ಕಾರ್ಯ ಮಾಡುವುದನ್ನು ನಿಲ್ಲಿಸಿ **ಸಾಕಷ್ಟು ಸಮಯ** ಸಂದಿ ಹೋಗಿ ಇನ್ನು ಮುಂದೆ ಅದು ಕಾರ್ಯ ಮಾಡಲಿಕ್ಕಿಲ್ಲೆಂಬ ಹಾಗೆ ಕಂಡುಬಂದರೆ, ಅದು ಡುಂಡು ಸುತ್ತಲ್ಪಡಬೇಕೆಂಬ ನಿರ್ದೇಶನ ಕೊಡುವ ಹುಕುಮು ಹೊರಡಿಸಲ್ಪಡಬಹುದು. ಈ ವಿವೇಕವನ್ನು ರಜಿಸ್ಟ್ರಾರನಿಗೆ ಬಿಡಲಾಗಿದೆ.

ಅಲ್ಲದೆ ಈ ಕಲಮಿನ ಉಪಕಲಮು (೩) ಸಹಾಯಕ್ಕೆ ಬರುವಂತೆಯೂ ಇದೆ. ಒಂದು ವೇಳೆ ದುಂಡು ಸುತ್ತಲ್ಪಡಬೇಕೆಂಬ ನಿರ್ದೇಶನದ ಹುಕುಮು ಹೊರಡಿಸಲ್ಪಟ್ಟರೂ ನಂತರ ಆ ಸಂಘವು ಮುಂದೆ ಅಸ್ತಿತ್ವದಲ್ಲಿ ಉಳಿಯಲು ಯೋಗ್ಯವಾದುದಾಗಿದೆಯೆಂದು ರಜಿಸ್ಟ್ರಾರನ ಅಭಿಪ್ರಾಯವಾದರೆ ಅವನು ಮಾಡಿದ ದುಂಡುಸುತ್ತಲ್ಪಡಬೇಕೆಂಬ ಹುಕುಮನ್ನು ರದ್ದುಗೊಳಿಸುವ ಹುಕುಮನ್ನು ಮಾಡಬಹುದಾಗಿದೆ. ಇದರಿಂದ ಮೇಲೆ ತೋರಿದ ಸಂಶಯವು ಪರಿಹಾರವಾಗಬಹುದಾಗಿದೆ

ರಜಿಸ್ಟ್ರಾರನ ಅಭಿಪ್ರಾಯವಾದರೆ ಎಂದು ಬಂದಾಗ ಅದು ನ್ಯಾಯವಾದ ಅಭಿಪ್ರಾಯವೆಂದೇ ಅರ್ಥಮಾಡಬೇಕು. ಅಂದರೆ ಪರಿಸ್ಥಿತಿಯನ್ನು ತೂಗಿ ನೋಡಿ ಆ ಪರಿಸ್ಥಿತಿಯಲ್ಲಿ ಯಾವುದು ನ್ಯಾಯವಾದುದು ಎಂಬುದನ್ನು ತಿಳಿದು ಹುಕುಮು ಮಾಡಬೇಕು ಎಂದು ಅರ್ಥ.

**೭೩. ಲಿಕ್ವಿಡೇಟರ**

(೧) ಕಲಮು ೭೨ ರನ್ವಯವಾಗಿ ರಜಿಸ್ಟ್ರಾರನು ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂದು ಹುಕುಮುಮಾಡಿದಾಗ ಆ ಉದ್ದೇಶಕ್ಕಾಗಿ ಅವನು ಒಬ್ಬ ಲಿಕ್ವಿಡೇಟರನನ್ನು ನೇಮಕಮಾಡಬಹುದು ಮತ್ತು ಅವರ ವೇತನವನ್ನು ಗೊತ್ತು ಮಾಡಬಹುದು.

(೨) ನೇಮಕವಾದನಂತರ ಲಿಕ್ವಿಡೇಟರನು ಸಂಘವು ಬಾಧ್ಯಸ್ಥವಾಗಿರುವ ಇಲ್ಲವೆ ಬಾಧ್ಯಸ್ಥವಾಗಿದೆಯೆಂದು ಕಂಡು ಬಂದ ಎಲ್ಲ ಆಸ್ತಿ, ಪಾರಿಣಾಮಿಕ ಹಕ್ಕುಗಳು ಮತ್ತು ಕ್ರಮಯೋಗ್ಯ ಮಾಗಣಿಗಳನ್ನು ತನ್ನ ಸ್ವಾಧೀನದಲ್ಲಿ ಇಲ್ಲವೆ ತನ್ನ ನಿಯಂತ್ರಣದಲ್ಲಿ ತೆಗೆದುಕೊಳ್ಳತಕ್ಕದ್ದು ಮತ್ತು ಇಂತಹ ಆಸ್ತಿಯು, ಪಾರಿಣಾಮಿಕ ಹಕ್ಕುಗಳು ಮತ್ತು ಮಾಗಣಿಗಳು ಹಾನಿಯಾಗುವುದನ್ನು, ಹಾಳಾಗುವುದನ್ನು ಇಲ್ಲವೆ ಥಕ್ಕೆ ಯಾಗುವುದನ್ನು ತಡೆಯಲು ಅವನಿಗೆ ಆವಶ್ಯಕವೆನ್ನಿಸಬಹುದಾದ ಇಲ್ಲವೆ ಪ್ರಸಂಗೋಚಿತವಾದ ಅಂತಹ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು.

(೩) ಕಲಮು ೧೦೬ ರನ್ವಯವಾಗಿ ಅಪೀಲು ಮಾಡಲ್ಪಟ್ಟಾಗ ಕಲಮು ೭೨ ರನ್ವಯವಾಗಿ ಮಾಡಲಾದ ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂಬ ಹುಕುಮು ಅಪೀಲಿನಲ್ಲಿ ಸ್ವೀಕರಿಸಲ್ಪಟ್ಟ ಹೊರತು ಆ ನಂತರ ಆ ಹುಕುಮು ಕಾರ್ಯಕಾರಿಯಾಗತಕ್ಕದ್ದಲ್ಲ.

ಆದರೆ, ಉಪಕಲಮು (೨) ರಲ್ಲಿ ಹೇಳಲಾದ ಆಸ್ತಿಯು, ಪಾರಿಣಾಮಿಕ ಹಕ್ಕುಗಳ ಮತ್ತು ಕ್ರಮಯೋಗ್ಯ ಮಾಗಣಿಗಳ ಸ್ವಾಧೀನವನ್ನು ಇಲ್ಲವೆ ನಿಯಂತ್ರಣ ವನ್ನು ಲಿಕ್ವಿಡೇಟರನು ಇಟ್ಟುಕೊಳ್ಳುವುದನ್ನು ಮುಂದುವರೆಸತಕ್ಕದ್ದು. ಮತ್ತು ಆ ಉಪಕಲಮಿನಲ್ಲಿ ಹೇಳಿದ ಕ್ರಮಗಳನ್ನು ಕೈಕೊಳ್ಳಲು ಅಧಿಕಾರ ಇರತಕ್ಕದ್ದು.

(೪) ಸಹಕಾರಿ ಸಂಘವು ದುಂಡು ಸುತ್ತಲ್ಪಡಬೇಕೆಂದು ಮಾಡಿದ ಹುಕುಮು ಅಪೀಲದಲ್ಲಿ ರದ್ದುಗೊಳಿಸಲ್ಪಟ್ಟರೆ, ಸಂಘದ ಆಸ್ತಿ, ಪಾರಿಣಾಮಿಕ ಹಕ್ಕುಗಳು ಮತ್ತು ಕ್ರಮಯೋಗ್ಯ ಮಾಗಣಿಗಳು ಆ ಸಂಘದ ಅಧಿಕಾರಕ್ಕೆ ಪುನಃ ಬರತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂದು ಕಲಮು ೭೨ ರ ಪ್ರಕಾರ ಹುಕುಮು ಮಾಡಲ್ಪಟ್ಟಿದೆಯೆಂದರೆ ಆ ಸಂಘವು ಅವರ ಸದಸ್ಯರಿಂದ ಕಮಿಟಿ ಯಿಂದ, ಅಧಿಕಾರಿಗಳಿಂದ ನಡೆಸಿಕೊಂಡು ಹೋಗಲು ಸಾಧ್ಯವಾಗಿಲ್ಲವೆಂದು

ಹೇಳಿದಂತೆ. ಆದ್ದರಿಂದ ಅದರ ಋಣ ವಿಮೋಚನೆಯಾಗಬೇಕಾಗುವುದು. ಅದಕ್ಕೆ ಲಿಕ್ವಿಡೇಟರ ( ಋಣ ವಿಮೋಚಕ ) ನ ನೇಮಕವಾಗಬೇಕಾಗುತ್ತದೆ. ಅಂದರೆ ರಜಿಸ್ಟ್ರಾರನು ಮೊದಲು ಕಲಮು ೭೨ ರ ಪ್ರಕಾರ ಹುಕುಮು ಮಾಡಿದ ಮೇಲೆ ದುಂಡು ಸುತ್ತಲ್ಪಡುವ ಉದ್ದೇಶಕ್ಕಾಗಿ ಒಬ್ಬ ಲಿಕ್ವಿಡೇಟರನನ್ನು ನೇಮಿಸ ಬಹುದು. ಅವನ ವೇತನವನ್ನು ಗೊತ್ತುಮಾಡಬಹುದು. ಈ ನೇಮಕವು ಕಲಮು ೭೩ ರ ಪ್ರಕಾರ ನಡೆಯುವುದು.

ನೇಮಕವಾದ ಲಿಕ್ವಿಡೇಟರನು ಕೂಡಲೆ ಆ ಸಂಘದ ಎಲ್ಲ ಆಸ್ತಿ, ಹಕ್ಕು ಹಾಗೂ ಮಾಗಣಿಗಳನ್ನು ತನ್ನ ಸ್ವಾಧೀನಲ್ಲಿ ತೆಗೆದುಕೊಳ್ಳತಕ್ಕದ್ದು ಇಲ್ಲವೆ ತನ್ನ ನಿಯಂತ್ರಣ ಉಂಟಾಗುವಂತೆ ಮಾಡತಕ್ಕದ್ದು. ಆ ಆಸ್ತಿ, ಹಕ್ಕುಗಳು ಹಾಗೂ ಮಾಗಣಿಗಳು ಯಾವುದೇ ರೀತಿಯಲ್ಲಿ ಹಾನಿಗೊಳಗಾಗುವುದನ್ನು, ಹಾಳಾಗುವುದನ್ನು ಇಲ್ಲವೆ ಧಕ್ಕೆಗೆ ಈಡಾಗುವುದನ್ನು ತಡೆಯಲು ಯಾವ ಆವಶ್ಯಕ ಹಾಗೂ ಪ್ರಸಂಗೋಚಿತ ಕ್ರಮಗಳನ್ನು ತೆಗೆದುಕೊಳ್ಳಬೇಕೆಂದು ಆ ಲಿಕ್ವಿಡೇಟರನಿಗೆ ಅನಿಸುವುದೋ ಅಂತಹ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು, ಆವಶ್ಯಕ ಯಾವುದು ಪ್ರಸಂಗೋಚಿತ ಯಾವುದು ಎಂಬುದನ್ನು ನಿರ್ಣಯಿಸುವ ಅಧಿಕಾರ ಲಿಕ್ವಿಡೇಟರನದು.

ಕಲಮು ೭೨ ರ ಪ್ರಕಾರ ಮಾಡಲ್ಪಟ್ಟ ಹುಕುಮಿನ ಮೇಲೆ ಸಂಘವು ಕಲಮು ೧೦೬ ರ ಪ್ರಕಾರ ಅಪೀಲು ಮಾಡಬಹುದಾಗಿದೆ. ಆ ನಂತರ— ಅಂದರೆ ಅಪೀಲು ಮಾಡಿದ ನಂತರ, ಅಪೀಲಿನಲ್ಲಿ ಆ ಹುಕುಮು ಸ್ಥಿರೀಕರಿಸಲ್ಪಟ್ಟ ಹೊರತು ಕಲಮು ೭೨ ರನ್ವಯ ಮಾಡಿದ ಹುಕುಮು ಕಾರ್ಯಕಾರಿಯಾಗತಕ್ಕದ್ದಲ್ಲ. ಅಂದರೆ ಅಪೀಲು ಆದ ಕೂಡಲೆ, ಕಲಮು ೭೨ ರನ್ವಯವಾಗಿರುವ ಆಜ್ಞೆಗೆ ತಡೆ ಆದಂತೆ ಎಂದು ಅನ್ನಿಸುವುದು.

ಆದರೆ ಕಲಮು ೭೨ ರನ್ವಯವಾಗಿ ದುಂಡು ಸುತ್ತಲ್ಪಡುವ ಹುಕುಮು ಮಾಡಿದ ನಂತರ ಕಲಮು ೭೩ ರನ್ವಯ ರಿಕ್ವಿಡೇಟರನ ನೇಮಕವಾಗಿ ಅವನು ಲಿಸ್ತಿ,ಹಕ್ಕು, ಮಾಗಣಿಗಳನ್ನು ಸ್ವಾಧೀನಪಡಿಸಿಕೊಳ್ಳುವನು. ಅಪೀಲ ಮಾಡಲಾಗಿದೆಯೆಂಬ ಕಾರಣಕ್ಕಾಗಿ ದುಂಡು ಸುತ್ತಲ್ಪಡುವ ಕಾರ್ಯವು ನಿಂತರೂ ರಿಕ್ವಿಡೇಟರನ ಸ್ವಾಧೀನದಲ್ಲಿ ಬಂದ ಆಸ್ತಿಗೆ, ಆ ಆಸ್ತಿ ಮುಂತಾದವುಗಳಿಗೆ ಸಂಬಂಧವಾಗಿ ಆವಶ್ಯಕವಾದ ಹಾಗೂ ಪ್ರಸಂಗೋಚಿತವಾದ ಕ್ರಮ ಕೈಕೊಳ್ಳುವ ಅವನ ಅಧಿಕಾರಕ್ಕೆ ಅಪೀಲು ಬಾಧೆ ತರುವುದಿಲ್ಲ.

ಅಪೀಲಿನಲ್ಲಿ ಈ ದುಂಡುಸುತ್ತಲ್ಪಡಬೇಕೆಂಬ ಹುಕುಮು ರದ್ದಾದರೆ, ಲಿಕ್ವಿಡೇಟರನ ಅಧಿಕಾರಾಂರ್ಗತವಾಗಿದ್ದ ಎಲ್ಲ ಆಸ್ತಿಗಳು, ಪಾರಿಣಾಮಿಕ ಹಕ್ಕುಗಳು, ಮತ್ತು ಕ್ರಮಯೋಗ್ಯ ಮಾಗಣಿಗಳು ಪುನಃ ಸಂಘದ ಅಂತರ್ಗತವಾಗತಕ್ಕದ್ದು.

ಒಮ್ಮೆ ರಜಿಸ್ಟ್ರಾರನಿಂದ ಸಂಘವು ದುಂಡುಸುತ್ತಲ್ಪಡಬೇಕೆಂದು ಹುಕುಮು ಮಾಡಲ್ಪಟ್ಟರೆ ಅದು ಅಪೀಲಿನಲ್ಲಿ ರದ್ದಾಗದಿದ್ದರೆ ನೇಮಕವಾದ ಲಿಕ್ವಿಡೇಟರನು ತನ್ನ ಕಾರ್ಯವನ್ನು ಮುಂದುವರಿಸತಕ್ಕದ್ದು. ಅವನ ಅಧಿಕಾರಗಳು ಯಾವು ಎಂಬುದನ್ನು ಮುಂದಿನ ಕಲಮಿನಲ್ಲಿ ಹೇಳಿದೆ.

## ೭೪. ಲಿಕ್ವಿಡೇಟರನ ಅಧಿಕಾರಗಳು

(೧) ಈ ಸಂಬಂಧದಲ್ಲಿ ಮಾಡಲಾದ ಯಾವುದೇ ನಿಯಮಗಳ ಅಂಕಿತವಾಗಿ ಯಾವ ಸಹಕಾರಿ ಸಂಘದ ಸಂಬಂಧವಾಗಿ ದುಂಡು ಸುತ್ತಲ್ಪಡಬೇಕೆಂಬ ಹುಕುಮು ಮಾಡಲ್ಪಟ್ಟಿದೆಯೋ ಆ ಸಂಘದ ಎಲ್ಲ ಸೊತ್ತುಗಳ ಕಲಮು ೭೩ ರನ್ವಯವಾಗಿ ನೇಮಕವಾದ ಲಿಕ್ವಿಡೇಟರನ ಅಧಿಕಾರಕ್ಕೆ ಆ ಹುಕುಮು ಪರಿಣಾಮಕಾರಿಯಾದ ತಾರೀಖಿನಿಂದ ಬರತಕ್ಕದ್ದು ಮತ್ತು ಇಂತಹ ಸೊತ್ತುಗಳನ್ನು ಮಾರಾಟ ಇಲ್ಲವೆ ಬೇರೆ ರೀತಿಯಲ್ಲಿ ಹಣದ ರೂಪದಲ್ಲಿ ಪರಿವರ್ತಿಸಲು ಲಿಕ್ವಿಡೇಟರನಿಗೆ ಅಧಿಕಾರ ಇರತಕ್ಕದ್ದು.

(೨) ರಜಿಸ್ಟ್ರಾರನ ನಿಯಂತ್ರಣದ ಅಂಕಿತವಾಗಿ, ಇಂತಹ ಲಿಕ್ವಿಡೇಟರನಿಗೆ ಈ ಕೆಳಗಿನ ಅಧಿಕಾರಗಳು ಕೂಡ ಇರತಕ್ಕದ್ದು.

(ಅ) ತನ್ನ ಅಧಿಕಾರಪದದ ಹೆಸರಿನಿಂದ ಸಹಕಾರಿ ಸಂಘದ ಪರವಾಗಿ ದಾವೆಗಳನ್ನು ಮತ್ತು ಇತರ ಪ್ರಕರಣಗಳನ್ನು ದಾಖಲ ಮಾಡಲು ಮತ್ತು ಪ್ರತಿವಾದ ಮಾಡಲು ಅಧಿಕಾರ;

(ಬ) ಸಂಘದ ಸೊತ್ತುಗಳಿಗಾಗಿ ಸದಸ್ಯರಿಂದ ಇಲ್ಲವೆ ಹಿಂದಿನ ಸದಸ್ಯರಿಂದ ಇಲ್ಲವೆ ಮರಣ ಹೊಂದಿದ ಸದಸ್ಯರ ಆಸ್ತಿಯಿಂದ ಇಲ್ಲವೆ ನಾಮಕರಣ ವ್ಯಕ್ತಿಗಳಿಂದ, ವಾರಸದಾರರಿಂದ, ಇಲ್ಲವೆ ಕಾಯಿದೇಶೀರ ಪ್ರತಿನಿಧಿಗಳಿಂದ ಇಲ್ಲವೆ ಯಾವುದೇ ಅಧಿಕಾರಿಗಳಿಂದ ಇಲ್ಲವೆ ಹಿಂದಿನ ಅಧಿಕಾರಿಗಳಿಂದ ಎಷ್ಟು ವಂತಿಗೆ ಕೊಡಲ್ಪಡುವುದಿದೆ ಇಲ್ಲವೆ ವಂತಿಗೆ ಕೊಡಲ್ಪಡುವುದು ಇನ್ನು ಎಷ್ಟು ಉಳಿದಿದೆ ಎಂದು ಕಾಲ ಕಾಲಕ್ಕೆ ನಿರ್ಧರಿಸುವ ಅಧಿಕಾರ;

(ಕ) ಸಹಕಾರಿ ಸಂಘದ ವಿರುದ್ಧವಾಗಿರುವ ಮಾಗಣಿಗಳ ತಪಶೀಲು ತೆಗೆಯುವ ಮತ್ತು ಈ ಕಾಯಿದೆಯ ಶರತುಗಳ ಅಂಕಿತವಾಗಿ, ಮಾಗಣಿದಾರರ ನಡುವೆ ಉಂಟಾಗುವ ಪ್ರಾಥಮಿಕತೆಯ ಪ್ರಶ್ನೆಯನ್ನು ನಿರ್ಣಯಿಸುವ ಅಧಿಕಾರ;

(ಡ) ದುಂಡು ಸುತ್ತಲ್ಪಡುವ ತಾರೀಖಿನ ವರೆಗೆ ಬಡ್ಡಿ ಸಹಿತವಾಗಿ ಸಹಕಾರಿ ಸಂಘದ ವಿರುದ್ಧವಾಗಿರುವ ಮಾಗಣಿಗಳನ್ನು, ಅವರವರ ಪ್ರಾಥಮಿಕತೆಯು ಯಾವುದಾದರೂ ಇದ್ದರೆ, ಅದರ ಅನುಸಾರವಾಗಿ ಪೂರ್ತಿಯಾಗಿ ಇಲ್ಲವೆ ಪ್ರಮಾಣಕ್ಕೆ ತಕ್ಕಂತೆ ಸಂಘದ ಸೊತ್ತುಗಳು ಅನುಕೂಲಿಸಿದ ಹಾಗೆ ಸಲ್ಲಿಸುವ ಅಧಿಕಾರ;

ಮಾಗಣಿಗಳ ಹಣವನ್ನು ಸಲ್ಲಿಸಿದ ನಂತರ ಹೆಚ್ಚಾಗಿ ಏನಾದರೂ ಸೊತ್ತು ಉಳಿದಿದ್ದರೆ, ದುಂಡು ಸುತ್ತಲ್ಪಡಬೇಕೆಂಬ ಹುಕುಮಿನ ತಾರೀಖಿನಿಂದ ಬಡ್ಡಿಗಾಗಿ ಅವನು ಗೊತ್ತು ಮಾಡುವ ದರದಂತೆ, ಆದರೆ ಯಾವುದೇ ಸಂದರ್ಭದಲ್ಲಿ ಕರಾರಿನಲ್ಲಿ ಇದ್ದ ಬಡ್ಡಿಯ ದರದಕಿಂತ ಹೆಚ್ಚಿಗೆ ಆಗದ ದರದಂತೆ, ಕೊಡುವುದರಲ್ಲಿ ವಿನಿಯೋಗಿಸಲ್ಪಡುವ ಅಧಿಕಾರ;

(ಇ) ಲಿಕ್ವಿಡೇಶನದ ವೆಚ್ಚವು ಯಾವ ವ್ಯಕ್ತಿಗಳಿಂದ ಯಾವ ಪ್ರಮಾಣದಲ್ಲಿ ವಹಿಸಲ್ಪಡಬೇಕೆಂಬುದನ್ನು ನಿರ್ಧರಿಸುವ ಅಧಿಕಾರ;

(ಫ) ಯಾವುದೇ ವ್ಯಕ್ತಿಯು ಸದಸ್ಯನು, ಹಿಂದಿನ ಸದಸ್ಯನು ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣ ವ್ಯಕ್ತಿ ಇರುವನೋ ಎಂಬುದನ್ನು ನಿರ್ಧರಿಸುವ ಅಧಿಕಾರ;

(ಗ) ಸಂಘದ ವ್ಯವಹಾರಗಳನ್ನು ದುಂಡು ಸುತ್ತುವುದರ ಸಲುವಾಗಿ ಆವಶ್ಯಕವೆಂದು ಅವನಿಗೆ ಕಂಡು ಬಂದ ಹಾಗೆ ಸಂಘದ ಸೊತ್ತುಗಳ ವಸೂಲಿಯ ಬಗ್ಗೆ ಹಾಗೂ ವಿತರಣದ ಬಗ್ಗೆ ಅಂತಹ ನಿರ್ದೇಶನಗಳನ್ನು ಕೊಡುವ ಅಧಿಕಾರ;

(ಹ) ಸಂಘವನ್ನು ಲಾಭದಾಯಕವಾಗಿ ದುಂಡು ಸುತ್ತುವುದಕ್ಕೆ ಆವಶ್ಯಕವಾದಂತಹ ರೀತಿಯಲ್ಲಿ ಸಂಘದ ವ್ಯವಹಾರವನ್ನು ಸಾಗಿಸುವ ಅಧಿಕಾರ;

(ಈ) ಯಾವುದರಿಂದ ಸಂಘವು ಹೊಣೆಗಾರವಾಗಿ ಪರಿಣಮಿಸುವುದೋ ಅಂತಹ ಇಂದಿನ ಇಲ್ಲವೆ ಮುಂದಿನ ಮಾಗಣಿಗಳನ್ನು ಮುಂದೆ ಮಾಡುವ ಇಲ್ಲವೆ ಇವೆಯೆಂದು ಹೇಳುವ ಧನಕೋ ಜನರೊಡನೆ ಇಲ್ಲವೆ ಧನಕೋ ಎಂದು ಹೇಳಿಕೊಳ್ಳುವ ಜನರೊಡನೆ ಯಾವುದೇ ರಾಜಿ ಇಲ್ಲವೆ ವ್ಯವಸ್ಥೆಯನ್ನು ಮಾಡುವ ಅಧಿಕಾರ; ಮತ್ತು

(ಜ) ಸಹಕಾರಿ ಸಂಘವು ಹೊಣೆಗಾರವಾಗಿದೆಯೆಂದು ಹೆದರಿಸುವ ವ್ಯಕ್ತಿ ಇಲ್ಲವೆ ವಂತಿಗೆದಾರನೆಂದು ಇಲ್ಲವೆ ಇತರ ಸಾಲಗಾರನೆಂದು ಆಪಾದಿತನು ಇಲ್ಲವೆ ವಂತಿಗೆದಾರನು ಮತ್ತು ಸಂಘ ಇವರ ನಡುವೆ ಇರುವ ಇಲ್ಲವೆ ಇವೆಯೆಂದು ಹಿಡಿದ ನಿಶ್ಚಿತ ಇಲ್ಲವೆ ಉಂಟಾಗಬಹುದಾದ, ಇಂದಿನ ಇಲ್ಲವೆ ಮುಂದಿನ ಎಲ್ಲ ಮಾಗಣಿಗಳ ಹಾಗೂ ಎಲ್ಲ ಬೇಡಿಕೆಗಳ ಇಲ್ಲವೆ ಬೇಡಿಕೆಯ ಹೊಣೆಗಾರಿಕೆಗಳ, ಮತ್ತು ಸಾಲಗಳ ಹಾಗೂ ಸಾಲಗಳ ಹೊಣೆಗಾರಿಕೆಗಳ ಬಗ್ಗೆ ರಾಜಿ ಮಾಡಿಕೊಳ್ಳುವ ಅಧಿಕಾರ, ಮತ್ತು ಸಂಘದ ಸೊತ್ತುಗಳ ಇಲ್ಲವೆ ದುಂಡು ಸುತ್ತುವಿಕೆಗೆ ಯಾವುದೇ ರೀತಿಯಿಂದ ಸಂಬಂಧಪಟ್ಟ, ಇಲ್ಲವೆ ಬಾಧಿಸುವ ಎಲ್ಲ ಪ್ರಶ್ನೆಗಳನ್ನು ಒಪ್ಪಂದ ಮಾಡಿಕೊಳ್ಳಬಹುದಾದ ಕರಾರುಗಳ ಮೇಲೆ ರಾಜಿ ಮಾಡಿಕೊಳ್ಳುವ ಅಧಿಕಾರ, ಮತ್ತು ಇಂತಹ ಯಾವುದೇ ಬೇಡಿಕೆ, ಹೊಣೆಗಾರಿಕೆ, ಸಾಲ, ಇಲ್ಲವೆ. ಮಾಗಣಿ ಪಾವತಿಯಾದ ಬಗ್ಗೆ ಯಾವುದೇ ಜಾಮೀನು ತೆಗೆದುಕೊಳ್ಳುವ ಅಧಿಕಾರ ಮತ್ತು ಈ ಸಂಬಂಧವಾಗಿ ಪೂರ್ತಿ ಪಾವತಿ ಕೊಡುವ ಅಧಿಕಾರ.

(೩) ಸಹಕಾರಿ ಸಂಘದ ವ್ಯವಹಾರಗಳು ದುಂಡು ಸುತ್ತಲ್ಪಟ್ಟ ನಂತರ ಲಿಕ್ವಿಡೇಟರನು ರಜಿಸ್ಟ್ರಾರನಿಗೆ ಒಂದು ವರದಿಯನ್ನು ಸಾದರಪಡಿಸತಕ್ಕದ್ದು. ಮತ್ತು ರಜಿಸ್ಟ್ರಾರನು ನಿರ್ದೇಶಿಸಬಹುದಾದಂತಹ ಸ್ಥಳದಲ್ಲಿ ಸಂಘದ ದಾಖಲೆ ಪತ್ರಗಳನ್ನು ಭದ್ರವಾಗಿ ಇಡತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ದುಂಡು ಸುತ್ತಲ್ಪಡಬೇಕೆಂದು ಹುಕುಮು ಮಾಡಿದ ತಾರೀಖಿನಿಂದ ಸಂಘವು ತನ್ನ ಅಧಿಕಾರಿಗಳ ಮೂಲಕ ಕಾರ್ಯಮಾಡುವುದು ನಿಲ್ಲಿಸಿದಂತೆ. ಕಲಮು ೭೩ ರ ಪ್ರಕಾರ ನೇಮಕವಾದ ಲಿಕ್ವಿಡೇಟರನು ಸಂಘದ ಎಲ್ಲ ವ್ಯವಹಾರ ಸೂತ್ರಗಳನ್ನು ವಹಿಸಿಕೊಂಡಂತೆ. ಸಂಘದ ಎಲ್ಲ ಸೊತ್ತುಗಳು ಲಿಕ್ವಿಡೇಟರನ ಅಧಿಕಾರಕ್ಕೆ ಬರುವುವು. ಅವು ಹೇಗೆ ಬರುವುವು ಎಂಬ ಬಗ್ಗೆ ನಿಯಮಗಳು ಹೇಳುವುವು. ದುಂಡು ಸುತ್ತಲ್ಪಡಬೇಕೆಂಬ ಹುಕುಮು ಪರಿಣಾಮಕಾರಿ ಆಗುವ ತಾರೀಖಿನಿಂದ ಲಿಕ್ವಿಡೇಟರನ ಅಧಿಕಾರಕ್ಕೆ ಬರುವುವು ಎಂದು ಹೇಳಿದೆ. ಪರಿಣಾಮಕಾರಿ ಯಾಗುವ ತಾರೀಖು ಎಂದರೆ ಯಾವುದು? ರಜಿಸ್ಟ್ರಾರನ ಹುಕುಮು ಸಂಘಕ್ಕೆ ತಲುಪಬೇಕು. ಅದು ಸ್ವೀಕೃತವಾದ ತಾರೀಖಿನಿಂದ ಆ ಹುಕುಮು ಪರಿಣಾಮಕಾರಿಯಾದಂತೆ. ಸಂಘಕ್ಕೆ ಆ ಹುಕುಮು ಮುಟ್ಟದಿದ್ದಾಗ ರಜಿಸ್ಟ್ರಾರನು ಹುಕುಮು ಹೊರಡಿಸಿದ್ದರೂ ಅದು ಪರಿಣಾಮಕಾರಿಯಾದಂತೆ ಅಲ್ಲ. ಮುಟ್ಟಿದ ತಾರೀಖು ಮುಖ್ಯ. ಅಂದು ಹುಕುಮು ಪರಿಣಾಮಕಾರಿಯಾದಂತೆ. ಆ ತಾರೀಖಿಗೆ ಇರುವ ಸೊತ್ತುಗಳು ಲಿಕ್ವಿಡೇಟರನ ಅಧಿಕಾರದ ಅಂತರ್ಗತವಾಗುವುವು. ಲಿಕ್ವಿಡೇಟರನು ನೇಮಕವಾದ ನಂತರ ಅವನು ಸಂಘದ ಸೊತ್ತುಗಳನ್ನು ಹಣದ ರೂಪದಲ್ಲಿ ಪರಿವರ್ತಿಸಲು ಬೇಕಾದ ಎಲ್ಲ ಕ್ರಮಗಳನ್ನು ತೆಗೆದುಕೊಳ್ಳತಕ್ಕದ್ದು. ಅವರು ಸೊತ್ತುಗಳನ್ನು ಮಾರಾಟ ಮಾಡಿಸಬಹುದು ಇಲ್ಲವೆ ಬೇರೆ ರೀತಿಯಲ್ಲಿ ಸೊತ್ತುಗಳು ಹಣದ ರೂಪಕ್ಕೆ ಬರುವಂತೆ ಮಾಡತಕ್ಕದ್ದು. ಈ ಸಾಮಾನ್ಯ ಅಧಿಕಾರವಲ್ಲದೆ ಲಿಕ್ವಿಡೇಟರನಿಗೆ ವಿಶಿಷ್ಟ ಅಧಿಕಾರಗಳೂ ಇವೆ. ಅವು ಯಾವು ಎಂಬುದರ ವಿವರವನ್ನು ಇಲ್ಲಿ ಕೊಡಲಾಗಿದೆ.

ಲಿಕ್ವಿಡೇಟರನ ಈ ಅಧಿಕಾರಿಗಳು ರಜಿಸ್ಟ್ರಾರನ ನಿಯಂತ್ರಣದ ಅಂಕಿತವಾಗಿರುವುವು. ಲಿಕ್ವಿಡೇಟರನನ್ನು ನೇಮಕ ಮಾಡಿದವನು ರಜಿಸ್ಟ್ರಾರನು. ಲಿಕ್ವಿಡೇಟರನ ಮೇಲೆ ನಿಯಂತ್ರಣವಿಡುವ ಅಧಿಕಾರ ರಜಿಸ್ಟ್ರಾರನದು.

ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂದು ಹುಕುಮು ಮಾಡಲ್ಪಟ್ಟ ನಂತರ ಲಿಕ್ವಿಡೇಟರನ ನೇಮಕವಾಗಿ ಅವನು ಅಧಿಕಾರ ಸ್ವೀಕರಿಸಿದ ನಂತರ ಸಂಘಕ್ಕೆ ತನ್ನ ಮೂಲ ಅಸ್ತಿತ್ವವುಳಿವುದಿಲ್ಲ. ಸಂಸ್ಥೆಯ ಸ್ವರೂಪ ಉಳಿದರೂ ಅದರ ಪರವಾಗಿ ದಾವೆ ಮಾಡಬೇಕಾದರೆ ಇಲ್ಲವೆ ಪ್ರತಿವಾದಿಯಾಗಬೇಕಾದರೆ, ಲಿಕ್ವಿಡೇಟರನ ಅಧಿಕಾರ ಪದದ ಹೆಸರಿನಿಂದ ಮಾಡಬೇಕಾಗುವುದು. ಲಿಕ್ವಿಡೇಟರನ

ವೈಯುಕ್ತಿಕ ಹೆಸರಿನಿಂದ ಅಲ್ಲ; ಅಧಿಕಾರ ಪದದ ಹೆಸರಿನಿಂದ ಇಂತಹ ಸಂಘದ ಲಿಕ್ವಿಡೇಟರ ಎಂದು ದಾವೆಯನ್ನು ದಾಖಲ ಮಾಡುವ ಇಲ್ಲವೆ ಪ್ರತಿವಾದಿಯಾಗಿ ಕೆಲಸ ನಡೆಸುವ ಅಧಿಕಾರವು ಉಂಟಾಗುವುದು.

ಸಂಘದ ಸೊತ್ತುಗಳಿಗಾಗಿ ವಂತಿಗೆಯನ್ನು ಯಾವ ಸದಸ್ಯರು, ಹಿಂದಿನ ಸದಸ್ಯರು ಕೊಡಬೇಕು; ಎಷ್ಟು ಕೊಡಬೇಕು, ಎಂಬುದನ್ನು ಕಾಲಕಾಲಕ್ಕೆ ನಿರ್ಧರಿಸುವ ಅಧಿಕಾರ ಲಿಕ್ವಿಡೇಟರನದು. ಮರಣ ಹೊಂದಿದ ಸದಸ್ಯನ ಆಸ್ತಿ, ಇಲ್ಲವೆ ನಾಮಕರಣದ ವ್ಯಕ್ತಿ, ವಾರಸದಾರನು, ಇಲ್ಲವೆ ಕಾಯಿದೇಶೀರ ಪ್ರತಿನಿಧಿಗಳು ಎಷ್ಟು ವಂತಿಗೆ ಕೊಡಬೇಕು; ಎಷ್ಟು ಕೊಡುವುದು ಉಳಿದಿದೆ, ಎಂಬುದನ್ನು ನಿರ್ಧರಿಸುವ ಅಧಿಕಾರ ಲಿಕ್ವಿಡೇಟರನದು. ಈ ವಂತಿಗೆಯೆಂದರೆ ಏನು?

ಸಂಘವು ದುಂಡುಸುತ್ತಲ್ಪಡುವ ಪ್ರಸಂಗ ಬಂದಾಗ ಸದಸ್ಯರ ಹೊಣೆಗಾರಿಕೆ ಎಷ್ಟು ಎಂಬುದು ತಿಳಿಯುವುದು. ಸಂಘವು ನಿಯಮಿತ ಹೊಣೆಗಾರಿಕೆಯದು ಇರುವುದೋ ಅನಿಯಮಿತ ಹೊಣೆಗಾರಿಕೆಯದು ಇರುವುದೋ? ನಿಯಮಿತ ಹೊಣೆಗಾರಿಕೆಯದು ಇರುವಾಗ ಅವರ ಶೇರು ಹಣದ ಮಟ್ಟಿಗೆ ಹೊಣೆಗಾರಿಕೆ. ಇಲ್ಲವೆ ಸಂಘದ ಸೊತ್ತಿಗೆ ವಂತಿಗೆ ಕೊಡುವುದಾಗಿ ಕೈಕೊಂಡ ಹೊಣೆಗಾರಿಕೆ. ಈ ಹೊಣೆಗಾರಿಕೆಯನ್ನು ಪೂರೈಸುವುದು ಸಂಘವು ದುಂಡುಸುತ್ತಲ್ಪಟ್ಟರೆ; ಆಗ ಹೊಣೆಗಾರಿಕೆ ಪೂರೈಸುವ ವಂತಿಗೆ ಕೊಡಬೇಕಾಗುವುದು. ಆ ವಂತಿಗೆಯ ಬಗ್ಗೆ ಈ ಕಲಮಿನಲ್ಲಿ ಹೇಳಿದೆ. ಯಾವ ಸದಸ್ಯನ ಹೊಣೆಗಾರಿಕೆ ಎಷ್ಟು ಎಂಬುದನ್ನು ಕಾಲಕಾಲಕ್ಕೆ ನಿರ್ಧರಿಸುವ ಅಧಿಕಾರ ಲಿಕ್ವಿಡೇಟರನದು;

ಅನಿಯಮಿತ ಹೊಣೆಗಾರಿಕೆಯ ಸಂಘವಾಗಿದ್ದಾಗ ಸಂಘದ ಸದಸ್ಯನ ಹೊಣೆಗಾರಿಕೆಯು ಸಂಘದ ಸೊತ್ತಿನಲ್ಲಿ ಉಂಟಾಗುವ ಕೊರತೆಯ ಮಟ್ಟಿಗೆ ಆಗುವುದು. ಅದಕ್ಕಾಗಿ ಸದಸ್ಯರು ವಂತಿಗೆ ಕೊಡಬೇಕಾಗುವುದು. ಈ ವಂತಿಗೆ ಯಾರು ಎಷ್ಟು ಕೊಡಬೇಕು ಎಂಬುದನ್ನು ಕಾಲಕಾಲಕ್ಕೆ ನಿರ್ಧರಿಸುವ ಅಧಿಕಾರ ಲಿಕ್ವಿಡೇಟರನದು.

ಕಾಲಕಾಲಕ್ಕೆ ನಿರ್ಧರಿಸುವುದೆಂದರೇನು? ಹೊಣೆಗಾರಿಕೆಯು ಸದಸ್ಯರದು ಎಂಬುದು ಸ್ಪಷ್ಟವಾಗಿದೆ. ಸದಸ್ಯರೆಂದರೆ ಇಂದಿನ ಸದಸ್ಯರು, ಹಿಂದಿನ ಸದಸ್ಯರು ಮರಣ ಹೊಂದಿದ ಸದಸ್ಯರು; ಇಂದಿನ ಸದಸ್ಯರು ಶೇರು ಹಣದಲ್ಲಿ ಎಷ್ಟು ಸಲ್ಲಿಸಿದ್ದಾರೆ, ಎಂಬುದನ್ನು ಕಂಡುಹಿಡಿಯಬೇಕಾಗುವುದು. ಸದಸ್ಯರು ಆಗುತ್ತಲೆ ಇರುಹುದು. ಆದ್ದರಿಂದ ಇಂದಿನ ಸದಸ್ಯರ ಹೊಣೆಗಾರಿಕೆಯು ಆ ಸಂಘವು ದುಂಡು ಸುತ್ತಲ್ಪಡುವ ಪ್ರಸಂಗ ಬಂದಾಗ ಎಷ್ಟು ಎಂಬುದೂ ನಿರ್ಣಯಿಸಬೇಕಾಗುವುದು. ಅದರಂತೆ ಹಿಂದಿನ ಸದಸ್ಯರ ಹಾಗೂ ಮರಣ ಹೊಂದಿದ ಸದಸ್ಯರ ಹೊಣೆಗಾರಿಕೆ ಎಷ್ಟು? ಅವರು ಎಷ್ಟು ವಂತಿಗೆ ಕೊಡಬೇಕು ಎಂಬುದನ್ನು ಕಾಲಕಾಲಕ್ಕೆ ನಿರ್ಧರಿಸಬೇಕಾಗುವುದು. ಕಲಮು ೨೫ ರಲ್ಲಿ ಹೇಳಿದ ಮಾತುಗಳನ್ನು

ಲಕ್ಷ್ಯಕ್ಕೆ ತರಬೇಕು. ಹಿಂದಿನ ಸದಸ್ಯನು ಸ್ವತಃ ಹೊಣೆಗಾರನಾಗುವನು; ಮರಣ ಹೊಂದಿದ ಸದಸ್ಯನ ಆಸ್ತಿಯು ಹೊಣೆಗಾರವಾಗಿರುವುದು. ಇವರ ಹೊಣೆಗಾರಿಕೆಯು ಅವರು ಎಂದು ಸದಸ್ಯತ್ವವನ್ನು ಬಿಟ್ಟರೋ ಆ ತಾರೀಖಿಗೆ ಸಂಘದ ಋಣ ಎಷ್ಟು ಇದ್ದಿತೋ ಅಷ್ಟರ ಮಟ್ಟಿಗೆ ಅವರ ಹೊಣೆಗಾರಿಕೆ. ಅಲ್ಲದೆ, ಆ ತಾರೀಖಿನಿಂದ ಮುಂದೆ ಎರಡು ವರುಷಗಳ ವರೆಗೆ ಮಾತ್ರ ಹೊಣೆಗಾರಿಕೆ. ಆದ್ದರಿಂದ ಸಂಘವು ದುಂಡು ಸುತ್ತಲ್ಪಡುವ ತಾರೀಖಿಗೆ ಯಾವ ಮಾದರಿಯ ಸದಸ್ಯನ ಹೊಣೆಗಾರಿಕೆ, ಎಷ್ಟು ಮಟ್ಟಿಗೆ ಇದೆಯೆಂಬುದನ್ನು ನಿರ್ಧರಿಸಬೇಕಾಗುವುದು. ಈ ಎರಡು ವರುಷದ ಕಾಲಾವಧಿಯು ಹಿಂದಿನ ಸದಸ್ಯ ಹಾಗೂ ಮರಣ ಹೊಂದಿದ ಸದಸ್ಯನ ಸಂಬಂಧವಾಗಿ ಇರುವುದರಿಂದ **ಕಾಲ ಕಾಲಕ್ಕೆ** ಎಂಬ ಶಬ್ದದ ಉಪಯೋಗ ಮಾಡಲ್ಪಟ್ಟಿದೆ. ಏಕೆಂದರೆ ಸದಸ್ಯತ್ವವನ್ನು ಬಿಡುವುದು ಸದಸ್ಯನ ಹಕ್ಕು ಆಗಿರುವುದು; ಮರಣವು ಅನಿರೀಕ್ಷಿತವಾದುದು. ಏನೇ ಆದರೂ ಸದಸ್ಯನ ಹೊಣೆಗಾರಿಕೆಯು ಎಷ್ಟು ಎಂಬುದರ ನಿರ್ಣಯ ಆಗಲೇಬೇಕಾಗುವುದು. ಆ ಹೊಣೆಗಾರಿಕೆಯನ್ನು ನಿರ್ಧರಿಸುವುದು ಲಿಕ್ವಿಡೇಟರನ ಅಧಿಕಾರ.

ಈ ಮಾತುಗಳು ಹಿಂದಿನ ಅಧಿಕಾರಿ ಇಲ್ಲವೆ ಇಂದಿನ ಅಧಿಕಾರಿಗಳಿಗೂ ಅನ್ವಯಿಸುವುವು. ವಿಚಾರಣೆ ಇಲ್ಲವೆ ಪರಿಶೀಲನೆ ಇಲ್ಲವೆ ಲೆಕ್ಕ ತಪಾಸಣೆಯಲ್ಲಿ ಅಧಿಕಾರಿಗಳು ಅನಧಿಕೃತವಾದ ಇಲ್ಲವೆ ಕಾಯಿದೆಗೆ ವಿರುದ್ಧವಾದ ವ್ಯವಹಾರಗಳನ್ನು ಮಾಡಿದ್ದರೆ, ಕಲಮು ೬೯ ರ ಪ್ರಕಾರ ಅವರು ತಮ್ಮ ಮೇಲೆ ಬಂದ ಹೊಣೆಗಾರಿಕೆಯ ಸಲುವಾಗಿ ವಂತಿಗೆ ಕೊಡಬೇಕಾಗುವುದು. ಇದನ್ನು ನಿರ್ಧರಿಸುವ ಅಧಿಕಾರವನ್ನು ಲಿಕ್ವಿಡೇಟರನಿಗೆ ಕೊಡಲಾಗಿದೆ.

ಲಿಕ್ವಿಡೇಟರನ ಕಾರ್ಯ ಋಣವಿಮೋಚನ. ಸಂಘದ ಸಾಲಗಳನ್ನು ತೀರಿಸುವುದು. ಸಂಘದ ಸೊತ್ತುಗಳಿಂದ ಅದರ ಋಣವಿಮೋಚನ ಮಾಡುವುದು. ಆದ್ದರಿಂದ ಸಂಘದ ವಿರುದ್ಧ ಮಾಗಣಿಗಳು ಎಷ್ಟು ಇವೆ? ಮಾಗಣಿದಾರರಲ್ಲಿ ಪ್ರಾಥಮಿಕತೆಯ ಹಕ್ಕು ಯಾರಿಗಾದರೂ ಇದೆಯೊ ಹೇಗೆ ಎಂಬುದನ್ನು ವಿಚಾರಿಸಬೇಕಾಗುವುದು. ಯಾವುದೇ ಕರಾರು ಮುಂತಾದ್ದರಿಂದ ಯಾವುದಾದರೂ ಮಾಗಣಿದಾರನಿಗೆ ಪ್ರಾಥಮಿಕತೆಯ ಹಕ್ಕು ಇದ್ದು ಅವನ ಋಣವನ್ನು ಮೊದಲು ತೀರಿಸಬೇಕಾಗಿದ್ದರೆ ಅದನ್ನು ನಿರ್ಧರಿಸಬೇಕಾಗುವುದು. ಈ ಪ್ರಾಥಮಿಕತೆಯನ್ನು ನಿರ್ಧರಿಸುವಾಗ ಈ ಕಾಯಿದೆಯ ಶರತುಗಳ ಅನುಸಾರವಾಗಿ ಅವುಗಳ ಅಂಕಿತವಾಗಿ ನಿರ್ಧರಿಸಬೇಕಾಗುವುದು. ಈ ಸಂಬಂಧವಾಗಿ ಕಲಮು ೩೨, ೩೩, ೩೪ ಹಾಗೂ ೩೫ ರಲ್ಲಿ ಹೇಳಿದ ಸಂಗತಿಗಳನ್ನು ಗಮನಿಸಬೇಕಾಗುವುದು. ಹಾಗೆ ಮಾಗಣಿದಾರರ ಪ್ರಾಥಮಿಕತೆಯ ಹಕ್ಕನ್ನು ನಿರ್ಧರಿಸಿದ ನಂತರ ಅವರಿಗೆ ಸಂಘದ ಸೊತ್ತಿನ ವ್ಯಾಪ್ತಿಯನ್ನು ಅನುಲಕ್ಷಿಸಿ ಪೂರ್ತಿಯಾಗಿ ಇಲ್ಲವೆ ಪ್ರಮಾಣಕ್ಕೆ ತಕ್ಕಂತೆ ಅವರ ಮಾಗಣಿಯನ್ನು ಪೂರೈಸಬಹುದು.

ಈ ಅಧಿಕಾರವು ಲಿಕ್ವಿಡೇಟರನಿಗೆ ಕೊಡಲಾಗಿದೆ. ಮಾಗಣಿಯನ್ನು ನಿರ್ಣಯಿಸು ವಾಗ ಸಂಘವು ದುಂಡು ಸುತ್ತಲ್ಪಡುವ ತಾರೀಖಿಗೆ ಇರುವ ಮಾಗಣಿಗಳು. ಆದ್ದರಿಂದ ಮೊದಲು ಆ ಮಾಗಣಿಯನ್ನು ಅಂದರೆ ಆ ತಾರೀಖಿಗೆ ಇರುವ ಸಾಲದ ಮುಖ್ಯ ಹಣ ಹಾಗೂ ಅದರ ಮೇಲಿನ ಬಡ್ಡಿ ಕೂಡಿ ಆ ತಾರೀಖಿಗೆ ಆಗುವ ಹಣ ಇವನ್ನು ಕೊಟ್ಟ ಮೇಲೆ, ಹೀಗೆ ಎಲ್ಲ ಮಾಗಣಿಗಳನ್ನು ಪೂರೈಸಿದ ಮೇಲೆ ಹೆಚ್ಚಿಗೆ ಹಣ ಉಳಿದಿದ್ದರೆ, ಆ ಹೆಚ್ಚಿಗೆ ಉಳಿದ ಹಣವನ್ನು ದುಂಡು ಸುತ್ತಲ್ಪಟ್ಟ ತಾರೀಖಿನ ನಂತರ ಆಗುವ ಆ ಸಾಲಗಳ ಮೇಲಿನ ಬಡ್ಡಿಯನ್ನು ಕೊಡಲು ಉಪಯೋಗಿಸ ತಕ್ಕದ್ದು. ಈ ಬಡ್ಡಿಯ ದರವನ್ನು ಲಿಕ್ವಿಡೇಟರನು ನಿರ್ಣಯಿಸಬೇಕು. ಆದರೆ ಮೂಲ ಕರಾರಿನಕಿಂತ ಹೆಚ್ಚಿಗೆ ದರದ ಬಡ್ಡಿಯನ್ನು ಕೊಡಲು ಬರುವುದಿಲ್ಲ.

ಋಣವಿಮೋಚನ— ಲಿಕ್ವಿಡೇಟರನ ಕಾರ್ಯಕ್ಕೆ ವೆಚ್ಚವು ಬರುವುದ. ಸಂಘವು ದುಂಡು ಸುತ್ತಲ್ಪಡುವ ಸ್ಥಿತಿಯನ್ನು ನಿರ್ಮಾಣ ಮಾಡಿದವರು ಯಾರು ? ಅದರ ವೆಚ್ಚವನ್ನು ವಹಿಸುವವರು ಯಾರು ? ಆ ವ್ಯಕ್ತಿಗಳು ಯಾರು ಎಂಬುದನ್ನು ನಿರ್ಣಯಿಸುವುದರ ಜತೆಗೆ ಯಾರು ಯಾವ ಪ್ರಮಾಣದಲ್ಲಿ ಈ ಋಣ ವಿಮೋಚನ ಕಾರ್ಯದ ವೆಚ್ಚವನ್ನು ವಹಿಸಬೇಕೆಂಬುದನ್ನು ನಿರ್ಧರಿಸುವ ಅಧಿಕಾರವು ಲಿಕ್ವಿಡೇಟರನದು.

ಯಾರ ಹೊಣೆಗಾರಿಕೆ ಎಷ್ಟು, ಎಂತಹವು, ಎಂಬುದನ್ನು ತಿಳಿಯ ಬೇಕಾದರೆ ಹೊಣೆಗಾರಿಕೆ ಬಂದ ವ್ಯಕ್ತಿಯು ಇಂದಿನ ಸದಸ್ಯನೋ, ಹಿಂದಿನ ಸದಸ್ಯನೋ ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣದ ವ್ಯಕ್ತಿಯೋ ಎಂಬುದನ್ನು ನಿರ್ಧರಿಸ ಬೇಕಾಗುವುದು. ಯಾವ ತಾರೀಖಿಗೆ ಅವರ ಹೊಣೆಗಾರಿಕೆ ಎಷ್ಟು, ಯಾವ ಸ್ವರೂಪದ್ದು ಎಂಬುದನ್ನು ತಿಳಿಯಬೇಕಾದರೆ ಅವರು ಯಾವ ಮಾದರಿಯ ಸದಸ್ಯ ಇಲ್ಲವೆ ಯಾರ ಮೂಲಕ ಅವನಿಗೆ ಹೊಣೆಗಾರಿಕೆ ಬಂದಿದೆ ಎಂಬುದು ತಿಳಿಯ ಬೇಕಾಗುವುದು. ಆದ್ದರಿಂದ ಸದಸ್ಯನ ಸ್ವರೂಪವನ್ನು ನಿರ್ಣಯಿಸುವುದು ಕೂಡ ಲಿಕ್ವಿಡೇಟರನ ಅಧಿಕಾರ.

ಸಂಘದ ವ್ಯವಹಾರವನ್ನು ದುಂಡುಸುತ್ತಲ್ಪಡಬೇಕೆಂಬುದಕ್ಕಾಗಿ ಅವಶ್ಯಕ ವಾಗಿದೆಯೆಂದು ಲಿಕ್ವಿಡೇಟರನಿಗೆ ಕಂಡು ಬಂದ ರೀತಿಯಲ್ಲಿ ಸೊತ್ತುಗಳ ವಸೂಲಿ ಹಾಗೂ ಅದರ ವಿತರಣದ ಬಗ್ಗೆ ನಿರ್ದೇಶನ ಕೊಡುವ ಅಧಿಕಾರ ಅವನಿಗೆ ಇದೆ. ಸೊತ್ತುಗಳನ್ನು ಹಣವಾಗಿ ಪರಿವರ್ತಿಸುವುದು ಒಂದು ದಾರಿ; ಸಾಲಕ್ಕೂ ಸೊತ್ತಿಗೂ ತಳಕು ಹಾಕಿ ಸರಿಪಡಿಸುವುದು ಇನ್ನೊಂದು ದಾರಿ. ಹೀಗೆ ವಸೂಲಿ-ವಿತರಣಕ್ಕಾಗಿ ನಿರ್ದೇಶನ ಕೊಡಲು ಅವನಿಗೆ ಅಧಿಕಾರವಿದೆ.

ಸಂಘವು ದುಂಡು ಸುತ್ತಲ್ಪಡಬೇಕೆಂದು ಹುಕುಮು ಹೊರಡಿಸಲ್ಪಟ್ಟರೆ ಈಗಿದ್ದ ಸದಸ್ಯರು, ಅಧಿಕಾರಿಗಳು, ಕಾರ್ಯವನ್ನು ಮಾಡುವುದನ್ನು ನಿಲ್ಲಿಸ ಬೇಕೆಂದು ಅಧಿಕಾರವನ್ನು ಲಿಕ್ವಿಡೇಟರನಿಗೆ ಕೊಡಬೇಕೆಂದು ಅರ್ಥ. ಯಾಕೆಂದರೆ

ಆ ಸದಸ್ಯರು, ಅಧಿಕಾರಿಗಳು ಸಮರ್ಥ ರೀತಿಯಲ್ಲಿ ಸಂಘವನ್ನು ನಡೆಸಿಕೊಂಡು ಹೋಗಲು ಅಸಮರ್ಥರಾಗಿದ್ದಾರೆಂಬುದಕ್ಕಾಗಿಯೆ ದುಂಡು ಸುತ್ತುವ ಪ್ರಸಂಗ ಉಂಟಾಗಿರುವುದು. ಆದರೆ ಸಂಘದ ಕಾರ್ಯಕ್ಕೆ ಇದರಿಂದ ವ್ಯತ್ಯಯ ಬರಲಾರದು, ದುಂಡು ಸುತ್ತಲ್ಪಡುವ ಕಾರ್ಯವು ಲಾಭದಾಯಕವಾಗಬೇಕೆಂಬುದಕ್ಕಾಗಿ ಆವಶ್ಯಕವಾದ ರೀತಿಯಲ್ಲಿ ಸಂಘದ ವ್ಯವಹಾರವನ್ನು ಮುಂದೆ ನಡೆಯಿಸಲಿಕ್ಕೆ ಲಿಕ್ವಿಡೇಟರನಿಗೆ ಅಧಿಕಾರವಿದೆ. ವ್ಯವಹಾರ ನಿಲ್ಲಿಸಲ್ಪಟ್ಟರೆ ಹೆಚ್ಚಿನ ಹಾನಿಯಾಗುವ ಸಂಭವ ಇರುತ್ತದೆ. ಅದನ್ನು ತಪ್ಪಿಸಲು ವ್ಯವಹಾರವನ್ನು ಮುಂದುವರೆಸಿದರೆ, ಅದು ಲಾಭದಾಯಕವಾದಂತೆ. ಈ ನಿರ್ಣಯವನ್ನು ತೆಗೆದುಕೊಂಡು ವ್ಯವಹಾರ ವನ್ನು ಮುಂದುವರೆಸಲು ಲಿಕ್ವಿಡೇಟರನಿಗೆ ಅಧಿಕಾರವಿದೆ.

ಸುಡುವ ಮನೆಯ ಗಳ ಹಿರಿದುಕೊಳ್ಳಲು ಬರುವವರು ಮನೆಯವರೇ ಆಗ ಬೇಕೆಂದಲ್ಲ. ಕಂಡವರು ಕೈ ಹಾಕಬಹುದಾಗಿದೆ. ಸಂಘವು ದುಂಡು ಸುತ್ತಲ್ಪಡುವ ಸ್ಥಿತಿಗೆ ಬಂದಾಗ ತಾನು ಧನಕೋ ಎಂದು ಬರುವವರಲ್ಲಿ ನಿಜವಾದ ಮಾಗಣಿ ದಾರರೇ ಬರುವರೆಂದು ಹೇಳಲು ಬರುವುದಿಲ್ಲ. ಮಾಗಣಿದಾರನೆಂದು ಹೇಳಿಕೊಂಡು ತನ್ನ ಮಾಗಣಿ ಇದೆಯೆಂದು ತೋರಿಸಿಕೊಂಡು, ಇಂತಹ ಧನಕೋನ ಮೂಲಕ ತನ್ನ ಮಾಗಣಿ ಉಂಟಾಗಿದೆಯೆಂದು ಬಂದವರನ್ನು ಪರಿಶೀಲನೆ ಮಾಡಬೇಕಾಗು ವುದು. ಸಂಘವು ಇಂದು ಇಲ್ಲವೆ ಮುಂದೆ ಹೊಣೆಗಾರವಾಗಬಹುದೆಂದು ಕಂಡು ಬಂದ ಎಲ್ಲ ಮಾಗಣಿಗಳ ಭಾರ ಕಡಿಮೆ ಮಾಡುವುದು ಲಿಕ್ವಿಡೇಟರನ ಕಾರ್ಯ ವಾಗುವುದು. ಅದಕ್ಕಾಗಿ ಅಂತಹ ಜನರೊಂದಿಗೆ ಅವನು ರಾಜಿ ಮಾಡಿಕೊಳ್ಳಲು ಇಲ್ಲವೆ ಬೇರೆ ಯಾವುದಾದರೂ ವ್ಯವಸ್ಥೆ ಮಾಡಿಕೊಳ್ಳಲು ಅಧಿಕಾರ ಇದೆ. ಧನಕೋನೊಡನೆ ರಾಜಿ ಆಗುವುದು ಅದು ನೇರವಾದ ವ್ಯವಹಾರ. ಸಂಘಕ್ಕೆ ಸಾಲಗಾರನು ಇರುವನು. ಧನಕೋನು ಇರುವನು. ಅವರು ತಮ್ಮೊಳಗೆ ಈ ವ್ಯವಹಾರವನ್ನು ಹೊಂದಿಸಿಕೊಳ್ಳಲು ಒಪ್ಪಿದರೆ, ಧನಕೋನ ಮಾಗಣಿಯನ್ನು ಸಾಲಗಾರನ ಹಣಕ್ಕೆ ತಾಳಹಾಕಿ ವಸೂಲಿಯ ಹಾಗೂ ವಿತರಣೆಯ ತೊಂದರೆ ತಪ್ಪಿಸಿಕೊಳ್ಳಲು ಹಾಗೂ ಸಂಘದ ಮೇಲಿನ ಭಾರವನ್ನು ಕಡಿಮೆ ಮಾಡಲು ವ್ಯವಸ್ಥೆ ಮಾಡಬಹುದೆಂದು ಅನ್ನಿಸಿದರೆ, ಆ ರೀತಿ ಮಾಡಲು ಲಿಕ್ವಿಡೇಟರನಿಗೆ ಅಧಿಕಾರವಿದೆ.

ಸಂಘಕ್ಕೆ ಬರಬೇಕಾದ ಹಣ ಇರುವುದು. ಶೇರುಗಳಲ್ಲಿ ಕೊಡಬೇಕಾಗಿದ್ದ ಹಣ; ಸಂಘಕ್ಕೆ ಬರಬೇಕಾಗಿದ್ದ ಸಾಲದ ಹಣ; ಸಂಘವು ಹೊಣೆಗಾರವಾಗಿದ್ದ ಋಣ ಇರುವುದು. ಬರಬೇಕಾದ ಹಣವನ್ನು ವಸೂಲಿ ಮಾಡುವಾಗ ಆ ಸಾಲ ಗಾರರೊಡನೆ ರಾಜಿ ಮಾಡಿಕೊಳ್ಳಲು ಅಧಿಕಾರವಿದೆ. ಕಾಯಿದೆ ಕ್ರಮದಿಂದ ವಸೂಲ ಮಾಡಲು ವೆಚ್ಚ ಹತ್ತುವುದು. ವಿಲಂಬವಾಗುವುದು. ವೆಚ್ಚ, ವಿಲಂಬ ವನ್ನು ತಪ್ಪಿಸಲು ಸುಲಭವಾಗಿ ವಸೂಲ ಮಾಡಿ ಕೊಳ್ಳಲು ರಾಜಿ ಆಗುವುದು,

ಲಾಭದಾಯಕವೆಂದು ಲಿಕ್ವಿಡೇಟರನಿಗೆ ಕಂಡುಬಂದರೆ ಅವನು ರಾಜಿ ಮಾಡಿಕೊಳ್ಳಲು ಅಧಿಕಾರವಿದೆ.

ಈ ಮಾಗಣಿಗಳು ಎಂತಹವು? ಇಂದಿನ ಇಲ್ಲವೆ ಮುಂದಿನ ಮಾಗಣಿಗಳು ನಿಶ್ಚಿತ ಇಲ್ಲವೆ ಯಾವುದೊಂದು ಘಟನೆಯ ಮೇಲೆ ಅವಲಂಬಿತ; ಇರುವ ಇಲ್ಲವೆ ಇರುವದೆಂದು ತಿಳಿದ; ಈ ರೀತಿಯಾಗಿ ಹೇಳಿದಾಗ, ಎಂತಹದೇ ಮಾಗಣಿ ಇರಲಿ, ಅದು ಮಾಗಣಿ ಎಂಬ ಹಾಗೆ ಇದ್ದರೆ ಸಾಕು ಎಂಬ ಅಭಿಪ್ರಾಯವಾಗುವುದು. ಈ ಮಾಗಣಿಗಳು ಯಾರ ನಡುವೆ ಇರುವಂತಹವು? ಸಂಘವು ಹಾಗೂ ವಂತಿಗೆದಾರನ ನಡುವೆ, ಇಲ್ಲವೆ ವಂತಿಗೆದಾರನೆಂದು ಆಪಾದಿತನ ನಡುವೆ, ಇಲ್ಲವೆ ಸಹಕಾರಿ ಸಂಘಕ್ಕೆ ತಾನು ಹೊಣೆಗಾರನಾಗಿರಬಹುದೆಂದು ಹೆದರಿದ ವ್ಯಕ್ತಿಯ ನಡುವೆ ಇವರ ನಡುವೆ ಉಂಟಾದ ಬೇಡಿಕೆ, ಸಾಲ, ಬೇಡಿಕೆಯ ಹೊಣೆಗಾರಿಕೆ, ಸಾಲವಾಗಿ ಪರಿಣಮಿಸುವ ಹೊಣೆಗಾರಿಕೆ, ಇದ್ದರೆ ಆ ಬಗ್ಗೆ ರಾಜಿ ಮಾಡಿಕೊಳ್ಳಲು ಲಿಕ್ವಿಡೇಟರನಿಗೆ ಅಧಿಕಾರವಿದೆ. ಇದಲ್ಲದೆ ಸಂಘದ ಸೊತ್ತುಗಳಿಗೆ ಸಂಬಂಧವಾದ ಇಲ್ಲವೆ ದುಂಡು ಸುತ್ತಲ್ಪಡುವ ವಿಷಯಕ್ಕೆ ಸಂಬಂಧವಾದ ಎಲ್ಲ ಪ್ರಶ್ನೆಗಳ ಬಗ್ಗೆ ಒಪ್ಪಿತವಾಗಬಹುದಾದ ಕರಾರಿನ ಮೇಲೆ ರಾಜಿ ಮಾಡಿಕೊಳ್ಳುವ ಅಧಿಕಾರ ಅವನಿಗೆ ಇದೆ. ಹಾಗೆ ರಾಜಿಯಾಗಿ ಯಾರಿಂದಲಾದರೂ ಹಣ ಪಡೆದರೆ ಅವರಿಗೆ ಪಾವತಿ ಕೊಟ್ಟು ಅವರ ಋಣವಿಮೋಚನ ಮಾಡುವ ಅಧಿಕಾರ ವಿದೆ.

ಈ ಎಲ್ಲ ಬಗೆಯ ಅಧಿಕಾರದ ವಿವರ ನೋಡಿದರೆ, ಲಿಕ್ವಿಡೇಟರನಿಗೆ ತನ್ನ ಕಾರ್ಯ ನಡೆಸಿ ಸಂಘವನ್ನು ಋಣವಿಮೋಚನ ಮಾಡಲು ಆವಶ್ಯಕವಾದ ಎಲ್ಲ ಅಧಿಕಾರಗಳೂ ಇವೆಯೆಂಬುದು ಸ್ಪಷ್ಟವಾಗುವುದು. ಅಧಿಕಾರದ ಉಪಯೋಗ ಮಾಡುವಾಗ ಅದರಿಂದ ಸಂಘಕ್ಕೆ ಹಿತವಾಗುವುದು, ಅದರ ಋಣವಿಮೋಚನವಾಗುವುದು, ಹಾಗೂ ದುಂಡು ಸುತ್ತಲ್ಪಡುವ ಕೆಲಸವು ಸರಳವಾಗಿ ಆಗುವುದು, ಎಂಬುದನ್ನು ಲಕ್ಷಕ್ಕೆ ತಂದಿರಬೇಕೆಂಬ ಹಾಗೆ ಸೂಚನೆ ಅಡಕವಾಗಿದೆ.

ತನಗೆ ಬಂದ ಅಧಿಕಾರವನ್ನು ಉಪಯೋಗಿಸಿ ಲಿಕ್ವಿಡೇಟರನು ಕಾರ್ಯಮಾಡಿ ಸಹಕಾರಿ ಸಂಘದ ವ್ಯವಹಾರವನ್ನು ದುಂಡು ಸುತ್ತಿದ ನಂತರ ಅವನು ಆ ಬಗ್ಗೆ ಒಂದು ವರದಿಯನ್ನು ಸಿದ್ಧಮಾಡಿ ರಜಿಸ್ಟ್ರಾರನಿಗೆ ಕಳಿಸತಕ್ಕದ್ದು. ಮತ್ತು ತಾನು ಮಾಡಿದ ಕಾರ್ಯದ ಕಾಲಾವಧಿಯಲ್ಲಿ ತನ್ನ ಕಡೆಗೆ ಬಂದಿದ್ದ ಸಂಘದ ಎಲ್ಲ ದಾಖಲೆ ಪತ್ರಗಳನ್ನು ರಜಿಸ್ಟ್ರಾರನು ಹೇಳುವ ಸ್ಥಳದಲ್ಲಿ ಭದ್ರವಾಗಿ ಇಡತಕ್ಕದ್ದು. ಆಗ ಲಿಕ್ವಿಡೇಟರನ ಕಾರ್ಯವು ಮುಗಿದಂತೆ ಆಗುವುದು.

## ೭೫. ಸಹಕಾರಿ ಸಂಘದ ನೋಂದಣಿಯ ರದ್ದತಿ

ಕಲಮು ೭೨ ರನ್ವಯವಾಗಿ ಸಹಕಾರಿ ಸಂಘದ ಸಂಬಂಧವಾಗಿ ದುಂಡು ಸುತ್ತಲ್ಪಡಬೇಕೆಂಬ ಹುಕುಮು ಮಾಡಲ್ಪಟ್ಟಿರುವಾಗ, ಇಂತಹ ಹುಕುಮಿನ

ತಾರೀಖಿನಿಂದ ಎರಡು ತಿಂಗಳ ವರೆಗೆ ಲಿಕ್ವಿಡೇಟರನು ಕಲಮು ೭೩ ರನ್ವಯ ಆಗಿ ವಾಗಿ ನೇಕಮ ಮಾಡಲ್ಪಟ್ಟಿರದಿದ್ದರೆ, ಇಲ್ಲವೆ ಅಪೀಲು ದಾಖಲ ಮಾಡಲ್ಪಟ್ಟಿದ್ದರೆ, ಅಪೀಲಿನಲ್ಲಿ ಹುಕುಮು ಸ್ಥಿರೀಕೃತವಾದ ತಾರೀಖಿನಿಂದ ಇಲ್ಲವೆ ಕಲಮು ೭೩ ರನ್ವಯವಾಗಿ ಯಾವ ಸಹಕಾರಿ ಸಂಘದ ವ್ಯವಹಾರಗಳ ಸಂಬಂಧವಾಗಿ ಲಿಕ್ವಿಡೇಟರನು ನೇಮುಕ ಮಾಡಲ್ಪಟ್ಟಿರುವನೋ ಆ ಸಂಘದ ವ್ಯವಹಾರಗಳು ದುಂಡುಸುತ್ತಲ್ಪಟ್ಟಿದ್ದರೆ, ಆ ಸಂಘದ ನೋಂದಣಿಯು ರದ್ದಾದ ಬಗ್ಗೆ ರಜಿಸ್ಟ್ರಾರನು ಹುಕುಮನ್ನು ಮಾಡತಕ್ಕದ್ದು ಮತ್ತು ಆ ಸಂಘವು ಮುರಗಡೆ ಮಾಡಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವುದು ಮತ್ತು ಇಂತಹ ರದ್ದತಿಯು ಹುಕುಮಿನ ತಾರೀಖಿನಿಂದ ಅದು ಸಂಸ್ಥೀಕೃತ ಸಂಸ್ಥೆಯೆಂದು ಅಸ್ತಿತ್ವವಿಲ್ಲದಾಗತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ನೋಂದಣಿಯಾದ ನಂತರ ಅಸ್ತಿತ್ವದಲ್ಲಿ ಬರುವುದು. ಕಲಮು ೮ ರ ಪ್ರಕಾರ ಅದಕ್ಕೆ ನೋಂದಣಿ ಸರ್ಟಿಫಿಕೇಟು ದೊರೆತಿರುವುದು, ಈ ನೋಂದಣಿ ಸರ್ಟಿಫಿಕೇಟು ರದ್ದಾಗುವ ತನಕ ಸಂಘವು ಅಸ್ತಿತ್ವದಲ್ಲಿ ಉಳಿಯುವುದು. ಆದ್ದರಿಂದ ನೋಂದಣಿಯ ರದ್ದತಿಯ ಹುಕುಮು ಕೆಲ ಸಂದರ್ಭದಲ್ಲಿ ಹೊರಡಿಸಬೇಕಾಗುವುದು. ಸರ್ಟಿಫಿಕೇಟದ ರದ್ದತಿಯ ಬಗ್ಗೆ ಕಲಮು ೧೫ ಹೇಳುವುದು.

ಕಲಮು ೭೫ ರ ಪ್ರಕಾರ ನೋಂದಣಿಯು ರದ್ದಾಗಬೇಕಾದರೆ ಅದಕ್ಕಿಂತ ಮೊದಲು ಆ ಸಂಘದ ಬಗ್ಗೆ ದುಂಡುಸುತ್ತಲ್ಪಡುವ ಹುಕುಮು ಆಗಿರಬೇಕು. ಆಗ ಯಾವ ಪರಿಸ್ಥಿತಿಯಲ್ಲಿ ನೋಂದಣಿ ರದ್ದತಿಯ ಹುಕುಮನ್ನು ರಜಿಸ್ಟ್ರಾರನು ಮಾಡಬೇಕೆಂಬುದನ್ನು ಈ ೭೫ ನೆಯ ಕಲಮು ಹೇಳುವುದು.

ಕಲಮು ೭೨ ರ ಪ್ರಕಾರ ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂದು ಹುಕುಮು ಮಾಡಲ್ಪಟ್ಟಿರಬೇಕು. ಮತ್ತು ಆ ನಂತರ-ಅಂದರೆ ಆ ಹುಕುಮಿನ ತಾರೀಖಿನ ನಂತರ ಎರಡು ತಿಂಗಳ ವರೆಗೆ ಲಿಕ್ವಿಡೇಟರನು ಕಲಮು ೭೩ ರ ಪ್ರಕಾರ ನೇಮಿಸಲ್ಪಡದಿದ್ದರೆ ಆಗ ರಜಿಸ್ಟ್ರಾರನು ಆ ಸಂಘದ ನೋಂದಣಿಯನ್ನು ರದ್ದು ಮಾಡುವ ಹುಕುಮನ್ನು ಮಾಡತಕ್ಕದ್ದು. ಇದು ಒಂದು ಮಾದ್ಗರಿಯ ಪರಿಸ್ಥಿತಿ.

ಕಲಮು ೭೨ ರ ಪ್ರಕಾರ ದುಂಡುಸುತ್ತಲ್ಪಡಬೇಕೆಂಬ ಹುಕುಮು ಮಾಡಲ್ಪಟ್ಟಿರಬೇಕು. ಆ ಹುಕುಮಿನ ಮೇಲೆ ಅಪೀಲು ಮಾಡಲ್ಪಟ್ಟಿರಬೇಕು. ಆಪೀಲಿನಲ್ಲಿ ಆ ಹುಕುಮು ಸ್ಥಿರೀಕರಿಸಲ್ಪಟ್ಟಿರಬೇಕು. ಅಂದಾಗ ರಜಿಸ್ಟ್ರಾರನು ಆ ಸಂಘದ ನೋಂದಣಿಯನ್ನು ರದ್ದಮಾಡುವ ಹುಕುಮನ್ನು ಮಾಡತಕ್ಕದ್ದು. ಇದು ಎರಡನೆಯ ಪರಿಸ್ಥಿತಿ.

ಕಲಮು ೭೨ ರ ಪ್ರಕಾರ ದುಂಡುಸುತ್ತಲ್ಪಡಬೇಕೆಂಬ ಹುಕುಮು ಮಾಡಲ್ಪಟ್ಟಿರಬೇಕು. ಕಲಮು ೭೩ರ ಪ್ರಕಾರ ಲಿಕ್ವಿಡೇಟರನ ನೇಮುಕ ಮಾಡಲ್ಪಟ್ಟಿರಬೇಕು. ಆ ಲಿಕ್ವಿಡೇಟರನಿಂದ ಆ ಸಂಘದ ವ ವಹಾರಗಳು ದುಂಡುಸುತ್ತಲ್ಪಟ್ಟಿರಬೇಕು.

ಅಂದರೆ ಲಿಕ್ವಿಡೇಟರನ ಕಾರ್ಯವು ಮುಗಿದು ಅವನು ರಜಿಸ್ಟ್ರಾರನಿಗೆ ತನ್ನ ವರದಿ ಒಪ್ಪಿಸಿದ ನಂತರ, ರಜಿಶ್ಟ್ರಾರನು ಆ ಸಂಘದ ನೋಂದಣಿಯ ರದ್ದತಿಯ ಹುಕುಮನ್ನು ಮಾಡಬೇಕು. ಇದು ಮೂರನೆಯ ಪರಿಸ್ಥಿತಿ.

ಹೀಗೆ ಪರಿಸ್ಥಿತಿ ಉಂಟಾಗಿ ನೋಂದಣಿಯ ರದ್ದತಿಯ ಹುಕುಮನ್ನು ರಜಿಸ್ಟ್ರಾರನು ಮಾಡಿದ ಮೇಲೆ ಆ ಸಂಘವು ಮುರಗಡೆ ಮಾಡಲ್ಪಟ್ಟಂತೆ ಎಂದು ಗಣಿಸತಕ್ಕದ್ದು ಮತ್ತು ಅಂತಹ ರದ್ದತಿಯ ಹುಕುಮಿನ ತಾರೀಖಿನಿಂದ ಆ ಸಂಘಕ್ಕೆ ಸಂಸ್ಥೀಕೃತ ಅಸ್ತಿತ್ವವು ಕಲಮು ೯ ರ ಪ್ರಕಾರ ಒದಗಿಬಂದುದು ಇಲ್ಲದಂತಾಗುವುದು. ಅಂದರೆ ಆ ಸಂಘವು ತನ್ನ ಅಸ್ತಿತ್ವವನ್ನು ಪೂರ್ತಿ ಕಳೆದು ಕೊಂಡಂತೆ. ನೋಂದಣಿ ರದ್ದಾಗುವುದು; ಸಂಸ್ಥೀಕೃತ ಅಸ್ತಿತ್ವವು ಇಲ್ಲದಾಗಿರುವುದು. ಅಂದಮೇಲೆ ಸಂಘವು ಇಲ್ಲದಾದಂತೆ; ಹೇಳಲು ಹೆಸರು ಕೂಡ ಇಲ್ಲದಂತೆ ಆಗುವುದು.

## ಪ್ರಕರಣ: ೧೧ ಲ್ಯಾಂಡ ಮಾರ್ಗೇಜ ಬ್ಯಾಂಕುಗಳು

### ೭೬. ವ್ಯಾಖ್ಯೆಗಳು

ಈ ಪ್ರಕರಣದಲ್ಲಿ—

(ಅ) ‘ ಬೋರ್ಡು ’ ಎಂದರೆ, ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನ ಡಾಯರೆಕ್ಟರರ ಬೋರ್ಡ ಎಂದು ಅರ್ಥವಾಗುತ್ತದೆ.

(ಬ) “ ಲ್ಯಾಂಡ ಮಾರ್ಗೇಜ ಬ್ಯಾಂಕ ” ಎಂದರೆ, ಈ ಕಾಯಿದೆಯನ್ವಯವಾಗಿ ನೋಂದಾಯಿಸಲಾದ ಇಲ್ಲವೆ ನೋಂದಾಯಿಸಲಾಗಿದೆಯೆಂದು ಗಣಿಸಲಾದ ಮತ್ತು ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನ ಸದಸ್ಯನೆಂದು, ಆಗಿರುವ ಸಹಕಾರಿ ಲ್ಯಾಂಡ ಮಾರ್ಗೇಜ ಬ್ಯಾಂಕು ಎಂದು ಅರ್ಥವಾಗುತ್ತದೆ.

(ಕ) ‘ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕ ’ ಎಂದರೆ ಮೈಸೂರ ಸೆಂಟ್ರಲ್ ಕೋಆಪರೇಟಿವ್ ಲ್ಯಾಂಡಮಾರ್ಗೇಜ ಬ್ಯಾಂಕ, ಲಿಮಿಟೆಡ್, ಎಂದು ಅರ್ಥವಾಗುತ್ತದೆ.

(ಡ) ‘ ಧರ್ಮದರ್ಶಿ ’ ಎಂದರೆ, ಕಲಮು ೭೭ ರಲ್ಲಿ ಹೇಳಲಾದ ಟ್ರಸ್ಟೀ (ಧರ್ಮದರ್ಶಿ) ಎಂದು ಅರ್ಥವಾಗುತ್ತದೆ.

### ವಿವೇಚನೆ

ಇಲ್ಲಿ ಕೆಲವೊಂದು ವ್ಯಾಖ್ಯೆ ಕೊಡಲಾಗಿದೆ. ವ್ಯಾಖ್ಯೆ ಮಾಡಲಾದ ಶಬ್ದಗಳು ಆ ಶಬ್ದಗಳಿಂದಲೇ ಗುರುತಿಸಲು ಯೋಗ್ಯವಾಗಿರುವಷ್ಟು ಸರಳವಾಗಿವೆ. ಆದರೆ ಕಾಯಿದೆಯಲ್ಲಿ ಸಂದಿಗ್ಧತೆಯು ಇರಬಾರದೆಂದು ಅವುಗಳ ವ್ಯಾಖ್ಯೆಯನ್ನು ಕೊಡಲಾಗಿದೆ.

ಈ ಕಾಯಿದೆಯು ಮೈಸೂರ ಸಹಕಾರಿ ಸಂಘಗಳ ಕಾಯಿದೆ ಎಂದು ಹೆಸರು ಪಡೆದಿದೆ. ಇದು ಇದೇ ರಾಜ್ಯಕ್ಕೆ ಅನ್ವಯಿಸುವುದು. ಈ ಕಾಯಿದೆಯ ಪ್ರಾದೇಶಿಕ

ಅಧಿಕಾರವು ಈ ರಾಜ್ಯದ ಪ್ರಾದೇಶಿಕ ಮಿತಿಗೆ ಬಂಧಿತವಾದುದು. ಆದ್ದರಿಂದ ಇಲ್ಲಿ ಬರುವ ಸಂಗತಿಗಳು ಈ ರಾಜ್ಯಕ್ಕೆ ಮಾತ್ರ ಸಂಬಂಧಪಟ್ಟವು.

ರಾಜ್ಯದಲ್ಲಿ ಒಂದು ಕೇಂದ್ರ ಲ್ಯಾಂಡ ಮಾರ್ಗೇಜ ಬ್ಯಾಂಕು ಎಂದು ಇರುವುದು. ಅದರ ಸದಸ್ಯರಾಗಿ ಅನೇಕ ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ಇರುವುವು. 'ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು' ಎಂದರೆ ಮೈಸೂರ ಕೇಂದ್ರ ಸಹಕಾರಿ ಲ್ಯಾಂಡ ಮಾರ್ಗೇಜ ಬ್ಯಾಂಕ ಲಿಮಿಟೆಡ್ ಎಂದು ಅದರ ಪೂರ್ಣ ಹೆಸರು ಕೊಟ್ಟು ಗುರುತಿಸಲಾಗಿದೆ. ಬರಿಯೆ 'ಲ್ಯಾಂಡ ಮಾರ್ಗೇಜ ಬ್ಯಾಂಕು' ಎಂದರೆ ಸಹಕಾರಿ ಲ್ಯಾಂಡ ಮಾರ್ಗೇಜ ಬ್ಯಾಂಕು. ಅದು ಈ ಕಾಯಿದೆಯನ್ವಯವಾಗಿ ನೋಂದಾಯಿಸಲ್ಪಟ್ಟಿದ್ದು ಇಲ್ಲವೆ ನೋಂದಾಯಿಸಲಾಗಿದೆಯೆಂದು ಗಣಿಸಲ್ಪಟ್ಟಿದ್ದು ಮತ್ತು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಸದಸ್ಯವಾಗಿದ್ದದ್ದು.

'ಬೋರ್ಡ' ಎಂದು ಹೇಳಿದಾಗ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಡಾಯರೆಕ್ಟರರ ಬೋರ್ಡು. "ಧರ್ಮದರ್ಶಿ" ಎಂದಾಗ ಕಲಮು ೭೭ ರಲ್ಲಿ ಹೇಳಿದ ಧರ್ಮದರ್ಶಿ ಎಂದು, ಈ ಶಬ್ದಗಳಿಗೆ ಮಿತವಾದ ಅರ್ಥವನ್ನು ಕೊಡಲಾಗಿದೆ.

ಈ ಎಲ್ಲ ವ್ಯಾಖ್ಯೆಗಳು ಇಲ್ಲವೆ ಅರ್ಥಗಳು ಕೇವಲ ಈ ಪ್ರಕರಣದಲ್ಲಿ ಆಯಾ ಶಬ್ದಗಳು ಉಪಯೋಗಿಸಲ್ಪಟ್ಟಾಗ ಮಾತ್ರ ಅವುಗಳಿಗೆ ಕೊಟ್ಟ ಅರ್ಥವಾಗುವುದು, ಎಂಬುದನ್ನು ತಿಳಿಯಬೇಕು. ಅಲ್ಲದೆ ಅವು ಸಹಕಾರಿ ಸಂಸ್ಥೆಗಳೆಂದೂ ತಿಳಿಯಬೇಕು.

ಈ ಪ್ರಕರಣವು ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಸಂಬಂಧವಾಗಿದೆ. ಇವು ಸಹಕಾರಿ ಬ್ಯಾಂಕುಗಳಲ್ಲದೆ ಭೂಮಿಯ ಒತ್ತಿಯ ಆಧಾರದ ಮೇಲೆ ಇರುವ ಬ್ಯಾಂಕುಗಳು. ಸಹಕಾರ ಹಾಗೂ ಭೂಮಿ ಇವು ಒಂದಕ್ಕೊಂದು ಅನ್ಯೋನ್ಯವನ್ನು ಬೆಳೆಯಿಸತೊಡಗಿವೆ. ಇಂದು ಈ ಅನ್ಯೋನ್ಯಕ್ಕೆ ರಾಷ್ಟ್ರೀಯ ಸ್ವರೂಪ ಬಂದಿದೆ. ಭೂ ಸುಧಾರಣೆಯ ಕಾಯಿದೆ ಹಾಗೂ ಸಹಕಾರಿ ಸಂಘಗಳ ಕಾಯಿದೆಗಳು ಒಂದಕ್ಕೊಂದು ಪೋಷಕವಾಗಿ ಬೆಳೆಯಬೇಕಾಗಿ ಬಂದಿದೆ. ಈ ದೃಷ್ಟಿಯಿಂದ ಗ್ರಾಮಾಂತರಗಳಲ್ಲಿ ಪತ್ತು ಬೆಳೆಸುವ ದೃಷ್ಟಿಯಿಂದ, ಭೂಮಿಯ ಒತ್ತಿಯ ಮೇಲೆ ಪತ್ತು ಪಡೆವ ದೃಷ್ಟಿಯಿಂದ ಈ ಮಾದರಿಯ ಸಹಕಾರಿ ಸಂಘಗಳು ಬಹು ಸಹಾಯಕಾರಿಯಾಗಬಹುದಾಗಿದೆ.

## ೭೭. ಧರ್ಮದರ್ಶಿಯ ನೇಮಕ ಹಾಗೂ ಅವನ ಅಧಿಕಾರಗಳು ಮತ್ತು ಕಾರ್ಯಗಳು

(೧) ಬೋರ್ಡದಿಂದ ಹೊರಡಿಸಲ್ಪಟ್ಟ ಡಿಬೆಂಚರುಗಳನ್ನು ಧಾರಣ ಮಾಡಿದವರಿಗೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು ಮಾಡಲಾದ ಕರ್ತವ್ಯವನ್ನು

ಪೂರ್ತಿಗೊಳಿಸುವುದರ ಆಶ್ವಾಸನ ಪಡೆವ ಉದ್ದೇಶದ ಸಲುವಾಗಿ ರಜಿಸ್ಟ್ರಾರನು ಇಲ್ಲವೆ ಈ ಸಂಬಂಧದಲ್ಲಿ ರಾಜ್ಯ ಸರಕಾರವು ಬೇರೆ ವ್ಯಕ್ತಿಯನ್ನು ನೇಮಕ ಮಾಡಿದಾಗ ಆ ವ್ಯಕ್ತಿಯು ಧರ್ಮದರ್ಶಿಯಾಗಿರತಕ್ಕದ್ದು.

(೨) ಧರ್ಮದರ್ಶಿಯ ಅಧಿಕಾರಗಳು ಹಾಗೂ ಕಾರ್ಯಗಳು ಈ ಕಾಯಿದೆಯ ಶರತುಗಳಿಂದ ಮತ್ತು ಬ್ಯಾಂಕು ಹಾಗೂ ಧರ್ಮದರ್ಶಿಯ ನಡುವೆ ನಿರ್ವಹಿಸಲ್ಪಟ್ಟ, ಕಾಲಕಾಲಕ್ಕೆ ಬೋರ್ಡು ಹಾಗೂ ಧರ್ಮದರ್ಶಿಯ ನಡುವಿನ ಪರಸ್ಪರ ಒಪ್ಪಂದದಿಂದ ತಿದ್ದುಪಡಿ ಮಾಡಲ್ಪಟ್ಟ ದಾಖಲೆ ಪತ್ರದಿಂದ ಶಾಸಿತವಾಗತಕ್ಕದ್ದು.

**ವಿವೇಚನೆ**

ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನ ಬೋರ್ಡು ಡಿಬೆಂಚರುಗಳನ್ನು ಹೊರಡಿಸಿರುವುದು; ಆ ಡಿಬೆಂಚರುಗಳಿಂದ ಬ್ಯಾಂಕಿಗೆ ಕೆಲವು ಜವಾಬುದಾರಿಗಳು ಉಂಟಾಗುವವು. ಇದರಿಂದ ಡಿಬೆಂಚರ ಧಾರಕರಿಗಾಗಿ ಕೆಲವೊಂದು ಕರ್ತವ್ಯ ನೆರವೇರಿಸಬೇಕಾಗುವುದು. ಮಾಡಲೇಬೇಕಾದ ಈ ಕರ್ತವ್ಯಗಳನ್ನು ಪೂರೈಸುವ ಆಶ್ವಾಸನವನ್ನು ಪಡೆಯುವುದರ ಸಲುವಾಗಿ ರಜಿಸ್ಟ್ರಾರನು ಧರ್ಮದರ್ಶಿಯಾಗಬೇಕಾಗುತ್ತದೆ. ರಾಜ್ಯ ಸರಕಾರವು ಬೇರೆ ಯಾರನ್ನಾದರೂ ಈ ಸಂಬಂಧವಾಗಿ ನೇಮಕ ಮಾಡಿದರೆ, ಅವನು ಧರ್ಮದರ್ಶಿಯಾಗತಕ್ಕದ್ದು. ಒಂದೆಡೆಗೆ ಬ್ಯಾಂಕು ಇನ್ನೊಂದೆಡೆಗೆ ಡಿಬೆಂಚರುಧಾರಕರು. ಡಿಬೆಂಚರುಧಾರಕರ ಹಿತ ಸಂರಕ್ಷಣೆಗಾಗಿ ಬ್ಯಾಂಕು ಮಾಡಬೇಕಾದ ಕಾರ್ಯಗಳನ್ನು ಮಾಡಿಸುವುದಕ್ಕಾಗಿ ಒಬ್ಬ ಧರ್ಮದರ್ಶಿಯು ಬೇಕೆಂದು ರಜಿಸ್ಟ್ರಾರನು ಇಲ್ಲವೆ ಸರಕಾರ ನಿಯಮಿತ ವ್ಯಕ್ತಿಯು ಆ ಕೆಲಸ ಮಾಡತಕ್ಕದ್ದು.

ಈ ಧರ್ಮದರ್ಶಿಯ ಕಾರ್ಯಗಳು ಹಾಗೂ ಅಧಿಕಾರಗಳು ಯಾವು? ಈ ಸಂಬಂಧದಲ್ಲಿ ಈ ಕಾಯಿದೆಯಲ್ಲಿ ಹೇಳಿದ ಶರತುಗಳು ದಾರಿ ತೋರುವುವು. ಅಲ್ಲದೆ, ಬ್ಯಾಂಕು ಮತ್ತು ಧರ್ಮದರ್ಶಿ ಇವರ ನಡುವೆ ಒಂದು ಕರಾರು ದಾಖಲೆಪತ್ರ ಮಾಡಲ್ಪಟ್ಟಿರುತ್ತದೆ. ಅದರಲ್ಲಿಯ ಮಾತುಗಳು ದಾರಿ ತೋರುವುವು. ಈ ಕರಾರು ದಾಖಲೆ ಪತ್ರವು ಕಾಲಕಾಲಕ್ಕೆ ತಿದ್ದುಪಡೆ ಮಾಡಲ್ಪಡುವಂತಹದು. ಆದ್ದರಿಂದ ಯಾವ ಕಾಲಕ್ಕೆ ಅಧಿಕಾರ ಹಾಗೂ ಕಾರ್ಯದ ಪ್ರಶ್ನೆ ಬರುವುದೋ ಆಗ ಈ ಕಾಯಿದೆಯ ಶರತುಗಳು ಹಾಗೂ ಆ ಕಾಲಕ್ಕೆ ಇರುವ ಕರಾರು ದಾಖಲೆ ಪತ್ರಗಳು ದಾರಿ ತೋರುವುವು. ಇವುಗಳ ಅಂಕಿತವಾಗಿ ಧರ್ಮದರ್ಶಿಯು ಕಾರ್ಯ ಮಾ ತಕ್ಕದ್ದು ಹಾಗೂ ಅಧಿಕಾರ ನಡೆಸತಕ್ಕದ್ದು.

ಕರಾರು ದಾಖಲೆ ಪತ್ರವನ್ನು ಧರ್ಮದರ್ಶಿಯು ಹಾಗೂ ಬೋರ್ಡು ಕೂಡಿ ಒಪ್ಪಿಕೊಂಡು ಆವಶ್ಯಕ ತಿದ್ದುಪಡೆಯನ್ನು ಕಾಲಕಾಲಕ್ಕೆ ಮಾಡಬಹುದೆಂಬುದನ್ನು ಇಲ್ಲಿ ಹೇಳಿದೆ.

ಧರ್ಮದರ್ಶಿ ( ಟ್ರಸ್ಟೀ ) ಯು ಡಿಬೆಂಚರುಧಾರಕರ ಹಿತ ಸಂರಕ್ಷಣೆಗಾಗಿ ಇರುವನು. ಈ ಮಾತನ್ನು ಲಕ್ಷ್ಯದಲ್ಲಿಡಬೇಕು.

## ೭೮. ಧರ್ಮದರ್ಶಿಯು ವ್ಯಕ್ತಿ ಸಂಸ್ಥೆಯು.

ಕಲಮು ೭೭ ರನ್ವಯವಾಗಿ, ನೇಮಕವಾದ ಧರ್ಮದರ್ಶಿಯು ಡಿಬೆಂಚರುಗಳ ಧರ್ಮದರ್ಶಿಯೆಂಬ ಹೆಸರಿನಿಂದ ವ್ಯಕ್ತಿ ಸಂಸ್ಥೆಯಾಗಿರತಕ್ಕದ್ದು ಮತ್ತು ಹಾಗೆ ಅವನಿಗೆ ನಿರಂತರ ವಾರಸಾ ಹಾಗೂ ಸಾಮಾನ್ಯ ಮುದ್ರೆ ಇರತಕ್ಕದ್ದು ಮತ್ತು ಅವನ ಸಂಸ್ಥಾತ್ಮಕ ಹೆಸರಿನಲ್ಲಿ ಅವನು ದಾವಾ ಮಾಡತಕ್ಕದ್ದು ಹಾಗೂ ಪ್ರತಿವಾದಿಯಾಗತಕ್ಕದ್ದು

**ವಿವೇಚನೆ**

ವ್ಯಕ್ತಿಯುಬೇರೆ, ಸಂಸ್ಥೆಯು ಬೇರೆ. ವ್ಯಕ್ತಿಗಳು ಕೂಡಿ ಸಂಸ್ಥೆಯನ್ನು ನಿರ್ಮಿಸುವರು. ಸಂಸ್ಥೆಯುನಿರ್ಮಿತವಾದಾಗ ಸಂಸ್ಥೆಗೆ ಒಂದು ಸ್ವತಂತ್ರ ಅಸ್ತಿತ್ವ ಬರುವದು. ಅದು ಅದರ ಸಂಸ್ಥಾತ್ಮಕಸ್ವರೂಪ ಸಂಸ್ಥಾತ್ಮಕ ಸ್ವರೂಪದಲ್ಲಿ ಅದರಲ್ಲಿಯ ವ್ಯಕ್ತಿಗಳ ಸಂಬಂಧ ಕಾಣುವುದಿಲ್ಲ. ವ್ಯಕ್ತಿಗಳು ಬರಬಹುದು. ಹೊರಗೆ ಹೋಗಬಹುದು. ಈ ಬರಹೋಗುಗಳು ಸಂಸ್ಥೆಯಿ ಅಸ್ತಿತ್ವಕ್ಕೆ ಧಕ್ಕೆ ತರುವುದಿಲ್ಲ. ಇದೇ ಸಂಸ್ಥೆಗೆ ಇರುವ ನಿರಂತರ ವಾರಸಾ. ಅದಕ್ಕಾಗಿ ಒಂದು ಸಾಮಾನ್ಯ ಮುದ್ರೆ ಇರುವುದು. ಸಂಸ್ಥೆಯ ಹೆಸರು ಹಾಗು ಮುದ್ರೆ ಇವು ಕಾಯದೆಯಲ್ಲಿ ಒಂದು ಅಸ್ತಿತ್ವ ಪಡೆಯುವುವು. ಇದೇ ಅದರ ಸಂಸ್ಥಾತ್ಮಕ ಸ್ವರೂಪ.

ಇಲ್ಲಿ ಅನೇಕ ವ್ಯಕ್ತಿಗಳು ಇದ್ದ ಸಂಸ್ಥೆಯ ನಿರ್ಮಾಣವಾಗಿಲ್ಲ. ವ್ಯಕ್ತಿಯು ಒಬ್ಬನೇ. ಅವನೇ ಸಂಸ್ಥೆಯಾಗಿ ರೂಪುಗೊಂಡಿರುವನು. ಅದಕ್ಕೆ ವ್ಯಕ್ತಿಸಂಸ್ಥೆ ಎಂಬ ಹೆಸರನ್ನು ಉಪಯೋಗಿಸಲಾಗಿದೆ. ಧರ್ಮದರ್ಶಿಯು ನೋಡಲು ವ್ಯಕ್ತಿಯಾಗಿ ಕಂಡರೂ ಅವನು ಒಂದು ಸಂಸ್ಥೆ. ರಜಿಸ್ಟ್ರಾರರು ಇಲ್ಲವೆ ರಾಜ್ಯಸರಕಾರ ನಿಯಮಿತ ವ್ಯಕ್ತಿಯು ಧರ್ಮದರ್ಶಿಯು ಆಗಿರುವನು. ರಜಿಸ್ಟ್ರಾರನ ಸ್ಥಾನದಲ್ಲಿ ವ್ಯಕ್ತಿಗಳು ಬಂದು ಹೋಗಬಹುದು. ಯಾವವ್ಯಕ್ತಿ ಅಲ್ಲಿ ಇರುವನೆಂಬುದು ಮುಖ್ಯವಲ್ಲ. ಅವನು ರಜಿಸ್ಟ್ರಾರನಿದ್ದರೆ ಸಾಕು. ಅದರಂತೆ ಸರಕಾರ ನಿಯಮಿತ ವ್ಯಕ್ತಿಯೂ ಬದಲಾವಣೆ ಆಗುತ್ತಲಿರುತ್ತಾನೆ. ಈ ವ್ಯಕ್ತಿಗಳು ಅಧಿಕಾರ ಸ್ಥಾನದಿಂದ ಬದಲಾಗಿ ಹೋದರೂ ಧರ್ಮದರ್ಶಿತ್ವದ ಸ್ಥಾನವು ಬದಲಾಗದೆ ಉಳಿಯುವುದು. ಇದನ್ನು ಇಲ್ಲಿ ಹೇಳಬೇಕಾಗಿದೆ. ಧರ್ಮದರ್ಶಿಯ ಸಂಸ್ಥೆಯ ರೂಪವು. “ ಡಿಬೆಂಚರುಗಳ ಧರ್ಮದರ್ಶಿ ” ಎಂಬ ಹೆಸರಿನಲ್ಲಿ ಇರುವುದು. ಈ ಹೆಸರು ಸಂಸ್ಥೆ. ಒಂದೇವ್ಯಕ್ತಿಯು ಇರುವುದರಿಂದ ಅದು ವ್ಯಕ್ತಿ ಸಂಸ್ಥೆ. ಅದಕ್ಕೆ ಆ ಹೆಸರಿನಲ್ಲಿ ನಿರಂತರ ವಾರಸಾ ಇದೆ; ಅದಕ್ಕೊಂದು ಸಾಮಾನ್ಯ ಮುದ್ರೆ ಇದೆ. ದಾವಾ ಮಾಡಬೇಕಾದರೆ ಈ ಹೆಸರಿನಲ್ಲಿ ಅಂದರೆ, ಡಿಬೆಂಚರುಗಳ ಧರ್ಮದರ್ಶಿಯೇ ವಾದಿಯು. ಅದರಂತೆ

ಪ್ರತಿವಾದಿಯ ಹೆಸರು ಕಾಣಿಸುವಾಗ ಅದೇ ಹೆಸರನ್ನು ಕಾಣಿಸಬೇಕು. ಅಂದರೆ ರಜಿಸ್ಟ್ರಾರನೆಂದು ಕಾಣಿಸಬಾರದು. ರಜಿಸ್ಟ್ರಾರನಾಗಿರುವ ಇಲ್ಲವೆ ಸರಕಾರ ನಿಯಮಿತ ವ್ಯಕ್ತಿಯಾಗಿರುವ ವ್ಯಕ್ತಿಯ ಹೆಸರನ್ನು ಮಾತ್ರ ಕಾಣಿಸಬಾರದು. ಕಾರ್ಯ ಮಾಡುವವನು ಅವನೇ ಆಗಿದ್ದರೂ ಅವನು ಕಾರ್ಯಮಾಡುವುದು "ಡಿಬೆಂಚರುಗಳ ಧರ್ಮದರ್ಶಿ" ಎಂಬ ಹೆಸರಿನಲ್ಲಿ. ಆ ಹೆಸರು ಇಲ್ಲದೆ ಅವನಿಗೆ ಅಸ್ತಿತ್ವವಿಲ್ಲ. ಅದೇ ಹೆಸರು ಅವನ ಅಸ್ತಿತ್ವವನ್ನು ಸಾರುವುದು. ಈ ಸಂಗತಿಗಳನ್ನು ಲಕ್ಷ್ಯದಲ್ಲಿಡಬೇಕು.

## ೭೯. ಬೋರ್ಡ ದಿಂದ ಡಿಬೆಂಚರುಗಳನ್ನು ಹೊರಡಿಸುವಿಕೆ.

(೧) ಧರ್ಮದರ್ಶಿಯ ಪೂರ್ವಸಮ್ಮತಿಯಿಂದ ಬೋರ್ಡು ಕಾಲಕಾಲಕ್ಕೆ ಅದಕ್ಕೆ ಪ್ರಸಂಗೋಚಿತವೆನ್ನಿಸುವಂತಹ ಕಾಲಾವಧಿಯ ವರೆಗೆ ಇರುವ ಒಂದು ಇಲ್ಲವೆ ಹೆಚ್ಚು ಮೂಲ್ಯದ ಡಿಬೆಂಚರುಗಳನ್ನು ಒತ್ತಿಯ ಆಧಾರದ ಭದ್ರತೆಯ ಮೇಲೆ ಮತ್ತು ಲ್ಯಾಂಡಮಾರ್ಗೇಜ ಬ್ಯಾಂಕುಗಳಿಂದ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಲಾದ ಇಲ್ಲವೆ ಕಲಮು ೮೫ ರ ಶರತುಗಳನ್ವಯವಾಗಿ ಹಸ್ತಾಂತರಿಸಲಾಗಿದೆಯೆಂದು ಗಣಿಸಲಾದ ಇತರ ಸೊತ್ತುಗಳ ಹಾಗೂ ಇಂತಹ ಬ್ಯಾಂಕಿನ ಇತರ ಆಸ್ತಿಗಳ ಭದ್ರತೆಯ ಮೇಲೆ ಹೊರಡಿಸಬಹುದು.

(೨) ಇಂತಹ ಡಿಬೆಂಚರುಗಳಲ್ಲಿ ಅವುಗಳನ್ನು ಹೊರಡಿಸಿದ ತಾರೀಖಿನಿಂದ ಹದಿನೈದು ವರುಷಗಳಕಿಂತ ಹೆಚ್ಚು ಆಗದ ಕಾಲಾವಧಿಯು ಗೊತ್ತು ಮಾಡಲ್ಪಟ್ಟ ಬಗ್ಗೆ ಮಾತು ಇರಬಹುದು, ಹಾಗೆ ನಿಶ್ಚಿತವಾದ ಕಾಲಾವಧಿಯಲ್ಲಿ ಡಿಬೆಂಚರುಗಳು ವಿಮೋಚನ ಯೋಗ್ಯವಾಗಲಾರವು ಎಂಬ ಇಲ್ಲವೆ ವಿಮೋಚನಕ್ಕೆ ಗೊತ್ತು ಮಾಡಿದ ತಾರೀಖಿನಕಿಂತ ಮೊದಲೇ ಯಾವುದೇ ಡಿಬೆಂಚರುಗಳನ್ನು ಯಾವುದೇ ಕಾಲಕ್ಕೆ ಸಂಬಂಧಪಟ್ಟ ಡಿಬೆಂಚರು ಧಾರಕನಿಗೆ ಲೇಖೀಯಾಗಿ ಮೂರು ತಿಂಗಳ ಕಿಂತ ಕಡಿಮೆಯಾಗದಷ್ಟು ನೋಟೀಸು ಕೊಟ್ಟು ಮೊದಲೇ ಹಿಂದಕ್ಕೆ ಪಡೆಯುವ ಬೋರ್ಡಿನ ಹಕ್ಕು ಕಾದಿಡಲಾಗಿದೆ ಎಂಬ ಕರಾರುಗಳನ್ನು ಆ ಡಿಬೆಂಚರುಗಳಲ್ಲಿ ಕಾಣಿಸಬಹುದು.

(೩) ಬೋರ್ಡದಿಂದ ಹೊರಡಿಸಲಾದ ಡಿಬೆಂಚರುಗಳ ಮೇಲಿನ ಒಟ್ಟು ಹಣವು ಮತ್ತು ಯಾವುದೇ ಕಾಲಕ್ಕೆ ಬಾಕಿಯಾಗಿರುವ ಹಣವು ಒಟ್ಟಿನಲ್ಲಿ—

(ಅ) ಒತ್ತಿ ಆಧಾರದ ಮೇಲೆ ಬಾಕಿಯಾಗಿರುವ ರಕಮುಗಳಕಿಂತ ಮತ್ತು ಲ್ಯಾಂಡ ಮಾರ್ಗೇಜ ಬ್ಯಾಂಕುಗಳಿಂದ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಲಾದ ಇಲ್ಲವೆ ಕಲಮು ೮೫ ರ ಶರತುಗಳನ್ವಯವಾಗಿ ಹಸ್ತಾಂತರಿಸಲಾಗಿದೆಯೆಂದು ಗಣಿಸಲಾದ ಹಾಗೂ ಆ ಕಾಲಕ್ಕೆ ಅಸ್ತಿತ್ವದಲ್ಲಿರುವ ಇತರ ಸೊತ್ತುಗಳ ಬೆಲೆಯಕಿಂತ ಹೆಚ್ಚು ಆಗಕಕ್ಕದ್ದಲ್ಲ; ಮತ್ತು

(ಬ) ಮೇಲೆ ಹೇಳಿದ ಒತ್ತಿಗಳ ಅನ್ವಯವಾಗಿ ಕೊಡಲಾದ ರಕಮುಗಳ ಕಿಂತ ಮತ್ತು ಬೋರ್ಡಿನ ಕೈಯಲ್ಲಿ ಇಲ್ಲವೆ ಧರ್ಮದರ್ಶಿಯ ಕೈಯಲ್ಲಿ ಆ ಕಾಲಕ್ಕೆ ಇರುವ ರಕಮುಗಳಕಿಂತ ಹೆಚ್ಚು ಆಗತಕ್ಕದ್ದಲ್ಲ.

**ವಿವೇಚನೆ**

ಡಿಬೆಂಚರುಗಳನ್ನು ಹೊರಡಿಸುವ ಕ್ರಮದ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಡಿಬೆಂಚರು ಎಂದರೇನು ? ಡಿಬೆಂಚರ ಎಂದರೆ ಲೇಖೀಯಾಗಿ ಸಾಲವನ್ನು ಒಪ್ಪಿಕೊಂಡ ದಾಖಲೆ ಪತ್ರ. ಸಾಲವಾಗಿ ತೆಗೆದುಕೊಂಡ ಹಣದ ಬಗ್ಗೆ ಒತ್ತಿ ಪತ್ರ. ಬ್ಯಾಂಕು ಮುಂತಾದ ಕಂಪನಿಗಳು ಹೊರಡಿಸಿದ ಸಾಲಪತ್ರ, ನಿಶ್ಚಿತ ಕಾಲಾವಧಿಯ ವರೆಗೆ ಇರುವ ಸಾಲಪತ್ರಗಳು.

ಇಲ್ಲಿ ಡಿಬೆಂಚರುಗಳನ್ನು ಹೊರಡಿಸುವ ಸಂಸ್ಥೆಯೆಂದರೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು; ತನ್ನ ಬೋರ್ಡಿನ ಮುಖಾಂತರ ಹೊರಡಿಸುವುದು. ಅವುಗಳನ್ನು ಹೊರಡಿಸಲು ಎರಡು ಪೂರ್ವಭಾವಿಯಾದ ಕಾರ್ಯಗಳು ಆಗಿರಬೇಕು. ಒಂದು ಧರ್ಮದರ್ಶಿಯ ಪರವಾನಗಿ ಇರಬೇಕು. ಇನ್ನೊಂದು ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ಭದ್ರತೆಗಾಗಿ ತಮ್ಮ ಅಧಿಕಾರದಲ್ಲಿದ್ದ ಒತ್ತಿಗಳನ್ನು ಮತ್ತು ಇತರ ಆಸ್ತಿ ಸೊತ್ತುಗಳನ್ನು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಬೇಕು. ಇಲ್ಲವೆ ಕಲಮು ೮೫ ರ ಪ್ರಕಾರ ಹಸ್ತಾಂತರಿಸಲಾಗಿದೆಯೆಂದು ಗಣಿಸುವ ಹಾಗೆ ಮಾಡಿರಬೇಕು. ಅಂದಾಗ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು ಡಿಬೆಂಚರುಗಳನ್ನು ಹೊರಡಿಸುವುದು. ಆದ್ದರಿಂದ ಒತ್ತಿಯು ಆಧಾರವಿರುವ ಸಾಲ ಪತ್ರಗಳು ಎಂದರೆ ಡಿಬೆಂಚರ ಎಂಬುದು ಸ್ಪಷ್ಟವಾಗುವುದು.

ಹೀಗೆ ಹೊರಡಿಸಲಾದ ಡಿಬೆಂಚರುಗಳಲ್ಲಿ ಏನೇನು ಇರಬೇಕು? ಅವುಗಳ ಮುಖ ಬೆಲೆಯು ನಮೂದಾಗಿರಬೇಕು. ಅನೇಕ ಬೆಲೆಯ ಡಿಬೆಂಚರಗಳನ್ನು ಹೊರಡಿಸಲು ಬೋರ್ಡಿಗೆ ಅಧಿಕಾರವಿದೆ. ಈ ಸಾಲ ಪತ್ರಗಳು ಎಷ್ಟು ಕಾಲಾವಧಿಯವು ಎಂಬುದನ್ನು ಅದರಲ್ಲಿ ಕಾಣಿಸಿರಬೇಕು. ಈ ಕಾಲಾವಧಿಯು ೧೫ ವರುಷಗಳನ್ನು ಮೀರದೆ ಇರುವ ಯಾವುದೇ ಕಾಲಾವಧಿ ಇರಬಹುದು. ಆದರೆ ಅದು ನಿಶ್ಚಿತವಾಗಿ ಹೇಳಲ್ಪಟ್ಟಿರಬೇಕು. ಹೀಗೆ ಗೊತ್ತುಮಾಡಿದ ಕಾಲಾವಧಿಯಕಿಂತ ಮೊದಲು ಆ ಸಾಲ ಪತ್ರಗಳು ವಿಮೋಚನಾಯೋಗ್ಯವಾದವುಗಳಲ್ಲ ಎಂಬ ಕರಾರೂ ಇರಬಹುದು; ಇಲ್ಲವೆ ಅವುಗಳನ್ನು ನಿಶ್ಚಿತ ಕಾಲಾವಧಿಯಕಿಂತ ಮೊದಲೇ ವಿಮೋಚನಗೊಳಿಸುವ ಹಕ್ಕು ಬೋರ್ಡು ಕಾದಿರಿಸಿಕೊಂಡಿದೆ ಎಂಬುದನ್ನು ಕಾಣಿಸಿರಬೇಕು. ಹೀಗೆ ನಿಶ್ಚಿತ ಕಾಲಾವಧಿಯಕಿಂತ ಮೊದಲೇ ವಿಮೋಚನಗೊಳಿಸಬೇಕೆಂಬ ನಿರ್ಣಯಕ್ಕೆ ಬೋರ್ಡು ಬಂದರೆ ಡಿಬೆಂಚರಧಾರಕನಿಗೆ ನೋಟೀಸು ಕೊಡತಕ್ಕದ್ದು. ಆ ನೋಟೀಸು ೩ ತಿಂಗಳಕಿಂತ ಕಡಿಮೆಯಲ್ಲದಷ್ಟು ಅವಧಿಯಿರುವ ನೋಟೀಸು ಇರಬೇಕು; ಲೇಖೀ ನೋಟೀಸು ಇರತಕ್ಕದ್ದು. ಹೀಗೆ ಕ್ರಮವನ್ನು ಅನುಸರಿಸಿದರೆ

ಮಾತ್ರ ಆದರಲ್ಲಿ ಕಾಣಿಸಿದ ನಿಶ್ಚಿತ ಅವಧಿಯಕಿಂತ ಮೊದಲು ವಿಮೋಚನ ಮಾಡಲು ಬೋರ್ಡಿಗೆ ಹಕ್ಕು ಪ್ರಾಪ್ತವಾಗುವುದು.

ಧರ್ಮದರ್ಶಿಯು ಡಿಬೆಂಚರಗಳನ್ನು ಹೊರಡಿಸಲು ಪರವಾನಗಿ ಕೊಡುವನು; ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ತಮ್ಮ ಹತ್ತಿರ ಇದ್ದ ಒತ್ತಿ ಆಧಾರಗಳನ್ನು ಇತರ ಆಸ್ತಿಗಳನ್ನು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸುವುವು ಆವರೆ ಎಷ್ಟು ರಕಮಿನ ಮಿತಿಯಲ್ಲಿ ಡಿಬೆಂಚರಗಳನ್ನು ಹೊರಡಿಸಬೇಕು ಎಂಬ ಬಗ್ಗೆ ಯಾರು ಹೇಳಬೇಕು ? ಅದನ್ನು ಕಾಯಿದೆಯಿಂದಲೇ ಮಿತಿಯನ್ನು ಹಾಕಲಾಗಿದೆ.

ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ಒತ್ತಿ ಆಧಾರಗಳನ್ನು ಇತರ ಆಸ್ತಿ ಸೊತ್ತುಗಳನ್ನು ಹಸ್ತಾಂತರಿಸಿರುವುವು. ಈ ಒತ್ತಿ ಆಧಾರಗಳ ಹಾಗೂ ಆಸ್ತಿ ಸೊತ್ತುಗಳ ಬೆಲೆಯಕಿಂತ ಹೆಚ್ಚಿಗೆ ಬೆಲೆ ಆಗುವ ಹಾಗೆ ಡಿಬೆಂಚರುಗಳನ್ನು ಹೊರಡಿ ತಕ್ಕದ್ದಲ್ಲ. ಅಂದರೆ ಡಿಬೆಂಚರುಗಳ ಮೇಲಿನ ಬಾಕಿಯಾದ ಹಣವು ಮೇಲೆ ಹೇಳಿದ ಒತ್ತಿ ಆಧಾರದ ಹಾಗೂ ಆಸ್ತಿ ಸೊತ್ತುಗಳ ಬೆಲೆಯಕಿಂತ ಹೆಚ್ಚಿಗೆ ಆಗತಕ್ಕದ್ದಲ್ಲ. ಇದು ಒಂದು ರೀತಿಯ ಮಿತಿ; ಇನ್ನೊಂದು ಹೀಗಿದೆ.

ಒತ್ತಿ ಆಧಾರಗಳ ಅನ್ವಯವಾಗಿ ಕೊಡಲಾದ ರಕಮುಗಳು ಹಾಗೂ ಬೋರ್ಡದ ಕೈಯಲ್ಲಿ ಇಲ್ಲವೆ ಧರ್ಮದರ್ಶಿಯ ಕೈಯಲ್ಲಿ ಆ ಕಾಲಕ್ಕೆ— ಇರುವ ಹಣ ಇವುಗಳು ಕೂಡಿ ಆಗುವ ಹಣದಕಿಂತಲೂ ಡಿಬೆಂಚರಗಳ ಮೇಲೆ ಇರುವ ಬಾಕಿ ಹಣವು ಹೆಚ್ಚು ಆಗತಕ್ಕದ್ದಲ್ಲ. ಅಂದರೆ ಸಾಲಪತ್ರಗಳು ಬೋರ್ಡಿಗೆ ತಲೆಭಾರ ವಾಗಿರಬಾರದು. ತನ್ನ ಹತ್ತಿರ ಇದ್ದ ಹಣದ ಬೆಲೆಯಲ್ಲಿಯೇ ಹೊರಡಿಸಿರಬೇಕು ಎಂದು ಸೂಚನೆ ಕೊಟ್ಟಂತೆ ಇದೆ.

## ೮೦. ಕೆಲ ಆಸ್ತಿಗಳ ಮೇಲೆ ಡಿಬೆಂಚರು ಧಾರಕರ ಅಧಿಕಾರ

ಕೆಳಗಿನವುಗಳ ಮೇಲೆ ಡಿಬೆಂಚರ ಧಾರಕರ ತಾರಕ ( ಪರಿಹಾರ ಯೋಗ್ಯ ) ಅಧಿಕಾರ ಭಾರ ಇರತಕ್ಕದ್ದು.

(ಅ) ಕಲಮು ೭೯ ರ ಉಪಕಲಮು (೩) ರ ವಾಕ್ಯಾವಳಿ (ಅ) ದಲ್ಲಿ ಹೇಳಲಾದ ಎಲ್ಲ ಅಂತಹ ಒತ್ತಿ ಆಧಾರಗಳು ಹಾಗೂ ಸೊತ್ತುಗಳ ಮೇಲೆ;

(ಬ) ಇಂತಹ ಒತ್ತಿ ಆಧಾರಗಳ ಅನ್ವಯವಾಗಿ ಕೊಟ್ಟ ಮತ್ತು ಬೋರ್ಡಿನ ಕೈಯಲ್ಲಿ ಇಲ್ಲವೆ ಧರ್ಮದರ್ಶಿಯ ಕೈಯಲ್ಲಿ ಉಳಿದಿರುವ ರಕಮುಗಳ ಮೇಲೆ; ಮತ್ತು

(ಕ) ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಇತರ ಆಸ್ತಿಗಳ ಮೇಲೆ.

**ವಿವೇಚನೆ**

ಡಿಬೆಂಚರುಗಳನ್ನು ಹೊರಡಿಸುವುದು ಬಂಡವಲನ್ನು ರೂಪಿಸುವುದಕ್ಕಾಗಿ. ಡಿಬೆಂಚರು ಧಾರಕರು ಸದಸ್ಯರಲ್ಲ; ಶೇರುಧಾರಕರಲ್ಲ. ಸದಸ್ಯರು, ಶೇರುಧಾರಕರು ಸಂಸ್ಥೆಯನ್ನು ಕಟ್ಟುವವರು; ಡಿಬೆಂಚರು ಧಾರಕರು ಸಂಸ್ಥೆಯ ಹೊರಗೆ ಇದ್ದು

ಸಂಸ್ಥೆಗೆ ನೆರವಾಗುವವರು. ಸಂಸ್ಥೆಯು ಹೊರಡಿಸುವ ಡಿಬೆಂಚರುಗಳಿಗೆ ಆಧಾರವಾಗಿ ತನ್ನ ಹತ್ತಿರ ಆಸ್ತಿಗಳನ್ನು ಇಟ್ಟುಕೊಂಡಿರಬೇಕೆಂದು ಹೇಳಲಾಗಿದೆ. ಆ ಆಸ್ತಿಯ ಆಧಾರದ ಮೇಲೆ, ಅಷ್ಟು ಮಿತಿಯ ಮಟ್ಟಿಗೆ ಡಿಬೆಂಚರುಗಳನ್ನು ಹೊರಡಿಸಬಹುದೆಂದು ಕಲಮು ೭೯ ರಲ್ಲಿ ಹೇಳಿದೆ; ಡಿಬೆಂಚರುಧಾರಕರಿಗೆ ತಮ್ಮ ಹಣದ ಪರಿಹಾರಕ್ಕೆ ಯೋಗ್ಯವಾದ ಆಧಾರ ಏನು ಎಂಬುದನ್ನು ಇದರಲ್ಲಿ ಹೇಳಿ ಯಾವ ಸಂಸ್ಥೆಯು ಡಿಬೆಂಚರುಗಳನ್ನು ಹೊರಡಿಸುವುದೋ ಅದರ ಆಸ್ತಿಸೊತ್ತುಗಳ ಮೇಲೆ ಡಿಬೆಂಚರುಧಾರಕರ ಅಧಿಕಾರ ಭಾರ ಇದೆ ಎಂಬುದಾಗಿ ಈ ಕಲಮು ಹೇಳುವುದು. ಆ ಆಸ್ತಿಗಳು ಯಾವು ಎಂಬುದನ್ನು ಇಲ್ಲಿ ಹೇಳಿದೆ.

ಕಲಮು ೭೯ರ ಉಪಕಲಮು (೩) ರ ವಾಕ್ಯಾವಳಿ (ಅ) ದಲ್ಲಿ ವರ್ಣಿಸಲಾದ ಆಸ್ತಿಗಳ ಮೇಲೆ ಡಿಬೆಂಚರು ಧಾರಕರ ಅಧಿಕಾರ ಭಾರ ಇದೆ. ಒತ್ತಿಯ ಸಂಬಂಧವಾಗಿ ಮರಳಿ ಕೊಡಲಾದ ಹಾಗೂ ಬೋರ್ಡಿನ ಇಲ್ಲವೆ ಧರ್ಮದರ್ಶಿಯ ಕೈಯಲ್ಲಿ ಇರುವ ರಕಮುಗಳ ಮೇಲೆ ಡಿಬೆಂಚರು ಧಾರಕರ ಅಧಿಕಾರ ಭಾರ ಇದೆ. ಇವಲ್ಲದೆ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನ ಇತರ ಆಸ್ತಿಗಳ ಮೇಲೆ ಡಿಬೆಂಚರ ಧಾರಕರ ಅಧಿಕಾರ ಭಾರ ಇದೆ.

ಇಲ್ಲ ಕಾಣಿಸದ ಅಧಿಕಾರ ಭಾರವು ತಾರಕ—ಪರಿಹಾರ ಯೋಗ್ಯವಾದ ಅಧಿಕಾರ ಭಾರ. ಅಂದರೆ ಡಿಬೆಂಚರುಗಳನ್ನು ಹೊರಡಿಸಿದ ಬೋರ್ಡಿನ ಆಧೀನವಾಗಿರುವ ಎಲ್ಲ ಆಸ್ತಿಗಳ ಮೇಲೆ ಸರ್ವಸಾಮಾನ್ಯವಾದ ಅಧಿಕಾರ ಭಾರ. ಅಂದರೆ ಯಾವುದೇ ವಿಶಿಷ್ಟ ಆಸ್ತಿಯ ಮೇಲೆ ಇರುವ ಭಾರವಲ್ಲ. ಎಲ್ಲ ಆಸ್ತಿಯ ಮೇಲೆ ಸರ್ವಸಾಮಾನ್ಯವಾಗಿ ಪರಿಹಾರ ಯೋಗ್ಯವಾದ ಭಾರ. ಯಾವ ನಿರ್ದಿಷ್ಟ ಆಸ್ತಿಯ ಮೇಲೆ ಅಧಿಕಾರ ಭಾರವಿದೆಯೆಂದು ಹೇಳಲು ಬಾರದ್ದರಿಂದ ಅದಕ್ಕೆ ತೇಲುವ ( Floating ) ಅಧಿಕಾರಿಭಾರ-ಬೇಕಾದ ಆಸ್ತಿಯಿಂದ ಪರಿಹಾರ ಪಡೆಯಲು ಯೋಗ್ಯವಾದ ಆಧಿಕಾರಭಾರ ಎಂದು ಅರ್ಥ. ತನ್ನ ಡಿಬೆಂಚರದ ಹಣದ ಸಲುವಾಗಿ ಬೋರ್ಡದ ಆಧೀನವಾಗಿರುವ ಬೇಕಾದ ಆಸ್ತಿಯ ಮೇಲೆ ಡಿಬೆಂಚರ ಧಾರಕನಿಗೆ ಪರಿಹಾರ ಕೊಡುವ ಶಕ್ತಿಯುಳ್ಳ—ತಾರಕ ಅಧಿಕಾರಭಾರ ಅದು.

## ೮೧. ಡಿಬೆಂಚರುಗಳ ಮೂಲ ಹಣದ ಹಾಗೂ ಅದರ ಮೇಲಿನ ಬಡ್ಡಿಯ ಬಗ್ಗೆ ರಾಜ್ಯಸರಕಾರದ ಆಶ್ವಾಸನ.

(೧) ಕಲಮು ೭೯ ರನ್ವಯವಾಗಿ ಹೊರಡಿಸಲಾದ ಡಿಬೆಂಚರುಗಳ ಮೂಲ ಹಣವು ಹಾಗೂ ಅದರ ಮೇಲಿನ ಬಡ್ಡಿಯು ರಾಜ್ಯಸರಕಾರದಿಂದ ಗೊತ್ತುಮಾಡಬಹುದಾದಂತಹ ಮೇಲ್ಮಿತಿಯ ಹಣದ ಸಂಬಂಧವಾಗಿ ಮತ್ತು ಅದು ಯೋಗ್ಯವೆಂದು ತಿಳಿದು ಹಾಕಬಹುದಾದ ಕರಾರುಗಳ ಅಂಕಿತವಾಗಿ ರಾಜ್ಯ ಸರಕಾರದ ಆಶ್ವಾಸನವನ್ನು ಪಡೆದಿರತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಕೊಡಲಾದ ಯಾವುದೇ ಆಶ್ವಾಸನದ ಮೇಲ್ಮಿತಿಯ ಹಣವನ್ನು ರಾಜ್ಯದ ಶಾಸನಸಭೆಗಳ ಯಾವುದೇ ಕಾಯಿದೆ-ಯಂಕಿತವಾಗಿ ರಾಜ್ಯ ಸರಕಾರವು ಹೆಚ್ಚಿಸಬಹುದು.

(೩) ಬೋರ್ಡ ಮತ್ತು ಧರ್ಮದರ್ಶಿಯು ಸಂಗಡ ಆಲೋಚನೆ ಮಾಡಿ ರಾಜ್ಯ ಸರಕಾರವು—

(ಅ) ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ; ಮತ್ತು

(ಬ) ಈ ಸಂಬಂಧದಲ್ಲಿ ರಾಜ್ಯಸರಕಾರವು ಆರಿಸಬಹುದಾದಂತಹ ರಾಜ್ಯದಲ್ಲಿಯ ಮುಖ್ಯ ವೃತ್ತಪತ್ರಗಳಲ್ಲಿ ಮತ್ತು ಭಾರತದ ಇತರ ರಾಜ್ಯಗಳಲ್ಲಿಯ ಮುಖ್ಯ ವೃತ್ತಪತ್ರಗಳಲ್ಲಿ ಹದಿನಾಲ್ಕು ದಿವಸಗಳಿಗೆ ಕಡಿಮೆಯಾಗದಷ್ಟು ಕೊಟ್ಟ ನೋಟೀಸಿನಿಂದ ಅಧಿಕೃತ ಗ್ಯಾಜಿಟದಲ್ಲಿಯ ಪ್ರಕಟನೆಯು ಪ್ರಸಿದ್ಧಿಯಾದ ತಾರೀಖಿನಿಂದ ಆರುತಿಂಗಳ ಒಳಗೆ ಆಗದೆ ಇರುವಂತಹ ನಿರ್ದಿಷ್ಟಪಡಿಸಿದ ತಾರೀಖಿನಿಂದ ಪರಿಣಾಮವಾಗುವಂತೆ ತಾನು ಕೊಟ್ಟ ಆಶ್ವಾಸನವನ್ನು ಮುಂದುವರೆಸದೆ ಇರಬಹುದು ಇಲ್ಲವೆ ಯಾವ ಕರಾರುಗಳ ಅಂಕಿತವಾಗಿ ಅದು ಕೊಡಲ್ಪಟ್ಟಿರುವುದೊ ಆ ಕರಾರುಗಳನ್ನು ತಿದ್ದಬಹುದು.

ಆದರೆ, ಇಂತಹ ಹಿಂತೆಗೆದುಕೊಳ್ಳುವಿಕೆ, ನಿರ್ಬಂಧ ಇಲ್ಲವೆ ತಿದ್ದುಪಡಿ ಪರಿಣಾಮಕಾರಿಯಾಗುವ ತಾರೀಖಿನಕಿಂತ ಮೊದಲು ಹೊರಡಿಸಲಾದ ಯಾವುದೇ ಡಿಬೆಂಚರುಗಳು ಪಡೆದಿರುವ ಆಶ್ವಾಸನವನ್ನು ಈ ಉಪಕಲಮಿನನ್ವಯವಾದ ಯಾವುದೇ ಆಶ್ವಾಸನದ ಹಿಂತೆಗೆದುಕೊಳ್ಳುವಿಕೆಯು, ನಿರ್ಬಂಧವು ಇಲ್ಲವೆ ತಿದ್ದುಪಡೆಯು ಯಾವುದೇ ರೀತಿಯಿಂದ ಬಾಧಿಸತಕ್ಕದ್ದಲ್ಲ.

(೪) ಉಪಕಲಮು (೩) ರಲ್ಲಿ ಹೇಳಿದ ಪ್ರತಿಯೊಂದು ಪ್ರಕಟನೆಯು ಹಾಗೂ ನೋಟೀಸು, ಆಶ್ವಾಸನದ ಮೇಲ್ಮಿತಿಯ ಹಣವು ನಿರ್ಬಂಧಿಸಲ್ಪಡಬೇಕೆಂದಿರುವಾಗ ಇಲ್ಲವೆ ಯಾವ ಕರಾರುಗಳ ಅಂಕಿತವಾಗಿ ಆಶ್ವಾಸನವು ಕೊಡಬರುವುದೋ ಆ ಕರಾರುಗಳು ತಿದ್ದಪಡಿ ಮಾಡಲ್ಪಡಬೇಕೆಂದಿರುವಾಗ ಸಂದರ್ಭಾನುಸಾರವಾಗಿ ನಿರ್ಬಂಧದ ಇಲ್ಲವೆ ತಿದ್ದಪಡೆಯ ವ್ಯಾಪ್ತಿ ಹಾಗೂ ಪರಿಣಾಮದ ಬಗ್ಗೆ ಸ್ಪಷ್ಟವಾಗಿ ಮಂಡಿಸತಕ್ಕದ್ದು.

**ವಿವೇಚನೆ**

ಕಲಮು ೭೯ ರನ್ವಯವಾಗಿ ಡಿಬೆಂಚರುಗಳು ಹೊರಡಿಸಲ್ಪಟ್ಟಿರುವುವು. ಅವುಗಳಿಗಾಗಿ ರಾಜ್ಯಸರಕಾರವು ಆಶ್ವಾಸನವನ್ನು ಕೊಡುವುದು. ಯಾವ ಬಗೆಯಾಗಿ ಆಶ್ವಾಸನವನ್ನು ರಾಜ್ಯಸರಕಾರವು ಕೊಡುವುದು ಎಂಬುದನ್ನು ಈ ಕಲಮು ಹೇಳುವುದು.

ಆಶ್ವಾಸನವನ್ನು ಎರಡು ಪರಿಮಿತಿಯಲ್ಲಿ ರಾಜ್ಯ ಸರಕಾರವು ಕೊಡುವುದು. ಒಂದು ತಾನು ಕೊಡುವ ಆಶ್ವಾಸನದ ಮೇಲ್ಮಿತಿಯ ಹಣವನ್ನು ರಾಜ್ಯಸರಕಾರವು ನಿಶ್ಚಿತ ಮಾಡುವುದು. ಆ ಮಿತಿಯ ವರೆಗಿನ ಹಣದ ಬಗ್ಗೆ ಆಶ್ವಾಸನ ಎಂದು ಹೇಳಿದ ಹಾಗಾಯಿತು. ಸರಕಾರವು ತನಗೆ ಯೋಗ್ಯಕಂಡ ಕೆಲವು ಕರಾರುಗಳನ್ನು ಹಾಕಿ ಆಶ್ವಾಸನ ಕೊಡುವುದು. ಆಶ್ವಾಸನವು ಈ ಕರಾರುಗಳ ಅಂಕಿತ ವಾಗಿರುವುದು.

ಈ ಆಶ್ವಾಸನವು ಯಾತರ ಸಲುವಾಗಿ? ಕಲಮು ೭ರನ್ವಯವಾಗಿ ಹೊರಡಿಸಲಾದ ದಿಬೆಂಚರುಗಳ ಮೂಲ ಹಣ ಹಾಗೂ ಅದರ ಮೇಲಿನ ಬಡ್ಡಿಯ ಸಲುವಾಗಿ ಆಶ್ವಾಸನವು ಸರಕಾರದಿಂದ ಕೊಡಲ್ಪಡುವುದು. ಡಿಬೆಂಚರುಗಳು ಈ ಆಶ್ವಾಸನವನ್ನು ಹೊತ್ತುಕೊಂಡೇ ಹೊರಡಿಸಲ್ಪಡುವುವು.

ತಾನು ಆಶ್ವಾಸನವೆಂದು ಕೊಡುವ ಹಣದ ಮೇಲ್ಮಿತಿಯನ್ನು ಸರಕಾರವು ಹೆಚ್ಚು ಮಾಡಬಹುದಾಗಿದೆ. ಆದರೆ ಅದನ್ನು ಹೆಚ್ಚುಮಾಡುವುದು ರಾಜ್ಯದ ಶಾಸನ ಸಭೆಯ ಯಾವುದೇ ಕಾಯಿದೆಯ ಅಂಕಿತವಾಗಿ ಮಾಡಬೇಕಾಗುವುದು. ಅಂದರೆ ಈ ಕಾಯಿದೆಯನ್ವಯವಾಗಿ ಅಲ್ಲ, ಬೇರೆಯಾವುದೇ ಕಾಯಿದೆಯನ್ವಯವಾಗಿ, ಧನವಿನಿಯೋಗದ ಕಾಯದೆಯಂತಹ ಕಾಯದೆಯ ಅನ್ವಯವಾಗಿ ಮಾಡಬೇಕಾಗುವುದು.

ರಾಜ್ಯಸರಕಾರವು ತಾನು ಕೊಟ್ಟ ಆಶ್ವಾಸನದ ಸಂಬಂಧವಾಗಿ ಹೆಚ್ಚುಕಡಿಮೆ ಮಾಡುವ ಅಧಿಕಾರ ಅದಕ್ಕೆ ಇದೆ. ಆಶ್ವಾಸನವನ್ನು ಮುಂದುವರಿಸದೆ ಇರಬಹುದು. ಮೇಲ್ಮಿತಿಯ ಹಣದ ಬಗ್ಗೆ ನಿರ್ಬಂಧ ಹಾಕಬಹುದು. ಇಲ್ಲವೆ ಕರಾರುಗಳಲ್ಲಿ ತಿದ್ದುಪಡಿ ಮಾಡಬಹುದು. ಈ ಕ್ರಮವನ್ನು ಯಾವುದೊಂದು ನಿರ್ದಿಷ್ಟವಾದ ತಾರೀಖಿನಿಂದ ತೆಗೆದುಕೊಳ್ಳಬಹುದು. ಆದರೆ ಅದಕ್ಕೂ ಮೊದಲು ಸರಕಾರವು ಆ ಬಗ್ಗೆ ಅಧಿಕೃತ ಗ್ಯಾಜೆಟದಲ್ಲಿ ಪ್ರಕಟಿಯನ್ನು ಕೊಡಬೇಕು ಮತ್ತು ರಾಜ್ಯದ ಹಾಗೂ ಭಾರತದ ಬೇರೆ ರಾಜ್ಯಗಳ ಮುಖ್ಯ ವರ್ತಮಾನ ಪತ್ರಗಳಲ್ಲಿ ನೋಟೀಸು ಕೊಡಬೇಕು. ಯಾವ ಪತ್ರಿಕೆಗಳಲ್ಲಿ ನೋಟೀಸು ಕೊಡಬೇಕೆಂಬ ಬಗ್ಗೆ ಸರಕಾರವೇ ಆರಿಸುವುದು. ಈ ನೋಟೀಸು ಹದಿನಾಲ್ಕು ದಿವಸಗಳಿಗೆ ಕಡಿಮೆ ಇಲ್ಲದಷ್ಟು ಇರುವ ನೋಟೀಸು.

ಯಾವ ತಾರೀಖಿನಿಂದ ಸರಕಾರದ ಕ್ರಮವು ಜಾರಿಯಲ್ಲಿ ಬರುವುದೆಂದು ನಿರ್ದಿಷ್ಟಪಡಿಸಲಾಗುವುದೋ ಆ ತಾರೀಖು ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯ ತಾರೀಖಿನಿಂದ ಆರುತಿಂಗಳ ಒಳಗೆ ಇರಕೂಡದು. ಅಂದರೆ ಅಧಿಕೃತ ಗ್ಯಾಜೆಟದಲ್ಲಿ ಪ್ರಕಟವಾದ ತಾರೀಖಿನಿಂದ ೬ ತಿಂಗಳ ನಂತರ ಯಾವುದೊಂದು ತಾರೀಖಿನಿಂದ ಸರಕಾರವು ತಾನು ಕೊಟ್ಟ ಆಶ್ವಾಸನದ ಬಗ್ಗೆ ನೋಟೀಸಿನಲ್ಲಿ ಕೊಟ್ಟಂತೆ ಹೆಚ್ಚು ಕಡಿಮೆ ಮಾಡಬಹುದು; ಆದರೆ ಈ ತಾರೀಖಿನಕಿಂತ ಮೊದಲೇ ಹೊರಡಿಸಲ್ಪಟ್ಟ ಡಿಬೆಂಚರುಗಳಿಗೆ ಈ ನೋಟೀಸಿನ ಮೂಲಕವುಂಟಾದ ಆಶ್ವಾಸನದ

ಹೆಚ್ಚುಕಡಿಮೆಯು ಬಾಧಿಸುವುದಿಲ್ಲ. ಆ ತಾರೀಖಿನ ನಂತರ ಹೊರಡಿಸಲಾದ ಡಿಬೆಂಚರುಗಳಿಗೆ ನೋಟೀಸದಲ್ಲಿ ನಿರ್ದಿಷ್ಟ ಪಡಿಸಿದ ಆಶ್ವಾಸನದ ಮಿತಿ, ಪರಿಮಿತಿ ಹಾಗೂ ಕರಾರುಗಳು ಅನ್ವಯಿಸುವುವು ಎಂದು ಅರ್ಥ.

ಗ್ಯಾಜೆಟದಲ್ಲಿಯ ಪ್ರಕಟನೆಯಲ್ಲಿ ಹಾಗೂ ವೃತ್ತಪತ್ರಿಕೆಯಲ್ಲಿಯ ನೋಟೀಸಿನಲ್ಲಿ ಆಶ್ವಾಸನದ ಬಗ್ಗೆ ಏನು ಹೆಚ್ಚುಕಡಿಮೆ ಮಾಡುವುದಿದೆ ಎಂಬುದರ ವ್ಯಾಪ್ತಿ ಹಾಗೂ ಪರಿಣಾಮಗಳನ್ನು ಸ್ಪಷ್ಟಪಡಿಸತಕ್ಕದ್ದು. ಅಂದರೆ ಸರಕಾರವು ಆಶ್ವಾಸನದ ಬಗ್ಗೆ ಏನು ಕ್ರಮ ಕೈಕೊಳ್ಳುವುದಿದೆ, ಅದರ ಪರಿಣಾಮವೇನಾಗುವುದು ಎಂಬುದು ಸಾರ್ವಜನಿಕರಿಗೆ ತಿಳಿಯತಕ್ಕದ್ದು, ಎಂಬುದೆ ಇದರ ಉದ್ದೇಶವಾಗಿದೆ.

**೮೨ ರಾಜ್ಯಸರಕಾರದ ಇತರ ಆಶ್ವಾಸನೆಗಳು.**

(೧) ರಾಜ್ಯಸರಕಾರದಿಂದ ಮನ್ನಿಸಲ್ಪಟ್ಟ ಮೌಲ್ಯಮಾಪನದ ತತ್ವಗಳ ಅನುಸಾರವಾಗಿ ನಿರ್ಧರಿಸಲಾದ ಭೂಮಿಗಳ ಬೆಲೆಯ ತಳಹದಿಯ ಮೇಲೆ ಸದಸ್ಯರು ಬಾಧ್ಯಸ್ಥರಾಗಬಹುದಾದ ಸಾಲಗಳಕಿಂತ ಹೆಚ್ಚಾಗಿ ಭೂಮಿಗಳ ಸುಧಾರಣೆಗಾಗಿ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನಿಂದ ಇಲ್ಲವೆ ಲ್ಯಾಂಡಮಾರ್ಗೇಜ ಬ್ಯಾಂಕುಗಳಿಂದ ಸದಸ್ಯರಿಗೆ ಸಾಲಗಳನ್ನು ದಯಪಾಲಿಸಲು ಸಾಮಾನ್ಯ ಇಲ್ಲವೆ ವಿಶೇಷ ಹುಕುಮಿನಿಂದ ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸ ಬಹುದಾದ ಮಿತಿಯನ್ನು ಮೀರದ ಹಾಗೆ, ರಾಜ್ಯ ಸರಕಾರವು ಅಧಿಕರಿಸಬಹುದು.

(೨) ಉಪಕಲಮು (೧) ರ ಅನುಸಾರವಾಗಿ ದಯಪಾಲಿಸಲಾದ ಸಾಲಗಳ ಸಂಬಂಧವಾಗಿ ಸದಸ್ಯನಿಗೆ ಹೆಚ್ಚಿಗೆ ದಯಪಾಲಿಸಲಾದ ಸಾಲದ ಮಟ್ಟಿಗೆ, ಆ ಸಾಲವನ್ನು ಮರಳಿ ಕೊಡುವ ಬಗ್ಗೆ ನಿರ್ದಿಷ್ಟ ಕಾಲಾವಧಿಯ ವರೆಗೆ ರಾಜ್ಯಸರಕಾರವು ಆಶ್ವಾಸನ ಕೊಡಬಹುದು.

**ವಿವೇಚನೆ**

ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಇಲ್ಲವೆ ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಸದಸ್ಯರಿಗೆ ಸಾಲಗಳನ್ನು ಕೊಡಬಹುದು. ಈ ಸಾಲಗಳನ್ನು ಭೂಮಿಯ ಮೌಲ್ಯಮಾಪನದ ತಳಹದಿಯ ಮೇಲೆ ಕೊಡಲಾಗುವುದು. ಮೌಲ್ಯ ಮಾಪನ ಹೇಗೆ ಮಾಡಬೇಕೆಂಬ ಬಗ್ಗೆ ರಾಜ್ಯಸರಕಾರವು ತತ್ವಗಳನ್ನು ನಿರ್ಧರಿಸುವುದು. ಈ ಮೌಲ್ಯ ಮಾಪನದ ತತ್ವಗಳ ಅನುಸಾರವಾಗಿ ಸದಸ್ಯರು ಕೆಲವೊಂದು ಮಿತಿಯ ವರೆಗೆ ಸಾಲಕ್ಕಾಗಿ ಬಾಧ್ಯಸ್ಥರಾಗುವರು. ಈ ಮಿತಿಯಕಿಂತಲೂ ಹೆಚ್ಚಿಗೆ ಸಾಲವನ್ನು ಸದಸ್ಯರಿಗೆ ಕೊಡಬಹುದೆಂದು ಈ ಕಲಮು ಹೇಳುತ್ತದೆ. ಈ ಹೆಚ್ಚಿಗೆ ಸಾಲವು ಭೂಮಿಯ ಸುಧಾರಣೆಗಾಗಿ ಇರತಕ್ಕದ್ದು. ಈ ಹೆಚ್ಚಿಗೆ ಸಾಲವನ್ನು ಸದಸ್ಯರಿಗೆ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕು ಇಲ್ಲವೆ ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ಕೊಡಬಹುದೆಂಬ ಹಾಗೆ ರಾಜ್ಯಸರಕಾರವು ಸಾಮಾನ್ಯ

ಇಲ್ಲವೆ ವಿಶೇಷ ಹುಕುಮು ಹೊರಡಿಸಿ ಅಧಿಕಾರ ಕೊಡಬಹುದು. ಈ ಹುಕುಮಿನಲ್ಲಿ ಯಾವ ಮಿತಿಯ ವರೆಗೆ ಹೆಚ್ಚಿನ ಸಾಲವನ್ನು ಸದಸ್ಯರಿಗೆ ಕೊಡಬಹುದು ಎಂಬುದನ್ನು ಸ್ಪಷ್ಟ ಪಡಿಸಲಾಗುವುದು.

ಈ ಹೆಚ್ಚಿನ ಸಾಲದ ಬಗ್ಗೆ ಸರಕಾರವು ಆಶ್ವಾಸನ ಕೊಡುತ್ತದೆ. ಈ ಆಶ್ವಾಸನವು ನಿರ್ದಿಷ್ಟ ಪಡಿಸಲಾದ ಕಾಲಾವಧಿಯ ವರೆಗೆ ಇರುವುದು. ಅಷ್ಟು ಅವಧಿಯ ವರೆಗೆ ಆ ಹೆಚ್ಚಿನ ಸಾಲದ ಬಗ್ಗೆ ಸರಕಾರದ ಆಶ್ವಾಸನವು ಇರುವುದು.

## ೮೩ ಕೆಲವು ಮಾಗಣಿಗಳ ಮೇಲೆ ಒತ್ತಿಗಳ ಪ್ರಾಥಮಿಕತೆ

೧೮೮೩ (ಕೇಂದ್ರಕಾಯಿದೆ ನಂ ೧೯-೧೮೮೩) ರ ಲ್ಯಾಂಡ ಇಂಪ್ರೂವಮೆಂಟ ಆ್ಯಕ್ಟದ ಇಲ್ಲವೆ ೧೮೮೪ (ಕೇಂದ್ರಕಾಯಿದೆ ನಂ—೧೨—೧೮೮೪) ರ ಅಗ್ರಿಕಲ್ ಚರಿಸ್ಟ್ಸಲೋನ್ಸ ಆ್ಯಕ್ಟದ ಅನ್ವಯವಾಗಿ ಒತ್ತಿಆಧಾರ ನಿರ್ವಸಿಕೊಟ್ಟನಂತರ ದಯಪಾಲಿಸಲಾದ ಸಾಲದಿಂದ ಉಂಟಾದ ಸರಕಾರದ ಯಾವುದೇ ಮಾಗಣಿಯನ್ನು ಹಿಂದೆಸರಿಸಿ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಪರವಾಗಿ ಒತ್ತಿ ಆಧಾರವನ್ನು ಮಾಡಿಕೊಟ್ಟದ್ದಕ್ಕೆ ಪ್ರಾಥಮಿಕತೆ ಇರತಕ್ಕದ್ದು.

**ವಿವೇಚನೆ**

ಕೇಂದ್ರಸರಕಾದ ಎರಡು ಕಾಯಿದೆಗಳು ಕೂಡ ಒಕ್ಕಲುತನದ ಸಲುವಾಗಿ ಭೂ ಸುಧಾರಣೆಯ ಸಲುವಾಗಿ ಸಾಲಗಳನ್ನು ಕೊಡುವ ಅನುಕೂಲತೆ ಮಾಡಿರುವುವು. ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಹಾಕಿದ ಒತ್ತಿ ಆಧಾರದ ಮೂಲಕವೂ ಸಾಲ ದೊರೆವುದು. ಒಂದೆಡೆಗೆ ಸರಕಾರದ ಸಾಲದ ಮಾಗಣಿ; ಇನ್ನೊಂದೆಡೆಗೆ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಒತ್ತಿಯವಿಷಯ. ಹೀಗೆ ಇರುವಾಗ ಯಾರಮಾಗಣಿಯು ಪ್ರಾಥಮಿಕತೆಯನ್ನು ಪಡೆಯಬೇಕು, ಎಂಬ ಬಗ್ಗೆ ಈ ಕಲಮು ಹೇಳುತ್ತಿದೆ. ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಒತ್ತಿಆಧಾರ ಹಾಕಿಕೊಟ್ಟ ನಂತರ ಸರಕಾರವು ಕೇಂದ್ರದ ೧೮೮೩ರ ಭೂ ಸುಧಾರಣೆ ಸಾಲದ ಕಾಯಿದೆಯನ್ವಯವಾಗಿ ಇಲ್ಲವೆ ಕೇಂದ್ರದ ಒಕ್ಕಲಿಗರ ಸಾಲಗಳ ಕಾಯಿದೆ—೧೮೮೪-ರ ಯನ್ವಯವಾಗಿ ಸಾಲಗಳು ಕೊಡಲ್ಪಟ್ಟಿದ್ದರೆ, ಆ ವ್ಯವಹಾರವು ಸರಕಾರದ ಜತೆಗೆ ಆಗಿದ್ದರೂ ಲ್ಯಾಂಡಮಾರ್ಗೇಜ ಬ್ಯಾಂಕಿನ ಒತ್ತಿ ಆಧಾರಕ್ಕೆ ಪ್ರಾಥಮಿಕತೆ ಇರತಕ್ಕದ್ದು ಎಂದು ಈ ಕಲಮು ಸ್ಪಷ್ಟ ಪಡಿಸುವುದು.

ಈ ಸಂಬಂಧದಲ್ಲಿ ಕಲಮು ೩೨ ರ ಉಪಕಲದು (೪) ರಲ್ಲಿ ಕಾಣಿಸಿದ ಸಂಗತಿಗಳನ್ನು ಲಕ್ಷ್ಯಕ್ಕೆ ತರಬೇಕು. ಅಂದರೆ ಈ ಸಹಕಾರಿ ಸಂಘದ ಕಾಯಿದೆಯಿಂದ ಸಹಕಾರಿ ಸಂಘಗಳಿಗೆ ಮಾಗಣಿಯಲ್ಲಿ ಪ್ರಾಥಮಿಕತೆಯನ್ನು ಕೊಡಲಾಗಿದೆ ಯೆಂಬುದು ಸ್ಪಷ್ಟವಾಗುವುದು.

## ೮೪. ಒತ್ತಿ ಆಸ್ತಿಗಳನ್ನು ಕೊಳ್ಳಲು ಲ್ಯಾಂಡ ಮಾರ್ಗೇಜ ಬ್ಯಾಂಕಿನ ಇಲ್ಲವೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕದ ಹಕ್ಕು

(೧) ಆ ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ, ಈ ಪ್ರಕರಣದನ್ವಯವಾಗಿ ಮಾರಾಟ ಮಾಡಲಾದ ಯಾವುದೇ ಒತ್ತಿ ಆಧಾರದ ಆಸ್ತಿಯನ್ನು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು, ಇಲ್ಲವೆ ಲ್ಯಾಂಡ ಮಾರ್ಗೇಜ ಬ್ಯಾಂಕು ಖರೀದಿ ತೆಗೆದುಕೊಳ್ಳುವುದಕ್ಕೆ ಕಾಯಿದೇಶೀರ ಅಧಿಕಾರ ಇರತಕ್ಕದ್ದು ಮತ್ತು ಹೀಗೆ ಖರೀದಿಗೆ ತೆಗೆದುಕೊಂಡ ಆಸ್ತಿಯು ಧರ್ಮದರ್ಶಿಯಿಂದ ಗೊತ್ತು ಮಾಡಬಹುದಾದಂತಹ ಕಾಲಾವಧಿಯಲ್ಲಿ ಇಂತಹ ಬ್ಯಾಂಕಿನಿಂದ ಮಾರಾಟದ ಮೂಲಕ ವಿಲೇವಾಟ ಮಾಡಲ್ಪಡತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ಲ್ಯಾಂಡ ಮಾರ್ಗೇಜ ಬ್ಯಾಂಕು ಇಲ್ಲವೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು ಭೂಮಿಯನ್ನು ಪಡೆದುಕೊಳ್ಳುವುದಕ್ಕೆ ಒಕ್ಕಲುತನ ಹಿಡುವಳಿಯ ಪರಮಾವಧಿ ಮಿತಿಯನ್ನು ಗೊತ್ತು ಮಾಡುವ ಯಾವುದೇ ಕಾಯಿದೆಯಲ್ಲಿಯ ಯಾವುದೇ ಮಾತು ಅನ್ವಯಿಸತಕ್ಕದ್ದಲ್ಲ.

**ವಿವೇಚನೆ**

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಇಲ್ಲವೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಈ ಕಲಮು ಒಂದು ಅಧಿಕಾರ ಕೊಡುತ್ತದೆ. ಈ ಪ್ರಕರಣದನ್ವಯವಾಗಿ ಯಾವುದೇ ಒತ್ತಿಯ ಆಸ್ತಿಯು ಮಾರಾಟಕ್ಕೆ ಬಂದರೆ ಅದನ್ನು ಲ್ಯಾಂಡ ಮಾರ್ಗೇಜ ಬ್ಯಾಂಕು ಇಲ್ಲವೆ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕು ಖರೀದಿ ತೆಗೆದುಕೊಂಡರೆ ಅದು ಕಾಯಿದೇಶೀರ ವ್ಯವಹಾರವಾಗುವುದು. ಹಾಗೆ ಖರೀದಿ ಹಿಡಿಯಲಿಕ್ಕೆ ಈ ಕಲಮು ಅಧಿಕಾರ ಕೊಡುತ್ತದೆ.

ಹೀಗೆ ಖರೀದಿ ತೆಗೆದುಕೊಂಡ ಆಸ್ತಿಯನ್ನು ಪುನಃ ಮಾರಾಟ ಮಾಡಿ ಅದನ್ನು ವಿಲೇವಾಟ ಮಾಡಲಿಕ್ಕೆ ಆ ಲ್ಯಾಂಡ ಮಾರ್ಗೇಜ ಬ್ಯಾಂಕು ಇಲ್ಲವೆ ರಾಜ್ಯದ ಲ್ಯಾಂಡ ಬ್ಯಾಂಕಿಗೆ ಅಧಿಕಾರವಿದೆ. ಈ ಎರಡನೆಯ ಮಾರಾಟವು ಧರ್ಮದರ್ಶಿಯು ಗೊತ್ತುಮಾಡುವ ಕಾಲಾವಧಿಯ ಒಳಗೆ ಆಗತಕ್ಕದ್ದು. ಆ ಕಾಲಾವಧಿಯನ್ನು ಗೊತ್ತುಮಾಡುವ ಕಾರ್ಯ ಧರ್ಮದರ್ಶಿಯದು. ಇದರಿಂದ ಧರ್ಮದರ್ಶಿಗೆ ಈ ವ್ಯವಹಾರವು ತಿಳಿದು ಬರುವುದು.

ಇನ್ನೂ ಒಂದು ಮಾತು ಈ ಕಲಮಿನಲ್ಲಿ ಹೇಳಲಾಗಿದೆ. ಬ್ಯಾಂಕುಗಳು ಹೀಗೆ ಖರೀದಿ ಹಿಡಿಯುವುದು ಈ ಕಾಯಿದೆಯ ಈ ಕಲಮಿನಿಂದ ಕಾಯಿದೇಶೀರ ವ್ಯವಹಾರವಾಗುವುದು. ಹೀಗೆ ಖರೀದಿ ಹಿಡಿಯುವುದರಿಂದ ಬ್ಯಾಂಕಿನ ಒಡೆತನಕ್ಕೆ ಭೂಮಿಯು ಬರುವುದು. ಬೇರೆ ಕಾಯಿದೆಯಲ್ಲಿ ಭೂಮಿಯ ಹಿಡುವಳಿಯ ಬಗ್ಗೆ ಮೇಲ್ಮಿತಿ ಹಾಕಲಾಗಿರುವುದು. ಅಂತಹ ಯಾವುದೇ ಕಾಯಿದೆಯಲ್ಲಿ

ಮೇಲ್ಮಿತಿಯ ಬಗ್ಗೆ ಏನೇ ಹೇಳಲಾಗಿದ್ದರೂ ಆ ಮಾತುಗಳು ಈ ಬ್ಯಾಂಕುಗಳ ಸ್ವಾಧೀನದಲ್ಲಿ ಬಂದ ಭೂ ಹಿಡುವಳಿಗಳಿಗೆ ಅನ್ವಯಿಸುವುದಿಲ್ಲ. ಬೇರೆ ಕಾಯಿದೆ ಯೆಂದರೆ ಈಗಿದ್ದ ಟೆನನ್ಸಿ ಕಾಯಿದೆ ಇಲ್ಲವೆ ಇದರ ಬದಲಾಗಿ ಬರಬಹುದಾದ ಬೇರೆ ಯಾವುದೇ ಭೂಸುಧಾರಣೆಯ ಕಾಯಿದೆ ಎಂದು ಸೂಚನೆ ಇದರಲ್ಲಿದೆ.

ಸಹಕಾರಿ ಸಂಘಗಳ ಕಾಯಿದೆಯೂ ಭೂಸುಧಾರಣೆಯ ಕಾಯಿದೆಗಳೂ ಒಂದಕ್ಕೊಂದು ಪೋಷಕವಾಗಬೇಕೆನ್ನುವ ಮಾತುಗಳು ಬರುತ್ತಿರುವುದು ಕಂಡು ಬರುತ್ತದೆ. ಕಲಮು ೭೭ ರ ವಿವೇಚನೆಯನ್ನು ನೋಡಿರಿ.

## ೮೫. ಲ್ಯಾಂಡ ಮಾರ್ಗೇಜ ಬ್ಯಾಂಕದ ಪರವಾಗಿ ನಿರ್ವಹಿಸಿದ ಒತ್ತಿಗಳು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿನಲ್ಲಿ ಅಂತರ್ಗತ

ಲ್ಯಾಂಡ ಮಾರ್ಗೇಜ ಬ್ಯಾಂಕದ ಸದಸ್ಯರಿಂದ ಆ ಬ್ಯಾಂಕಿನ ಪರವಾಗಿ ನಿರ್ವಹಿಸಿ ಕೊಡಲ್ಪಟ್ಟ ಒತ್ತಿಗಳು ಮತ್ತು ಹಸ್ತಾಂತರಿಸಿ ಕೂಡ ಕೊಡಲ್ಪಟ್ಟ ಎಲ್ಲ ಇತರ ಸೊತ್ತುಗಳು ಇಂತಹ ನಿರ್ವಹಣೆಯ ಇಲ್ಲವೆ ಹಸ್ತಾಂತರದ ತಾರೀಖಿನಿಂದ ಇಂತಹ ಲ್ಯಾಂಡ ಮಾರ್ಗೇಜ ಬ್ಯಾಂಕಿನಿಂದ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರ ಮಾಡಲ್ಪಟ್ಟದ್ದೆಂದು ಗಣಿಸತಕ್ಕದ್ದು. ಮತ್ತು ಅವು ಧರ್ಮದರ್ಶಿಯ ಅಧಿಕಾರಾಂತರ್ಗತವಾಗಿರತಕ್ಕದ್ದು.

### ವಿವೇಚನೆ

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಸದಸ್ಯರು ಇರುವರು. ಆ ಸದಸ್ಯರು ತಮ್ಮ ಆಸ್ತಿಗಳನ್ನು ಆ ಬ್ಯಾಂಕಿನ ಪರವಾಗಿ ಒತ್ತಿ ಹಾಕಿರುವರು ಇಲ್ಲವೆ ಹಸ್ತಾಂತರ ಮಾಡಿರುವರು. ಹೀಗೆ ಒತ್ತಿ ಹಾಕಿದ ಇಲ್ಲವೆ ಹಸ್ತಾಂತರಿಸಲಾದ ತಾರೀಖಿನಿಂದ ಆ ಆಸ್ತಿಗಳು ಆ ಲ್ಯಾಂಡ ಮಾರ್ಗೇಜ ಬ್ಯಾಂಕಿನಿಂದ ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರ ಮಾಡಿಕೊಟ್ಟದ್ದೆಂದು ಗಣಿಸತಕ್ಕದ್ದು. ಸದಸ್ಯರು ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಿಕೊಟ್ಟರೂ ಪರ್ಯಾಯ ವಾಗಿ ಈ ಕಲಮಿನ ಆಧಾರದ ಮೇಲೆ ಆ ಎಲ್ಲ ಆಸ್ತಿಗಳು ರಾಜ.ದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಿಕೊಟ್ಟಂತೆ ಅಲ್ಲದೆ ಆ ಆಸ್ತಿಗಳು ಧರ್ಮ ದರ್ಶಿಯ ಅಧಿಕಾರಕ್ಕೆ ಒಳಪಟ್ಟಂತೆ.

ಹೀಗೆ ಈ ಕಲಮಿನಿಂದ ಪರಿಣಾಮ ವಾಗುವುದರಿಂದ ಸದಸ್ಯರ ಹಕ್ಕುಗಳು ಲ್ಯಾಂಡ ಮಾರ್ಗೇಜ ಬ್ಯಾಂಕಿನ ಆಧೀನಕ್ಕೆ ಬರುವುವು. ತತ್‌ಕ್ಷಣ ಅವು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಬಂದಂತೆ. ಆದರೆ ಅಧಿಕಾರವು ಧರ್ಮದರ್ಶಿಯ ಹತ್ತರ ಬಂದಂತಾಗುವುದು. ಧರ್ಮದರ್ಶಿಯು ತಿಳುವಳಿಕೆ ಇಲ್ಲದೆ ಈ ಆಸ್ತಿಗಳ

ಬಗ್ಗೆ ಯಾರಿಗೂ ಏನೂ ಮಾಡಲಿಕ್ಕೆ ಬರುವುದಿಲ್ಲ ಎಂದ ಹಾಗೆ. ಏಕೆಂದರೆ ಈ ಆಸ್ತಿಗಳ ಆಧಾರದ ಮೇಲೆ ಧರ್ಮದರ್ಶಿಯು ಡಿಬೆಂಚರ ಧಾರಕರ ಹಿತರಕ್ಷಣೆ ಮಾಡಬೇಕಾಗಿರುವುದು.

## ೮೭. ಹಣವನ್ನು ಸ್ವೀಕರಿಸಲು ಹಾಗೂ ಮುಕ್ತತೆಯನ್ನು ದಯ-ಪಾಲಿಸಲು ಲ್ಯಾಂಡ ಮಾರ್ಗೇಜ ಬ್ಯಾಂಕದ ಅಧಿಕಾರ

ಲ್ಯಾಂಡ ಮಾರ್ಗೇಜ ಬ್ಯಾಂಕಿನ ಪರವಾಗಿ ನಿರ್ವಹಿಸಿಕೊಡಲ್ಪಟ್ಟ ಒತ್ತೀ ಆಧಾರವು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಲ್ಪಟ್ಟಿದ್ದರೂ ಇಲ್ಲವೆ ಕಲಮು ೮೫ ರ ಶರತುಗಳನ್ವಯವಾಗಿ ಹಸ್ತಾಂತರಿಸಲ್ಪಟ್ಟಿದೆಯೆಂದು ಗಣಿಸಲ್ಪಟ್ಟಿದ್ದರೂ,

(ಅ) ಬೋರ್ಡದಿಂದ ಇಲ್ಲವೆ ಧರ್ಮದರ್ಶಿಯಿಂದ ಯಾವುದೇ ನಿರ್ದಿಷ್ಟ ವಿರುದ್ಧ ನಿರ್ದೇಶನವು ಹೊರಡಿಸಲ್ಪಡದೆ ಇರುವಾಗ ಮತ್ತು ಆ ಬಗ್ಗೆ ಒತ್ತಿ ಹಾಕಿದವನಿಗೆ ತಿಳಿಸದೆ ಇರುವಾಗ ಒತ್ತಿಯನ್ವಯ ಬಾಕಿಯಾಗಿರುವ ಎಲ್ಲ ಹಣಗಳು ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಸಲ್ಲಿಸಲ್ಪಡಲು ಯೋಗ್ಯವಾಗಿರತಕ್ಕದ್ದು. ಮತ್ತು ಆ ಒತ್ತಿಯ ಹಸ್ತಾಂತರಿಸಲ್ಪಡದೆ ಇದ್ದಾಗ ಹಣವನ್ನು ಸಲ್ಲಿಸಿದ್ದರೆ ಆಗುವಂತೆ ಕಾಯಿದೆಬದ್ಧವಾಗಿರತಕ್ಕದ್ದು; ಮತ್ತು,

(ಬ) ಬೋರ್ಡದಿಂದ ಇಲ್ಲವೆ ಧರ್ಮದರ್ಶಿಯಿಂದ ಯಾವುದೇ ನಿರ್ದಿಷ್ಟ ವಿರುದ್ಧ ನಿರ್ದೇಶನವು ಹೊರಡಿಸಲ್ಪಡದೆ ಇರುವಾಗ ಮತ್ತು ಆ ಬಗ್ಗೆ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ತಿಳಿಸದೆ ಇರುವಾಗ ಆ ಒತ್ತಿಯ ಮೇಲೆ ದಾವೆ ಮಾಡಲು ಇಲ್ಲವೆ ಒತ್ತಿಯ ಆಧಾರದ ಅನ್ವಯವಾಗಿರುವ ಹಣವನ್ನು ವಸೂಲ ಮಾಡುವುದಕ್ಕಾಗಿ ಬೇರೆ ಯಾವುದೇ ಪ್ರಕರಣವನ್ನು ನಡೆಸಲು ಲ್ಯಾಂಡ ಮಾರ್ಗೇಜ ಬ್ಯಾಂಕು ಬಾಧ್ಯಸ್ಥವಾಗಿರತಕ್ಕದ್ದು.

**ವಿವೇಚನೆ**

ಕಲಮು ೮೫ ರಲ್ಲಿ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಸ್ವಾಧೀನಕ್ಕೆ ಬಂದ ಒತ್ತಿ ಆಧಾರಗಳು ಮತ್ತು ಇತರ ಆಸ್ತಿಗಳು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರವಾದಂತೆ ಎಂದು ಹೇಳಿದಮೇಲೆ ಲ್ಯಾಂಡಮಾರ್ಗೇಜ ಬ್ಯಾಂಕಿನ ಕಾರ್ಯ ಇಲ್ಲವೆ ಅಧಿಕಾರವು ಆ ಸಂಬಂಧವಾಗಿ ಎಷ್ಟು? ಎಂಬ ಪ್ರಶ್ನೆ ಬರುವುದು. ಅದರ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಲಾದರೂ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಈ ಕೆಳಗಿನ ಅಧಿಕಾರಗಳು ಉಳಿಯುವುವು.

ಒತ್ತಿಯ ಸಂಬಂಧವಾಗಿ ಸಲ್ಲಬೇಕಾಗಿದ್ದ ಹಣವನ್ನು ಲ್ಯಾಂಡ ಮಾರ್ಗೇಜ ಬ್ಯಾಂಕು ಸ್ವೀಕರಿಸಲು ಬರುವುದು. ಸ್ವೀಕರಿಸುವ ಅಧಿಕಾರವು ಆ ಬ್ಯಾಂಕಿಗೆ

ಇದೆ. ಒಂದು ವೇಳೆ ತನ್ನ ಸಾಧೀನಕ್ಕೆ ಬಂದ ಒತ್ತಿ ಆಧಾರಗಳನ್ನು ಹಸ್ತಾಂತರ ಮಾಡದೆ ಇದ್ದರೆ ಆ ಒತ್ತಿಯ ಸಂಬಂಧವಾಗಿ ಹಣವನ್ನು ಸ್ವೀಕರಿಸುವುದು ಎಷ್ಟು ಕಾಯಿದೇಬದ್ಧವಾಗುತ್ತಿತ್ತೋ ಅಷ್ಟೇ ಕಾಯಿದೆಬದ್ಧವಾಗುವುದು. ಅಂದರೆ ಹಸ್ತಾಂತರದಿಂದ ಈ ವ್ಯವಹಾರಕ್ಕೆ ಅಡ್ಡಿ ಆಗುವುದಿಲ್ಲ. ಒತ್ತಿ ಹಾಕಿದವರು ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಒತ್ತಿ ಸಂಬಂಧವಾಗಿ ಹಣವನ್ನು ಕೊಡಬಹುದು. ಆದರೆ ಇಲ್ಲಿ ಒಂದು ಮಾತು ಗಮನಿಸಬೇಕು. ಬೋರ್ಡಾಗಲೀ ಧರ್ಮದರ್ಶಿಯಾಗಲೀ ಇದರ ವಿರುದ್ಧವಾಗಿ ಯಾವ ನಿರ್ದೇಶನವನ್ನು ಹೊರಡಿಸಿರಬಾರದು. ಹಾಗೂ ಆ ಬಗ್ಗೆ ಒತ್ತಿ ಹಾಕಿದವನಿಗೆ ತಿಳಿಸಿರಬಾರದು. ಅಂತಹ ನಿರ್ದೇಶನ ವಿಲ್ಲದಿದ್ದರೆ, ಆ ಬಗ್ಗೆ ಒತ್ತಿ ಹಾಕಿದವನಿಗೆ ತಿಳಿಸಿರದಿದ್ದರೆ, ಒತ್ತಿ ಹಾಕಿದವನು ಒತ್ತಿಯ ಸಂಬಂಧವಾಗಿ ಆ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಣ ಸಲ್ಲಿಸುವುದು, ಸಲ್ಲಿಸಿದುದು ಕಾಯಿದೆಬದ್ಧವಾಗುವುದು.

ಅದರಂತೆ, ಬೋರ್ಡಿನಿಂದಾಗಲೀ ಧರ್ಮದರ್ಶಿಯಿಂದಾಗಲೀ ಬೇರೆ ಯಾವುದೇ ನಿರ್ದಿಷ್ಟ ವಿರುದ್ಧ ನಿರ್ದೇಶನವು ಇರದೇ ಇದ್ದರೆ, ಆ ನಿರ್ದೇಶನದ ಬಗ್ಗೆ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ತಿಳಿಸದೇ ಇದ್ದರೆ, ಆ ಲ್ಯಾಂಡ ಮಾರ್ಗೇಜ ಬ್ಯಾಂಕು ಆ ಒತ್ತಿಯ ಸಂಬಂಧವಾಗಿ ಆ ಒತ್ತಿ ಆಧಾರದ ಮೇಲೆ ದಾವೆ ಮಾಡಲು ಇಲ್ಲವೆ ಬೇರೆ ಯಾವುದೇ ಪ್ರಕರಣ ನಡೆಸಲು ಅಧಿಕಾರವುಳ್ಳದ್ದು ಎಂದು ತಿಳಿಯಬೇಕು.

ಅಂದರೆ, ಇಲ್ಲಿ ಬೇರೆ ನಿರ್ದೇಶನವೇ ಮುಖ್ಯವಾದುದು. ಆ ನಿರ್ದೇಶನ ಇದ್ದರೆ ಅದರಂತೆ ನಡೆಯಬೇಕಾಗುವುದು. ಆ ನಿರ್ದೇಶನವು ಸಂಬಂಧಪಟ್ಟವರಿಗೆ ತಿಳಿಸಿರಬೇಕಾಗುವುದು. ಈ ಎರಡರಲ್ಲಿ ಒಂದು ಇರದೇ ಇದ್ದರೂ ಹಸ್ತಾಂತರವು ಯಾವುದೇ ಹಕ್ಕಿಗೆ ಬಾಧೆ ತರುವುದಿಲ್ಲ ಎಂದು ಹೇಳಿದ ಹಾಗೆ ನಿರ್ದೇಶನವು ಬೋರ್ಡಿನಿಂದ ಇಲ್ಲವೆ ಧರ್ಮದರ್ಶಿಯಿಂದ, ಎಂಬುದು ಸ್ಪಷ್ಟಪಡಿಸಲಾಗಿದೆ.

## ೮೭. ಒತ್ತಿ ಹಾಕಿದವನ ಮೊದಲಿನ ಋಣವನ್ನು ತೀರಿಸುವ ಬಗ್ಗೆ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಹಕ್ಕು

(೧) ಒತ್ತಿ ಹಾಕಿದವನು ಮೊದಲಿನ ಸಾಲಗಳನ್ನು ತೀರಿಸುವುದರ ಸಲುವಾಗಿ ಲ್ಯಾಂಡ ಮಾರ್ಗೇಜ ಬ್ಯಾಂಕದ ಪರವಾಗಿ ಒತ್ತಿ ಆಧಾರವು ನಿರ್ವಹಿಸಲ್ಪಟ್ಟಿರುವಾಗ ೧೮೮೨ (ಕೇಂದ್ರ ಕಾಯಿದೆ ನಂ. ೪—೧೮೮೨) ರ ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೮೩ ಹಾಗೂ ೮೪ ರ ಶರತುಗಳಲ್ಲಿ ಏನೇ ಹೇಳಲಾಗಿದ್ದರೂ ಅಂತಹ ಯಾವುದೇ ಸಾಲವು ಯಾವ ವ್ಯಕ್ತಿಗೆ ಸಲ್ಲಬೇಕಾಗಿರುವುದೋ ಅಂತಹ ಯಾವುದೇ ವ್ಯಕ್ತಿಗೆ ಲೇಖೀ ನೋಟೀಸಿನಿಂದ ನೋಟೀಸಿನಲ್ಲಿ ನಿರ್ದಿಷ್ಟ ಪಡಿಸಿದಂತಹ ಕಾಲಾವಧಿಯಲ್ಲಿ ಬ್ಯಾಂಕಿನ ರಜಿಸ್ಟರ್ಡ ಕಚೇರಿಗೆ ಬಂದು ಅಂತಹ ಸಾಲದ ಹಣವನ್ನು

ಇಲ್ಲವೆ ಅದರ ಯಾವುದೇ ಭಾಗವನ್ನು ಸ್ವೀಕರಿಸಲು ಬ್ಯಾಂಕು ತಿಳಿಸ ಬಹುದು.

(೨) ಅಂತಹ ಯಾವುದೇ ವ್ಯಕ್ತಿಯು ಇಂತಹ ಯಾವುದೇ ನೋಟೀಸನ್ನು ಸ್ವೀಕರಿಸಲು ತಪ್ಪಿದರೆ, ಇಲ್ಲವೆ ಹಣವನ್ನು ಸ್ವೀಕರಿಸಲು ತಪ್ಪಿದರೆ, ಅಂಥ ಸಾಲದ ಹಣವು ಇಲ್ಲವೆ ಅದರ ಯಾವುದೇ ಭಾರವು ಆ ನೋಟೀಸಿನಲ್ಲಿ ನಿರ್ದಿಷ್ಟಪಡಿಸಿದ ಕಾಲಾವಧಿ ಮುಗಿದಂದಿನಿಂದ ಬಡ್ಡಿಯನ್ನು ಪಡೆಯಲು ತಡೆಯಲ್ಪಡತಕ್ಕದ್ದು.

ಆದರೆ, ಇಂತಹ ಸಾಲದ ರಕಮಿನ ಬಗ್ಗೆ ತಂಟೆಯಿರುವಾಗ ಯಾವನಿಗೆ ಇಂತಹ ಸಾಲದ ಹಣವು ಸಲ್ಲಬೇಕಾಗಿರುವುದೋ ಆ ವ್ಯಕ್ತಿಯು ಲ್ಯಾಂಡಮಾರ್ಗೇಜ ಬ್ಯಾಂಕು ಆ ಸಾಲದ ಹಣದ ಸಂಬಂಧವಾಗಿ ಕೊಡಮಾಡಿದ ರಕಮನ್ನು ಸ್ವೀಕರಿಸ ತಕ್ಕದ್ದು, ಆದರೆ ಹಾಗೆ ಸ್ವೀಕರಿಸುವುದರಿಂದ ಆ ವ್ಯಕ್ತಿಯು ಮಾಗಣಿ ಮಾಡಿದ ಹಣದಲ್ಲಿ ಬಾಕಿ ಉಳಿದ ಹಣವನ್ನು ವಸೂಲು ಮಾಡಿಕೊಳ್ಳುವ ಹಕ್ಕುಗಳಿಗೆ ಯಾವುದೇ ರೀತಿಯಿಂದ ಬಾಧೆ ಬರತಕ್ಕದ್ದಲ್ಲ.

(೩) ಉಪಕಲಮು (೧) ರಲ್ಲಿ ಹೇಳಲಾದ ಮೊದಲಿನ ಋಣದ ವಿವರ ಗಳನ್ನು ನಿರ್ಧರಿಸುವ ಉದ್ದೇಶಗಳ ಸಲುವಾಗಿ. ಅಧಿಕೃತ ಗ್ಯಾಜೆಟದಲ್ಲಿಯ ಪ್ರಕ ಟನೆಯಿಂದ ರಾಜ್ಯಸರಕಾರದಿಂದ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿನ ಇಲ್ಲವೆ ಲ್ಯಾಂಡಮಾರ್ಗೇಜ ಬ್ಯಾಂಕಿನ ಯಾವುದೇ ಅಧಿಕಾರಿಯು ಗೊತ್ತುಮಾಡಬಹುದಾದಂತಹ ನಿರ್ಬಂಧಗಳ, ಮಿತಿಗಳ ಹಾಗೂ ಲೇಖೀಹುಕುಮಿನಿಂದ ಕರಾರುಗಳ ಆಂಕಿತವಾಗಿ ಯಾವನಿಗೆ ಈ ಮೊದಲಿನ ಸಾಲದ ಹಣವು ಸಲ್ಲಬೇಕಾಗಿರುವುದೋ ಆ ವ್ಯಕ್ತಿಯನ್ನು ಅಂತಹ ಸಾಲದ ಬಗ್ಗೆ ಯಾವುದೇ ಮಾಹಿತಿಯನ್ನು ಇಲ್ಲವೆ ದಾಖಲೆ ಪತ್ರವನ್ನು ಸಾದರ ಪಡಿಸಲು ಹಚ್ಚಬಹುದು. ಮತ್ತು ಆ ನಂತರ ಹಾಗೆ ಬೇಡಲಾದ ಮಾಹಿತಿ ಇಲ್ಲವೆ ದಾಖಲೆಪತ್ರವನ್ನು ಆ ವ್ಯಕ್ತಿಯು ಸಾದರ ಪಡಿಸತಕ್ಕದ್ದು.

**ವಿವೇಚನೆ**

ಒತ್ತಿಹಾಕಿದ ವ್ಯಕ್ತಿಗೆ ಈ ಮೊದಲೇ ಬೇರೆ ಕಡೆಗೆ ಸಾಲವಿದ್ದರೆ, ಆ ಸಾಲ ವನ್ನು ತೀರಿಸುವುದಕ್ಕಾಗಿ ಈ ಒತ್ತಿಯನ್ನು ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಹಾಕಿ ದ್ದರೆ, ಆಗ ಆ ಬ್ಯಾಂಕು ಒಂದು ಲೇಖೀ ನೋಟೀಸನ್ನು ಆ ಮೊದಲಿನ ಧನಕೋ ನಿಗೆ ಕೊಡತಕ್ಕದ್ದು. ಆ ನೋಟೀಸಿನಲ್ಲಿ ಈ ಸಂಗತಿಗಳು ಬರೆಯಲ್ಪಟ್ಟಿರಬೇಕು. ಬ್ಯಾಂಕಿನ ರಜಿಷ್ಟರ್ಡ ಕಚೇರಿಯಲ್ಲಿ ಬಂದು ಆ ಸಾಲದ ಹಣವನ್ನು ಸ್ವೀಕರಿಸಲು ಹೇಳಿರಬೇಕು; ಅಲ್ಲದೆ ಆ ಹಣವನ್ನು ಇಂತಹ ಕಾಲಾವಧಿಯ ಒಳಗೆ ಸ್ವೀಕರಿಸ ಬೇಕೆಂದು ಆ ಕಾಲಾವಧಿಯನ್ನು ನಿರ್ದಿಷ್ಟಪಡಿಸಬೇಕು. ಹೀಗೆ ನೋಟೀಸು ಕೊಟ್ಟು ಆ ಧನಕೋನು ಆ ಸಾಲದ ಹಣವನ್ನು ಸ್ವೀಕರಿಸುವಂತೆ ಮಾಡುವುದಕ್ಕೆ ೧೮೮೨ ರ ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೮೩ ಹಾಗೂ ೮೪ ಯಾವ ರೀತಿಯಿಂದಲೂ

ಬಾಧಿಸುವುದಿಲ್ಲ. ಆ ಹಸ್ತಾಂತರ ಕಾಯಿದೆಯ ಕಲಮು ೮೩-೮೪ ರಲ್ಲಿ ಏನು ಹೇಳಿದೆ ?

ಕಲಮು ೮೩ ರಲ್ಲಿ ಹೀಗೆ ಹೇಳಿದೆ : "ಯಾವುದೇ ಒತ್ತಿಯ ಸಂಬಂಧವಾಗಿ ಮೂಲ ಹಣವು ಸಲ್ಲಿಸಲ್ಪಡಲು ಯೋಗ್ಯವಾಗಿರುವ ಹಾಗೆ ಆದ ನಂತರ ಯಾವುದೇ ಕಾಲಕ್ಕೆ ಮತ್ತು ಒತ್ತಿ ವಿಮೋಚನೆಯ ಸಲುವಾಗಿ ಮಾಡಲ್ಪಡುವ ದಾವೆಯು ನಿರ್ಬಂಧಿತವಾಗುವುದಕ್ಕೆ ಮುಂಚೆ ಒತ್ತಿ ಹಾಕಿದವನು ಇಲ್ಲವೆ ಇಂತಹ ದಾವೆಯನ್ನು ದಾಖಲು ಮಾಡಲು ಬಾಧ್ಯಸ್ಥನಾಗಿರುವ ಬೇರೆ ಯಾವುದೇ ವ್ಯಕ್ತಿಯು ಯಾವ ನ್ಯಾಯಾಲಯದಲ್ಲಿ ತಾನು ದಾವೆ ದಾಖಲು ಮಾಡಬಹುದಾಗಿದ್ದಿತೋ ಅಂತಹ ನ್ಯಾಯಾಲಯದಲ್ಲಿ ಒತ್ತಿ ಧಾರಕನ ಲೆಕ್ಕಕ್ಕೆ ಆ ಒತ್ತಿಯ ಆಧಾರದ ಮೇಲೆ ಬಾಕಿಯಾಗಿರುವ ಹಣವನ್ನು ಠೇವಾಗಿ ಇಡಬಹುದು.

"ಆ ನಂತರ ನ್ಯಾಯಾಲಯವು ಒತ್ತಿ ಧಾರಕನಿಗೆ ಒಂದು ಲೇಖೀ ನೋಟೀಸು ಜಾರಿಯಾಗುವಂತೆ ಮಾಡತಕ್ಕದ್ದು- ಮತ್ತು ಒತ್ತಿ ಧಾರಕನು ಒಂದು ಅರ್ಜಿಯನ್ನು ಸಲ್ಲಿಸಿ, (ಆ ಅರ್ಜಿಗೆ ಅಸಲರ್ಜಿಗೆ ಇರುವಂತಹ ಪ್ರತಿಜ್ಞಾ ಲೇಖವನ್ನು ಬರೆದು) ಆದರಲ್ಲಿ ಒತ್ತಿಯ ಮೇಲೆ ಸಲ್ಲಿಸಬೇಕಾಗಿದ್ದ ಹಣವನ್ನು ನಮೂದಿಸಿ ಠೇವಾಗಿಡಲ್ಪಟ್ಟ ಹಣವನ್ನು ಒತ್ತಿಯ ಹಣವು ಪೂರ್ತಿ ಸಂದಾಯವಾದಂತೆ ಎಂದು ಸ್ವೀಕರಿಸಲು ಒಪ್ಪಿಗೆಯನ್ನು ಕಾಣಿಸಬೇಕು. ಮತ್ತು ಒತ್ತಿಯ ಸಂಬಂಧವಾಗಿದ್ದ ಎಲ್ಲ ಕಾಗದ ಪತ್ರಗಳನ್ನು ಆ ನ್ಯಾಯಾಲಯದಲ್ಲಿ ಠೇವಾಗಿಡಬೇಕು. ಹೀಗೆ ಮಾಡಿ ಆ ಹಣ ಸ್ವೀಕರಿಸಲು ಅರ್ಜಿ ಮಾಡಬೇಕು. ಅವನು ಅಲ್ಲಿ ಠೇವಾಗಿಟ್ಟ ಒತ್ತಿ ಆಧಾರ ಪತ್ರ ಹಾಗೂ ಇತರ ಕಾಗದಗಳನ್ನು ಒತ್ತಿ ಹಾಕಿದವನಿಗೆ ಇಲ್ಲವೆ ಮೇಲೆ ಹೇಳಿದ ಬೇರೆ ವ್ಯಕ್ತಿಗೆ ಕೊಡಲ್ಪಡತಕ್ಕದ್ದು.

"ಒತ್ತಿಧಾರಕನು ಒತ್ತಿಹಾಕಲ್ಪಟ್ಟ ಆಸ್ತಿಯನ್ನು ಕಬಜಾ ಪಡೆದುಕೊಂಡಿದ್ದರೆ ನ್ಯಾಯಾಲಯದಲ್ಲಿ ಠೇವಾಗಿಡಲ್ಪಟ್ಟ ಹಣವನ್ನು ಅವನಿಗೆ ಕೊಡುವುದಕ್ಕಿಂತ ಮೊದಲು ಆ ಆಸ್ತಿಯನ್ನು ಒತ್ತಿ ಹಾಕಿದವನ ವೆಚ್ಚದಿಂದ ಒತ್ತಿ ಹಾಕಿದವನಿಗೆ ಇಲ್ಲವೆ ಅವನು ಹೇಳಿದ ಮೂರನೆಯ ವ್ಯಕ್ತಿಗೆ ಹಸ್ತಾಂತರಿಸಿ ಕೊಡತಕ್ಕದ್ದೆಂದು ನ್ಯಾಯಾಲಯವು ನಿರ್ದೇಶನ ಮಾಡತಕ್ಕದ್ದು. ಮತ್ತು ಒತ್ತಿಯ ಆಧಾರದ ಮೇಲೆ ಇರುವ ಹಕ್ಕುಗಳೆಲ್ಲ ನಷ್ಟವಾದುವು ಎಂಬ ಬಗ್ಗೆ ಪಾವತಿಯನ್ನು ನಿರ್ವಹಿಸಿ ಕೊಡಲು ಹೇಳತಕ್ಕದ್ದು."

ಕಲಮು ೮೪ ರಲ್ಲಿ ಹೀಗೆ ಹೇಳಿದೆ : "ಒತ್ತಿಯ ಆಧಾರದ ಮೇಲೆ ಸಲ್ಲಿಸಬೇಕಾಗಿದ್ದ ಹಣವನ್ನು ಒತ್ತಿ ಹಾಕಿದವನು ಇಲ್ಲವೆ ಬೇರೆ ವ್ಯಕ್ತಿಯು ಕಲಮು ೮೩ ಪ್ರಕಾರ ನ್ಯಾಯಾಲಯದಲ್ಲಿ ಠೇವು ಇಟ್ಟರೆ, ಹಾಗೆ ಠೇವು ಇಟ್ಟ ತಾರೀಖಿನಿಂದ ಆ ಮೂಲ ಹಣದ ಮೇಲಿನ ಬಡ್ಡಿಯು ಬೆಳೆಯುವುದು ನಿಲ್ಲುವುದು. ಠೇ

ಇಡಲ್ಪಟ್ಟ ಬಗ್ಗೆ ಕಲಮು ೮೩ ರ ಪ್ರಕಾರ ಕೊಟ್ಟ ನೋಟೀಸು ಜಾರಿಯಾದ ತಾರೀಖಿನಿಂದ ಬಡ್ಡಿಯು ಬೆಳೆಯುವುದು ನಿಲ್ಲುವುದು.

ಆದರೆ, ಹಾಗೆ ಠೇವು ಇಟ್ಟ ಹಣವನ್ನು ತಿರುಗಿ ತೆಗೆದುಕೊಂಡರೆ ತಿರುಗಿ ತೆಗೆದುಕೊಂಡ ತಾರೀಖಿನಿಂದ ಮತ್ತೆ ಬಡ್ಡಿಯು ಬೆಳೆಯತೊಡಗುವುದು.

ಒತ್ತಿ ಹಣವನ್ನು ಮರಳಿ ಕೊಡುವ ಬಗ್ಗೆ ಒತ್ತಿಧಾರಕನಿಗೆ ನೋಟೀಸು ಕೊಡಬೇಕೆಂದು ಕರಾರು ಆಗಿದ್ದರೆ, ಆ ತರಹದ ನೋಟೀಸು ಅವನ ಮೇಲೆ ಜಾರಿ ಆಗುವ ತನಕ ಆ ಮೂಲಹಣದ ಮೇಲೆ ಬಡ್ಡಿಯನ್ನು ಪಡೆದುಕೊಳ್ಳಲು ಈ ಕಲಮಿನಲ್ಲಿ ಹೇಳಿದ ಇಲ್ಲವೆ ಕಲಮು ೮೩ರಲ್ಲಿ ಹೇಳಿದ ಯಾವ ಮಾತೂ ಬಾಧಿಸುವುದಿಲ್ಲ."

ಆಸ್ತಿಹಸ್ತಾಂತರ ಕಾಯಿದೆಯ ಕಲಮು ೮೩-೮೪ ರಲ್ಲಿ ಹೀಗೆಲ್ಲ ಹೇಳಿದ್ದರೂ ಆ ಮಾತುಗಳು ಈ ಸಹಕಾರಿ ಸಂಘಗಳ ಕಾಯಿದೆಯ ಕಲಮು ೮೭ ರಲ್ಲಿ ಹೇಳಿದ ಮಾತುಗಳಿಗೆ ಬಾಧೆ ತರುವುದಿಲ್ಲ. ಲ್ಯಾಂಡ ಮಾರ್ಗೇಜ ಬ್ಯಾಂಕು ಆ ಸದಸ್ಯನ ಮೊದಲಿನ ಸಾಲದ ಬಗ್ಗೆ ಆ ಧನಕೋನಿಗೆ ನೋಟೀಸು ಕೊಟ್ಟು, ಅದರಲ್ಲಿ ಕಾಣಿಸಿದ ಕಾಲಾವಧಿಯಲ್ಲಿ, ಬ್ಯಾಂಕಿನ ರಜಿಸ್ಟರ್ಡ ಕಚೇರಿಯಲ್ಲಿ ಬಂದು ಹಣವನ್ನು ಸ್ವೀಕರಿಸಬೇಕೆಂದು ಹೇಳಬಹುದು.

ಆ ಮೂಲ ಧನಕೋನು ನೋಟೀಸು ಸ್ವೀಕರಿಸಲು ಇಲ್ಲವೆ ಹಣವನ್ನು ಸ್ವೀಕರಿಸಲು ತಪ್ಪಿದರೆ, ಆ ನೋಟೀಸಿನಲ್ಲಿ ಕಾಣಿಸಿದ ಕಾಲಾವಧಿಯು ಮುಗಿದಂದಿನಿಂದ ಆ ಸಾಲದ ಹಣದ ಮೇಲಿನ ಬಡ್ಡಿಯು ಬೆಳೆಯುವುದು ನಿಲ್ಲುವುದು.

ಸಾಲದ ಹಣದ ಬಗ್ಗೆ ತಂಟೆ ಉಂಟಾಗಿದ್ದರೆ ಬ್ಯಾಂಕು ಕೊಡಮಾಡುವ ಹಣವನ್ನು ಆ ಧನಕೋನು ಸ್ವೀಕರಿಸಲಿಕ್ಕೇಬೇಕು. ಆದರೆ ತನಗೆ ಇನ್ನೂ ಹೆಚ್ಚಿಗೆ ಸಲ್ಲಬೇಕಾಗಿದೆಯೆಂದು ನಂಬಿರುವ ಧನಕೋನು ಆ ಹೆಚ್ಚಿನ ಹಣದ ಬಗ್ಗೆ ವಸೂಲು ಮಾಡಿಕೊಳ್ಳುವ ಯಾವುದೇ ಕ್ರಮ ತೆಗೆದುಕೊಳ್ಳಲು ಅವನ ಹಕ್ಕಿಗೆ ಯಾವ ಬಾಧೆಯೂ ಬರುವುದಿಲ್ಲ ಎಂಬುದನ್ನು ಸ್ಪಷ್ಟಪಡಿಸಲಾಗಿದೆ.

ಬ್ಯಾಂಕಿನ ಸದಸ್ಯನ ಮೊದಲಿನ ಸಾಲಗಳು ಎಷ್ಟಿವೆ ಎಂಬುದನ್ನು ತಿಳಿದುಕೊಳ್ಳಲು ಬ್ಯಾಂಕು ಆ ಸದಸ್ಯನ ಧನಕೋ ಜನರಿಂದ ವಿವರವನ್ನು ಪಡೆದುಕೊಳ್ಳುವ ಅಧಿಕಾರ ಕೊಡಲಾಗಿದೆ. ಆ ಸದಸ್ಯನಿಂದ ಧನಕೋನಿಗೆ ಹಣ ಎಷ್ಟು ಬರಬೇಕಾಗಿದೆ; ಆ ಬಗ್ಗೆ ಕಾಗದಪತ್ರ ಏನು ಇವೆ. ಮುಂತಾದ ಎಲ್ಲ ಮಾಹಿತಿಯನ್ನು ಒದಗಿಸು ಧನಕೋನಿಗೆ ಹೇಳಬಹುದಾಗಿದೆ. ಹೀಗೆ ಬೇಡಿದ ಮಾಹಿತಿಯನ್ನು ಆ ಧನಕೋನು ಒದಗಿಸತಕ್ಕದ್ದು.

ಅಂದರೆ, ಸದಸ್ಯನ ಮೊದಲಿನ ಸಾಲತೀರಿಸಲು ಬ್ಯಾಂಕಿಗೆ ಅನುಕೂಲವಾಗುವುದು. ಸಾಲವು ಕಾಯಿದೇಶೀರ ರೀತಿಯಿಂದ ತೀರಿಸಲ್ಪಡಲಾಗುವುದು;

## ೭೮. ಜಪ್ತಿ—ಯಾವಾಗ ಮಾಡಬೇಕು ?.

(೧) ಲ್ಯಾಂಡ ಮಾರ್ಗೇಜ ಬ್ಯಾಂಕಿನ ಪರವಾಗಿ ನಿರ್ವಹಿಸಿ ಕೊಡಲ್ಪಟ್ಟ ಒತ್ತಿ ಆಧಾರದನ್ವಯವಾಗಿ ಕೊಡಬೇಕಾದ ಯಾವುದೇ ಕಂತು ಇಲ್ಲವೆ ಈ ಕಂತಿನ ಯಾವುದೇ ಭಾಗವು, ಅದನ್ನು ಸಲ್ಲಿಸಲ್ಪಡಬೇಕಾದ್ದ ತಾರೀಖಿನಿಂದ ಒಂದು ತಿಂಗಳ ಕಿಂತಲೂ ಹೆಚ್ಚು ಕಾಲಾವಧಿಯ ವರೆಗೆ ಸಲ್ಲಿಸದೆ ಉಳಿದರೆ, ಆ ಬಗ್ಗೆ ದೊರಕಬಹು ದಾದ ಬೇರೆ ಉಪಾಯಗಳ ಜತೆಗೆ, ಒತ್ತಿ ಹಾಕಲ್ಪಟ್ಟ ಭೂಮಿಯು, ಅದರ ಮೇಲಿ ನಿಂತ ಬೆಳೆಯನ್ನು ಒಳಗೊಂಡು ಅಂತಹ ಕಂತಿನ ಇಲ್ಲವೆ ಅದರ ಭಾಗದ ಹಣದ ವಸೂಲಿಯ ಸಲುವಾಗಿ ಅದರ ಹುಟ್ಟುವಳಿಯನ್ನು ಒಪ್ತಿ ಮಾಡಿಸಿ ಮಾರಾಟ ಮಾಡಿಸಲು ಕಮಿಟಿಯು ರಜಿಸ್ಟ್ರಾರನಿಗೆ ಅರ್ಜಿ ಮಾಡಬಹುದು.

(೨) ಇಂತಹ ಅರ್ಜಿಯು ಸ್ವೀಕೃತವಾದ ನಂತರ, ೧೮೮೨ ( ಕೇಂದ್ರ ಕಾಯಿದೆ ನಂ-೪-೧೮೮೨ ) ರ ಆಸ್ತಿ ಹಸ್ತಾಂತರ ಕಾಯಿದೆಯಲ್ಲಿ ಏನೇ ಹೇಳಲಾಗಿ ದ್ದರೂ ಇಂತಹ ಹುಟ್ಟುವಳಿಯನ್ನು ಒತ್ತಿ ಮಾಡುವ ಹಾಗೂ ಮಾರಾಟ ಮಾಡುವ ಉದ್ದೇಶಕ್ಕಾಗಿ ಗೊತ್ತುಮಾಡಿದ ರೀತಿಯಲ್ಲಿ ಕ್ರಮ ತೆಗೆದುಕೊಳ್ಳಬಹುದು.

ಆದರೆ, ಆ ಕಂತು ಸಲ್ಲಿಸಲ್ಪಡಲು ಗೊತ್ತುಮಾಡಿದ ತಾರೀಖಿನಿಂದ ಹನ್ನೆರಡು ತಿಂಗಳು ಮುಗಿದ ನಂತರ ಯಾವುದೇ ಜಪ್ತಿಯು ಮಾಡಲ್ಪಡತಕ್ಕದಲ್ಲ.

(೩) ಜಪ್ತಿ ಮಾಡಲ್ಪಟ್ಟ ಆಸ್ತಿಯ ಬೆಲೆಯು ಶಕ್ಯವಾದಷ್ಟು ಮಟ್ಟಿಗೆ, ಬಾಕಿಯಾಗಿದ್ದ ಹಣ, ಜಪ್ತಿಯ ಹಾಗೂ ಮಾರಾಟ ಮಾಡುವ ವೆಚ್ಚದ ಹಣ ಇದ್ದರೆ ಸಮವಾಗುವಂತೆ ಇರತಕ್ಕದ್ದು.

**ವಿವೇಚನೆ**

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಾಕಿದ ಒತ್ತಿಯ ಆಧಾರದ ಮೇಲೆ ಪಡೆದ ಸಾಲದ ಹಣವು ಕಂತಿನಿಂದ ಮರಳಿಸಬೇಕಾದಾಗ ಕಂತನ್ನು ಎಂದು ಕೊಡಬೇಕೆಂದು ಗೊತ್ತು ಮಾಡಲ್ಪಟ್ಟಿರುವುದೋ ಅಂದು ಅದು ಕೊಡಲ್ಪಡದೆ ಇದ್ದರೆ, ಹಾಗೂ ಆ ತಾರೀಖಿನಿಂದ ಒಂದು ತಿಂಗಳದ ವರೆಗೂ ಕೊಡಲ್ಪಡದೆ ಇದ್ದರೆ ಜಪ್ತಿಯ ಅಧಿಕಾರ ಹುಟ್ಟುವುದು. ಈ ಜಪ್ತಿಯ ಅಧಿಕಾರವು ಹುಟ್ಟಿದ್ದರೂ ಬೇರೆ ಕ್ರಮಕೊಳ್ಳಲು ಇರುವುದನ್ನು ತಡೆಗಟ್ಟುವುದಿಲ್ಲ. ಬೇರೆ ಉಪಾಯಗಳನ್ನು ವಸೂಲಿಯ ಸಲುವಾಗಿ ಕೈಕೊಳ್ಳಬಹುದು. ಆದರೆ ಒತ್ತಿಯ ಬಗ್ಗೆ ಕ್ರಮಕೈಕೊಳ್ಳಬೇಕಾದರೆ ಏನು ಮಾಡ ಬೇಕು ಎಂಬುದನ್ನು ಮಾತ್ರ ಇಲ್ಲಿ ಹೇಳಲಾಗಿದೆ.

ಕಂತು ಸಲ್ಲಿಸಲು ಯೋಗ್ಯವಾದ ತಾರೀಖಿನಿಂದ ನಂತರ ಒಂದು ತಿಂಗಳು ಸಂದು ಹೋದರೂ ಕಂತು ಇಲ್ಲವೆ ಅದರ ಭಾಗ ಕೊಡಲ್ಪಟ್ಟದೆ ಇದ್ದರೆ ಕಮಿಟಿಯು ರಜಿಸ್ಟ್ರಾರನಿಗೆ ಅರ್ಜಿ ಮಾಡಬೇಕು. ಯಾವ ಭೂಮಿಯನ್ನು ಒತ್ತಿ ಹಾಕಿ ಸಾಲ ಪಡೆಯಲಾಗಿರುವುದೋ ಆ ಭೂಮಿಯ ಮೇಲಿನ ಹುಟ್ಟುವಳಿ-ಇದು ನಿಂತ ಬೆಳೆ ಯನ್ನು ಒಳಗೊಳ್ಳುವುದು-ಯನ್ನು ಜಪ್ತ ಮಾಡಿಸಿ ಮಾರಾಟ ಮಾಡಿಸುವುದಕ್ಕಾಗಿ ರಜಿಸ್ಟ್ರಾರನಿಗೆ ಅರ್ಜಿಮಾಲ್ಪಡಬೇಕು.

ಹೀಗೆ ಅರ್ಜಿ ಬಂದನಂತರ ರಜಿಸ್ಟ್ರಾರರು ಜಪ್ತಿಯ ಬಗ್ಗೆ ಹಾಗೂ ಮಾರಾಟದ ಬಗ್ಗೆ ಕ್ರಮ ಕೈಕೊಳ್ಳಬಹುದು. ಈ ಕ್ರಮವು ಹೇಗೆ ಎಂಬುದು ಗೊತ್ತು ಮಾಡಲ್ಪಟ್ಟಿರುವುದು. ನಿಯಮಗಳು ಆ ಬಗ್ಗೆ ದಾರಿತೋರುವುವು. ಆ ರೀತಿಯಲ್ಲಿ ಜಪ್ತಿ-ಹಾಗೂ ಮಾರಾಟ ಮಾಡಿಸಬಹುದು. ಈ ಅಧಿಕಾರಕ್ಕೆ ಆಸ್ತಿ ಹಸ್ತಾಂತರ ಕಾಯಿದೆಯ ಶರತುಗಳು ಅಡ್ಡಿಬರುವುದಿಲ್ಲ. ಆಸ್ತಿ ಹಸ್ತಾಂತರ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಜಪ್ತಿ ಹಾಗೂ ಮಾರಾಟ ಮಾಡಿಸುವ ರಜಿಸ್ಟ್ರಾರನ ಅಧಿಕಾರಕ್ಕೆ ಅಡ್ಡಿ ಬರುವುದಿಲ್ಲ. ಆ ಕಾಯಿದೆಯ ಪ್ರಕಾರ ಜಪ್ತಿ-ಹಾಗೂ ಮಾರಾಟಗಳು ಒತ್ತಿ ಆಸ್ತಿಯ ಸಂಬಂಧವಾಗಿದ್ದರೆ ದಾವೆ ಮಾಡಲ್ಪಡಬೇಕಾಗುವುದು ಅಂದರೆ ನ್ಯಾಯಾಲಯದ ಹುಕುಮಿನ ಹೊರತು ಜಪ್ತಿ ಹಾಗೂ ಮಾರಾಟ ಮಾಡಿಸಲು ಬರಲಾರದು. ಈ ನಿರ್ಬಂಧವು ಈ ಕಲಮಿನನ್ವಯವಾಗಿರುವ ರಜಿಸ್ಟ್ರಾರನ ಅಧಿಕಾರಕ್ಕೆ ಬಾಧೆ ತರಲಾರದು ಎಂದು ಹೇಳಲಾಗಿದೆ. ಅಂದರೆ ನ್ಯಾಯಾಲಯದಲ್ಲಿ ದಾವೆ ಮಾಡದೆ, ನೇರವಾಗಿ ರಜಿಸ್ಟ್ರಾರನು ಜಪ್ತಿ ಹಾಗೂ ಮಾರಾಟ ಮಾಡಿಸಬಹುದು.

ಒತ್ತಿ ಹಾಕಿದ ಭೂಮಿಯ ಮೇಲಿನ ಹುಟ್ಟುವಳಿಯ ಜಪ್ತಿ ಹಾಗೂ ಮಾರಾಟ ನಿಂತ ಬೆಳೆಯೂ ಆಗಿರಬಹುದು. ಇಲ್ಲವೆ ಶೇಖರಿಸಿಟ್ಟ ಹುಟ್ಟುವಳಿಯೂ ಆಗಿರಬಹುದು. ಹಾಗೆ ಜಪ್ತಿಯನ್ನು ಮಾಡುವುದಿದ್ದರೆ ಅದು ಆ ಕಂತು ಸಲ್ಲಿಸಲ್ಪಡಬೇಕಾಗಿದ್ದ ತಾರೀಖಿನಿಂದ ಹನ್ನೆರಡು ತಿಂಗಳ ಒಳಗೆ ಮಾಡಬೇಕು. ಆ ನಂತರ ಮಾಡಲು ಬರುವುದಿಲ್ಲ ಎಂದು ಹೇಳಲಾಗಿದೆ. ಆ ಕಂತಿನ ಸಲುವಾಗಿ ಹನ್ನೆರಡು ತಿಂಗಳ ನಂತರ ಜಪ್ತಿ ಮಾಡಲು ಬರುವುದಿಲ್ಲ. ಕಮಿಟಿಯು ಜಾಗರೂಕರಾಗಿರಬೇಕು. ಎಂಬುದು ಒಂದು ಮಾತಾದರೆ, ಇನ್ನೊಂದು ಕಂತು ಸಲ್ಲಿಸುವ ತಾರೀಖು ಬಂದರೂ ಹಿಂದಿನ ಕಂತಿನ ಬಗ್ಗೆ ಕ್ರಮಕೈಕೊಂಡಿಲ್ಲವೆಂಬುದು ಗೌಣ ಎಂಬುದು ಹೇಳಲಾಗಿದೆ

ಜಪ್ತಿಯನ್ನು ಮಾಡುವಾಗ ಒಂದು ಮಾತು ಲಕ್ಷಿಸಬೇಕೆಂದು ಹೇಳಲಾಗಿದೆ. ಕಂತಿನ ಹಣವು ಬಾಕಿಯಾಗಿ ಉಳಿದ ಹಣ, ಜಪ್ತಿಯವೆಚ್ಚ ಹಾಗೂ ಮಾರಾಟದ ವೆಚ್ಚಕೂಡಿ ಆಗುವ ಬೆಲೆಯ ಸಮೀಪಬರುವಷ್ಟು ಬೆಲೆಯ ಆಸ್ತಿಯನ್ನು ಜಪ್ತಮಾಡಬೇಕು ಎಂದು ಹೇಳಲಾಗಿದೆ. ಶಕ್ಯವಾದಷ್ಟುಮಟ್ಟಿಗೆ, ಎಂದು ಹೇಳಿದೆ. ತೀರ ಹೆಚ್ಚು ಆಸ್ತಿಯನ್ನು ಜಪ್ತಮಾಡಬಾರದು ಎಂದು ನಿರ್ಬಂಧ ಹಾಕಲಾಗಿದೆ. ಅದರಂತೆ ಒಂದುವೇಳೆ ಹೆಚ್ಚು ಬೆಲೆಯ ಆಸ್ತಿ ಜಪ್ತಿ ಮಾಡಲ್ಪಟ್ಟರೆ, ಶಕ್ಯವಾದಷ್ಟು ಮಟ್ಟಿಗೆ ಎಂಬ ಶಬ್ದದಿಂದ ಅಧಿಕಾರಿಗಳಿಗೆ ರಕ್ಷಣೆಯನ್ನು ಕೊಡಲಾಗಿದೆ. ಬುದ್ಧಿಪೂರ್ವಕವಾಗಿ ಲುಕ್ಸಾನು ಆಗಿರಬಾರದೆಂಬುದು ಒಂದು ಮಾತಾದರೆ ಕೆಲಸ ಮಾಡುವಾಗ ತುಸು ಹೆಚ್ಚುಕಡಿಮೆ ಆಗುವುದನ್ನು ಲಕ್ಷಿಸಿ ಮನ್ನಿಸಬೇಕಾಗುವುದರಿಂದ ಶಕ್ಯವಾದಷ್ಟುಮಟ್ಟಿಗೆ, ಎಂದು ಹೇಳಲಾಗಿದೆ. ಬೆಲೆಯನ್ನು ನಿಶ್ಚಿತಗೊಳಿಸುವುವು ಸುಲಭವಲ್ಲ. ಅದಕ್ಕೆ ಈ ರಕ್ಷಣೆ.

**೮೯ ಮಾರಾಟದ ಅಧಿಕಾರವನ್ನು ಯಾವಾಗ ನಡೆಸಬೇಕು.**

(೧) ೧೮೮೨ ( ಕೇಂದ್ರಕಾಯಿದೆ ೪—೧೮೮೨ ) ರ ಆಸ್ತಿ ಹಸ್ತಾಂತರ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ನ್ಯಾಯಾಲಯದ ನೆರವಿಲ್ಲದೆ ಮಾರಾಟ ಮಾಡಿಸುವ ಅಧಿಕಾರವು ಒತ್ತಿಪತ್ರದಿಂದ ಲ್ಯಾಂಡಮಾರ್ಗೇಜ ಬ್ಯಾಂಕಿಗೆ ದಯ ಪಾಲಿಸಲ್ಪಟ್ಟಿರುವಾಗ, ಇಂತಹ ಬ್ಯಾಂಕಿನ ಕಮಿಟಿ ಇಲ್ಲವೆ ಈ ಸಂಬಂಧದಲ್ಲಿ ಕಮೀಟಿಯಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ಒತ್ತಿ ಆಧಾರದ ಮೇಲೆ ಕೊಟ್ಟ ಹಣ ಇಲ್ಲವೆ ಅದರ ಯಾವುದೇ ಭಾಗವನ್ನು ಮರಳಿ ಕೊಡಲು ತಪ್ಪಿದರೆ, ಬ್ಯಾಂಕಿಗೆ ದೊರಕುವ ಬೇರೆ ಉಪಾಯಗಳ ಜತೆಗೆ, ನ್ಯಾಯಾಲಯದ ನೆರವಿಲ್ಲದೆ ಒತ್ತಿ ಆಧಾರದ ಆಸ್ತಿಯನ್ನು ಮಾರಾಟಕ್ಕೆ ತರಲು ಅಧಿಕಾರ ಇರತಕ್ಕದ್ದು.

(೨) ಇಂತಹ ಯಾವುದೇ ಅಧಿಕಾರವು—

(ಅ) ಉಪ ಕಲಮು (೧) ರಿಂದ ದಯಪಾಲಿಸಲಾದ ಅಧಿಕಾರವನ್ನು ನಿರ್ವಹಿಸಲು ಬೋರ್ಡು ಮುಂಚಿತವಾಗಿ ಅಧಿಕರಿಸಿದ ಹೊರತು ಮತ್ತು ಅಧಿಕರಿಸುವ ತನಕ ಒತ್ತಿ ಹಾಕಿದವನ ತಕರಾರುಗಳು ಯಾವುದಾದರೂ ಇದ್ದರೆ ಅವುಗಳನ್ನು ಕೇಳಿಕೊಳ್ಳುವ ಹೊರತು ಇಲ್ಲವೆ ಕೇಳಿಕೊಳ್ಳುವ ತನಕ ನಿರ್ವಹಿಸಲ್ಪಡತಕ್ಕದಲ್ಲ;

(ಬ) ಇಂತಹ ಒತ್ತಿಅಧಾರದ ಮೇಲೆ ಕೊಟ್ಟ ಹಣವನ್ನು ಮರಳಿ ಕೊಡಬೇಕೆಂದು ಲೇಖೀ ನೋಟೀಸು—

(i) ಒತ್ತಿಹಾಕಿದವನ ಮೇಲೆ ಜಾರಿ ಆಗುವ ತನಕ ಮತ್ತು ವರೆಗೆ,

(ii) ಒತ್ತಿಹಾಕಿದ ಆಸ್ತಿಯ ಮೇಲೆ ಯಾವುದೇ ಹಿತಸಂಬಂಧ ಇಲ್ಲವೆ ಅಧಿಕಾರ ಭಾರ ಇರುವ ಇಲ್ಲವೆ ಆ ಆಸ್ತಿಯನ್ನು ವಿಮೋಚನೆ ಮಾಡಲು ಯಾವುದೇ ಹಿತಸಂಬಂಧ ಇಲ್ಲವೆ ಅಧಿಕಾರ ಭಾರ ಇರುವ ಯಾವುದೇ ವ್ಯಕ್ತಿಯ ಮೇಲೆ ಜಾರಿ ಆಗುವ ತನಕ ಇಲ್ಲವೆ ವರೆಗೆ-

(iii) ಒತ್ತಿ ಆಧಾರದ ಮೇಲೆ ಇರುವ ಸಾಲದ ಹಣ ಇಲ್ಲವೆ ಅದರ ಯಾವುದೇ ಭಾಗದ ಹಣವನ್ನು ಮರಳಿ ಕೊಡುವುದರ ಸಲುವಾಗಿ ಇರುವ ಯಾವುದೇ ಜಾಮೀನುದಾರನ ಮೇಲೆ ಜಾರಿ ಆಗುವ ತನಕ ಇಲ್ಲವೆ ವರೆಗೆ,

(iv) ಒತ್ತಿಹಾಕಿದವನ ಆಸ್ತಿಯ ಆಡಳಿತದ ಸಲುವಾಗಿ ಮಾಡಿದ ದಾವೆಯಲ್ಲಿ ಒತ್ತಿಹಾಕಿದ ಆಸ್ತಿಯ ಮಾರಾಟದ ಸಲುವಾಗಿ ಯಾರು ಡಿಕ್ರಿಪಡೆದುಕೊಂಡಿರುವರೋ ಅಂತಹ ಒತ್ತಿ ಹಾಕಿದವನ ಧನಕೋನ ಮೇಲೆ ಜಾರಿ ಆಗುವ ತನಕ ಇಲ್ಲವೆ ವರೆಗೆ- ನಿರ್ವಹಿಸಲ್ಪಡತಕ್ಕದ್ದಲ್ಲ; ಮತ್ತು

(ಕ) ಇಂತಹ ಜಾರಿಮಾಡಲ್ಪಟ್ಟ ನಂತರ ಮೂರು ತಿಂಗಳ ವರೆಗೆ ಇಂತಹ ಒತ್ತಿ ಹಣ ಇಲ್ಲವೆ ಅದರ ಭಾಗವನ್ನು ಮರಳಿ ಸಲ್ಲಿಸುವುದರಲ್ಲಿ ತಪ್ಪದ ಹೊರತು ಇಲ್ಲವೆ ತಪ್ಪುವ ವರೆಗೆ ನಿರ್ವಹಿಸಲ್ಪಡತಕ್ಕದ್ದಲ್ಲ.

(೩) ಈ ಕಲಮಿನನ್ವಯವಾಗಿರುವ ಒತ್ತಿಆಸ್ತಿಯ ಮಾರಾಟವು ಗೊತ್ತು ಮಾಡಬಹುದಾದಂತಹ ರೀತಿಯ ಹೊರತು ಮತ್ತು ಗೊತ್ತು ಮಾಡಿದ ಹಣವನ್ನು ಕೇವು ಇಟ್ಟರೆ ಮಾರಾಟವನ್ನು ರದ್ದುಗೊಳಿಸುವ ಮತ್ತು ಮಾರಾಟವನ್ನು ಸ್ವೀಕರಿಸುವ ಕರಾರುಗಳನ್ನು ಒಳಗೊಂಡು ಇರುವ ಅಂತಹ ಕರಾರುಗಳಿಗೆ ಅಂಕಿತವಾಗಿರುವ ಹೊರತು ಯಾವುದೇ ಮಾರಾಟವು ನಡೆಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಒತ್ತಿ ಆಸ್ತಿಯ ಮಾರಾಟದ ಅಧಿಕಾರವನ್ನು ಹೇಗೆ ನಡೆಸಬೇಕು ? ಒತ್ತಿ ಆಸ್ತಿಯ ಮಾರಾಟದ ಸಲುವಾಗಿ ಆಸ್ತಿ ಹಸ್ತಾಂತರ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಈ ಕಲಮಿನಲ್ಲಿ ಹೇಳಿದ ಕ್ರಮವನ್ನು ಅದು ಬಾಧಿಸುವುದಿಲ್ಲ. ಆಸ್ತಿ ಹಸ್ತಾಂತರ ಕಾಯಿದೆಯ ಪ್ರಕಾರ ಒತ್ತಿ ಆಸ್ತಿಯ ಮಾರಾಟವು ನ್ಯಾಯಾಲಯದ ನೆರವಿನಿಂದ ಆಗಬೇಕಾಗುವುದು. ಆ ಮಾತು ಹಾಗಿದ್ದರೂ ಈ ಕಲಮಿನ ಅಧಿಕಾರಕ್ಕೆ ವ್ಯತ್ಯಯ ಬರುವುದಿಲ್ಲ ಎಂದು ಹೇಳಲಾಗಿದೆ.

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಾಕಿದ ಒತ್ತಿ ಆಸ್ತಿಯ ಮಾರಾಟದ ಬಗ್ಗೆ ಒತ್ತಿ ಪತ್ರದಲ್ಲಿ ಸ್ಪಷ್ಟವಾಗಿ ಹಾಗೂ ನಿರ್ದಿಷ್ಟವಾಗಿ ನ್ಯಾಯಾಲಯದ ನೆರವಿಲ್ಲದೆ ಮಾರಾಟ ಮಾಡಿಸುವ ಅಧಿಕಾರವನ್ನು ಬ್ಯಾಂಕಿಗೆ ಕೊಡಲ್ಪಟ್ಟಿದ್ದರೆ, ಆಸ್ತಿ ಹಸ್ತಾಂತರ ಕಾಯಿದೆಯ ಶರತುಗಳು ಅಡ್ಡಿಯಾಗಲಾರವು. ಹೀಗಿರುವಾಗ ಒತ್ತಿ ಹಾಕಿದವನು ಒತ್ತಿ ಹಣವನ್ನು ಇಲ್ಲವೆ ಅದರ ಭಾಗವನ್ನು ಮರಳಿ ಕೊಡಲು ತಪ್ಪಿದರೆ, ಬ್ಯಾಂಕಿನ ಕಮಿಟಿ ಇಲ್ಲವೆ ಇಂತಹ ಕಮಿಟಿಯಿಂದ ಈ ಸಂಬಂಧವಾಗಿ ಅಧಿಕರಿಸಲ್ಪಟ್ಟ ವ್ಯಕ್ತಿಯು ನೇರವಾಗಿ, ಅಂದರೆ ನ್ಯಾಯಾಲಯದ, ನೆರವಿಲ್ಲದೆ ಆ ಒತ್ತಿ ಆಸ್ತಿಯನ್ನು ಮಾರಾಟಕ್ಕೆ ತೆಗೆಯಬಹುದು. ಈ ಅಧಿಕಾರ ನಡೆಸುವುದರಿಂದ ಬ್ಯಾಂಕಿಗೆ ಈ ಹಣ ವಸೂಲಿಗಾಗಿ ಇದ್ದ ಬೇರೆ ಉಪಾಯಗಳಿಗೆ ವ್ಯತ್ಯಯ ಬಂದಂತೆ ಆಗುವುದಿಲ್ಲ. ಆ ಉಪಾಯಗಳನ್ನು ಕೈಕೊಳ್ಳಲೂ ಬರುವುದು.

ನ್ಯಾಯಾಲಯದ ನೆರವಿಲ್ಲದೆ ಒತ್ತಿ ಆಸ್ತಿಯ ಮಾರಾಟ ಮಾಡಿಸಬೇಕಾದರೆ ಕೆಲವು ಮಾತುಗಳನ್ನು ಲಕ್ಷಿಸಬೇಕು.

ಒಂದು, ಒತ್ತಿ ಹಾಕಿದವನ ತಕರಾರು ಏನಾದರೂ ಇದ್ದರೆ ಅದನ್ನು ಕೇಳಿ ಕೊಳ್ಳಬೇಕು. ಮತ್ತು ಬೋರ್ಡು ಈ ಸಂಬಂಧವಾಗಿ ಅಧಿಕಾರ ನಡೆಸಲು ಮುಂಚಿತವಾಗಿ ಅಧಿಕಾರ ಕೊಟ್ಟಿರಬೇಕು.

ಎರಡು, ಈ ಒತ್ತಿ ಹಣವನ್ನು ಇಲ್ಲವೆ ಅದರ ಭಾಗವನ್ನು ಮರಳಿ ಸಲ್ಲಿಸಬೇಕೆಂದು ಲೇಖೀ ನೋಟೀಸನ್ನು, ಒತ್ತಿ ಹಾಕಿದವನ ಮೇಲೆ, ಒತ್ತಿ ಆಸ್ತಿಯ ಮೇಲೆ ಯಾವುದೇ ಹಿತಸಂಬಂಧ ಇರುವ ಇಲ್ಲವೆ ಅದರ ವಿಮೋಚನ ಮಾಡಿಕೊಳ್ಳುವ ಹಿತಸಂಬಂಧ ಇರುವ ಯಾವುದೇ ವ್ಯಕ್ತಿಯ ಮೇಲೆ, ಒತ್ತಿ ಹಣದ ಸಂಬಂಧವಾಗಿ ಇರುವ ಜಾಮೀನುದಾರನ ಮೇಲೆ ಮತ್ತು ಒತ್ತಿ ಹಾಕಿದವನ

ಧನಕೋನ ಮೇಲೆ, ಜಾರಿ ಮಾಡಿದ ಹೊರತು ಮತ್ತು ಜಾರಿ ಮಾಡುವ ತನಕ ಆ ಅಧಿಕಾರ ನಡೆಸಲು ಬರುವುದಿಲ್ಲ. ಅಂದರೆ, ಆ ಎಲ್ಲ ಜನರ ಮೇಲೆ ನೋಟೀಸು ಜಾರಿ ಆಗಬೇಕು.

ಮೂರು, ನೋಟೀಸು ಜಾರಿ ಆದ ಮೇಲೆ ಮೂರು ತಿಂಗಳ ವರೆಗೆ , ಆ ಒತ್ತಿ ಹಣವನ್ನು ಸಲ್ಲಿಸದೆ ತಪ್ಪು ಆಗಿರಬೇಕು.

ಹೀಗೆ ಪರಿಸ್ಥಿತಿ ಉಂಟಾದರೆ ಮಾತ್ರ ಮಾರಾಟ ಮಾಡಿಸುವ ಅಧಿಕಾರ ನಡೆಸಲು ಬರುವುದು; ಇಲ್ಲದಿದ್ದರೆ ಇಲ್ಲ.

ಮಾರಾಟವನ್ನು ಈ ಕಲಮಿನ ಪ್ರಕಾರ ಮಾಡಿಸುವುದೇ ಆದಲ್ಲಿ ಅದರ ರೀತಿ ಹಾಗೂ ಕರಾರುಗಳು ಏನು? ಈ ರೀತಿ ಹಾಗೂ ಕರಾರುಗಳನ್ನು ನಿಯಮಗಳು ಗೊತ್ತು ಮಾಡುವುವು. ಆ ಕರಾರಿನಲ್ಲಿ, ಮಾರಾಟವನ್ನು ಹೇಗೆ ಸ್ಥಿರೀಕರಿಸಬೇಕು ಎಂಬುದು ಇರುವುದು, ಮಾರಾಟ ಆದ ಮೇಲೆ ಗೊತ್ತುಮಾಡಿದ ಹಣವನ್ನು ಠೇವಾಗಿ ಇಟ್ಟರೆ, ಸ್ಥಿರೀಕರಿಸಬಹುದು; ಒತ್ತಿ ಹಾಕಿದವನು ಠೇವಾಗಿ ಇಟ್ಟರೆ ಮಾರಾಟವನ್ನು ರದ್ದುಮಾಡಬಹುದು ಎಂಬ ಕರಾರುಗಳನ್ನು ಒಳಗೊಂಡಿರುವುವು. ಇಂತಹ ಕರಾರುಗಳ ಅಂಕಿತವಾಗಿ ಹಾಗೂ ನಿಯಮಗಳು ಹೇಳಿದ ರೀತಿಯಂತೆ ಮಾರಾಟವು ನಡೆಯತಕ್ಕದ್ದು. ಬೇರೆ ರೀತಿಯಂತೆ ಅಲ್ಲ.

## ೯೦. ಒತ್ತಿ ಆಸ್ತಿಯು ಹಾಳಾದರೆ ಇಲ್ಲವೆ ಭದ್ರತೆಯ ಜಾಮೀನು ಸಾಕಷ್ಟು ಅನ್ನಿಸದಿದ್ದರೆ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಅಧಿಕಾರ

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಒತ್ತಿಹಾಕಿದ ಆಸ್ತಿಯು ಇಡಿಯಾಗಿ ಇಲ್ಲವೆ ಅಂಶತಃ ಹಾಳಾಗಿರುವಾಗ ಇಲ್ಲವೆ ಭದ್ರತೆಯ ಜಾಮೀನು ಕಡಿಮೆಯಾಗಿರುವಾಗ ಮತ್ತು ಲ್ಯಾಂಡ ಮಾರ್ಗೇಜ ಬ್ಯಾಂಕಿನ ಕಮಿಟಿಯಿಂದ ಒತ್ತಿಹಾಕಿದವನಿಗೆ ಭದ್ರತೆಯ ಜಾಮೀನು ಸಾಕಷ್ಟು ಆಗುವಂತೆ ಹೆಚ್ಚು ಜಾಮೀನನ್ನು ಇಲ್ಲವೆ ಕಮಿಟಿಯಿಂದ ನಿರ್ಧರಿಸಲ್ಪಡಬಹುದಾದಂತಹ ಸಾಲದ ಹಣದ ಭಾಗವನ್ನು ಮರಳಿ ಕೊಡುವುದನ್ನು ಅನುಕೂಲ ಮಾಡಿಕೊಡಬೇಕೆಂದು ಯೋಗ್ಯ ಅವಕಾಶ ಮಾಡಿಕೊಟ್ಟಿರುವಾಗ ಇಂತಹ ಜಾಮೀನು ಕೊಡಲು ಇಲ್ಲವೆ ಸಾಲದ ಹಣದ ಭಾಗವನ್ನು ಮರಳಿ ಕೊಡಲು ತಪ್ಪಿದರೆ, ಇಡೀ ಸಾಲದ ಹಣವು ತತ್‌ಕ್ಷಣ ಸಲ್ಲಿಸಲು ಯೋಗ್ಯವಾಗತಕ್ಕದ್ದು ಮತ್ತು ಒತ್ತಿ ಹಾಕಿದವನ ವಿರುದ್ಧವಾಗಿ ಕಲಮು ೮೮ ಇಲ್ಲವೆ ಕಲಮು ೮೯ ರನ್ವಯವಾಗಿ ಆ ಹಣದ ವಸೂಲಿಗಾಗಿ ಕಾರ್ಯ ಕೈಕೊಳ್ಳಲು ಕಮಿಟಿಯು ಬಾಧ್ಯಸ್ಥವಾಗಿರತಕ್ಕದ್ದು.

**ವಿವರಣೆ:** ಲ್ಯಾಂಡ ಮಾರ್ಗೇಜ ಬ್ಯಾಂಕಿನ ಪೋಟ ನಿಯಮಗಳಲ್ಲಿ ನಿರ್ದಿಷ್ಟಪಡಿಸಬಹುದಾದಂತ ಪ್ರಮಾಣದಿಂದ ಒತ್ತಿಹಾಕಿದ ಆಸ್ತಿಯ ಬೆಲೆಯು ಆ

ಕಾಲಕ್ಕೆ ಬಾಕಿಯಾಗಿರುವ ಸಾಲದ ಹಣದಕಿಂತ ಹೆಚ್ಚಾಗಿರದಿದ್ದರೆ, ಈ ಕಲಮಿನ ಅಂಶದಲ್ಲಿ ಭದ್ರತೆಯ ಜಾಮೀನು ಕಡಿಮೆಯಾಗಿದೆಯೆಂದು ಹೇಳಬಹುದು.

**ವಿವೇಚನೆ**

ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಆಸ್ತಿಯು ಒತ್ತಿಹಾಕಲ್ಪಟ್ಟಿರಬೇಕು. ಆ ಆಸ್ತಿಯು ಇಡಿಯಾಗಿ ಇಲ್ಲವೆ ಸ್ವಲ್ಪಭಾಗ ಹಾಳಾಗಿರಬೇಕು. ಈ ಪ್ರಸಂಗದಿಂದ ಅದು ಯಾವ ಸಾಲಕ್ಕಾಗಿ ಒತ್ತಿ ಆಧಾರವಾಗಿರುವುದೋ ಆ ಸಾಲದ ಹಣದ ದೃಷ್ಟಿಯಿಂದ ಭದ್ರತೆಯ ಜಾಮೀನು ಕಡಿಮೆಯಾಗಿದೆಯೆಂದು ಆಗಿರಬೇಕು. ಆಗ ಒತ್ತಿಹಾಕಿದವನಿಗೆ ತಿಳಿಸಬೇಕು. ಸಾಕಷ್ಟು ಆಗುನಂತೆ ಭದ್ರತೆಯ ಜಾಮೀನ ಆದರೂ ಕೊಡಬೇಕು ಇಲ್ಲವೆ ಅಷ್ಟುಮಟ್ಟಿಗೆ ಕಡಿಮೆಯಾದ ಭದ್ರತೆಯ ಪ್ರಮಾಣ ದಲ್ಲಿ ಸಾಲದ ಹಣವನ್ನಾದರೂ ಮರಳಿ ಕೊಡಬೇಕು. ಈ ಎರಡರಲ್ಲಿ ಯಾವು ದೊಂದನ್ನಾದರೂ ಮಾಡಬೇಕೆಂದು ಒತ್ತಿ ಹಾಕಿದವನಿಗೆ ಯೋಗ್ಯ ಅವಕಾಶ ಮಾಡಿ ಕೊಡಬೇಕು. ಹೀಗೆ ಅವಕಾಶ ಮಾಡಿಕೊಟ್ಟರೂ ಅವನು ಆದರಂತೆ ಮಾಡಲು ತಪ್ಪಿದರೆ, ಮುಂದಿನ ಕ್ರಮವನ್ನು ಕಲಮು ೮೮ ಇಲ್ಲವೆ ೮೯ ರನ್ವಯವಾಗಿ ತೆಗೆದು ಕೊಳ್ಳಬಹುದು.

ಸಾಲದ ಹಣ ಎಷ್ಟು ಮರಳಿ ಕೊಡಬೇಕು ಎಂಬುದನ್ನು ಕಮಿಟಿಯು ನಿರ್ಧರಿಸುವುದು. ಅಂದರೆ ಕಡಿಮೆಯಾದ ಭದ್ರತೆಯ ಜಾಮೀನಿನ ಬೆಲೆಯಷ್ಟು ಆಗುವ ಹಾಗೆ ಮಾಡಲು ಮರಳಿ ಕೊಡುವ ಸಾಲದ ಹಣವನ್ನು ಕಮಿಟಿಯು ನಿರ್ಣಯಿಸುವುದು. ಭದ್ರತೆಯ ಜಾಮೀನು ಕಡಿಮೆ ಎಂದರೇನು ? ಎಂಬ ಬಗ್ಗೆ ಈ ಕಲಮಿನ ವಿವರಣೆಯಲ್ಲಿ ಹೇಳಲಾಗಿದೆ. ಯಾವುದೊಂದು ಕಾಲಕ್ಕೆ ಸಾಲದ ಹಣವು ಅದರ ಮೇಲಿನ ಬಡ್ಡಿಯು ಕೂಡಿ ಆಗಿರುವ ಹಣವು ಒಂದೆಡೆ ಇರುವುದು. ಇನ್ನೊಂದೆಡೆಗೆ ಅದಕ್ಕೆ ಆಧಾರವಾದ ಒತ್ತಿ ಆಸ್ತಿಯು ಇರುವುದು. ಈ ಒತ್ತಿ ಆಸ್ತಿಯ ಬೆಲೆಯಕಿಂತ ಸಾಲದ ಹಣವು ಹೆಚ್ಚು ಆಗಿರುವಾಗ ಭದ್ರತೆಯ ಜಾಮೀನು ಸಾಕಷ್ಟು ಇಲ್ಲವೆಂದು ಅರ್ಥವಾಗುವುದು. ಅಂದರೆ ಸಾಲದ ಹಣಕ್ಕೂ ಜಾಮೀನಾದ ಆಸ್ತಿಯ ಬೆಲೆಗೂ ಒಂದು ನಿರ್ದಿಷ್ಟ ಪ್ರಮಾಣವಿರುವುದು. ಈ ಪ್ರಮಾಣ ವನ್ನು ಲ್ಯಾಂಡ ಮಾರ್ಗೇಜ ಬ್ಯಾಂಕದ ಪೋಟನಿಯಮಗಳು ಹೇಳುವುವು. ಆ ಪ್ರಮಾದಕ್ಕೆ ವ್ಯತ್ಯಯ ಬರುವ ಹಾಗೆ ಒತ್ತಿ ಆಸ್ತಿಯ ಬೆಲೆಯು ಕಡಿಮೆಯಾಗಿ ಸಾಲದ ಹಣವು ಹೆಚ್ಚು ಆದರೆ, ಆ ಭದ್ರತೆಯ ಜಾಮೀನು ಸಾಕಷ್ಟು ಇಲ್ಲವೆಂದು ಅರ್ಥ.

## ೯೧. ಆಸ್ತಿ ಮುಂತಾದ್ದನ್ನು ಜಪ್ತಿಮಾಡಲು ಮತ್ತು ಮಾರಲು ಬೋರ್ಡದ ಇಲ್ಲವೆ ಧರ್ಮದರ್ಶಿಯ ಅಧಿಕಾರ

(೧) ಕಲಮು ೮೮ ಕಲಮು ೮೯ ಇಲ್ಲವೆ ಕಲಮು ೯೦ ರ ಅನ್ವಯವಾಗಿ ತಪ್ಪಿತಸ್ಥನಾದವನ ವಿರುದ್ಧ ಕ್ರಮ ತೆಗೆದುಕೊಳ್ಳಲು ಲ್ಯಾಂಡ ಮಾರ್ಗೇಜ

ಬ್ಯಾಂಕಿನ ಕಮಿಟಿಗೆ ಬೋರ್ಡ ಇಲ್ಲವೆ ಧರ್ಮದರ್ಶಿಯು ನಿರ್ದೇಶ ಮಾಡಬಹುದು ಮತ್ತು ಕಮಿಟಿಯು ಹಾಗೆ ಮಾಡಲು ಅಲಕ್ಷವಾಡಿದರೆ ಇಲ್ಲವೆ ತಪ್ಪಿದರೆ ಬೋರ್ಡ ಇಲ್ಲವೆ ಧರ್ಮದರ್ಶಿಯು ಅಂತಹ ಕ್ರಮವನ್ನು ತೆಗೆದುಕೊಳ್ಳಬಹುದು.

(೨) (ಅ) ಅಂತಹ ಕ್ರಮವು ಬೋರ್ಡದಿಂದ ತೆಗೆದಕೊಳ್ಳಲ್ಪಟ್ಟಾಗ ಈ ಪ್ರಕರಣದ ಶರತುಗಳು ಹಾಗೂ ಯಾವುವೇ ನಿಯಮಗಳ ಶರತುಗಳು ಇಲ್ಲವೆ ಈ ಸಂಬಧದಲ್ಲಿ ಮಾಡಲಾದ ಕ್ರಮ ನಿಯಮಗಳು ಲ್ಯಾಂಡ ಮಾರ್ಗೇಜ ಬ್ಯಾಂಕು ಹಾಗೂ ಅದರ ಕಮೀಟಿಗೆ ಸೂಚಿಸಿ ಹೇಳುವಂತಹ ಶರತುಗಳು ರಾಜ್ಯದ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಹಾಗೂ ಅದರ ಬೋರ್ಡಿಗೆ ಆನುಕ್ರಮವಾಗಿ ಸೂಚಿಸಿ ಹೇಳಿದಂತೆ ಅನ್ವಯಿಸುವುದು.

(ಬ) ಅಂತಹ ಕ್ರಮವು ಧರ್ಮದರ್ಶಿಯಿಂದ ತೆಗೆದುಕೊಳ್ಳಲ್ಪಟ್ಟಾಗ ಈ ಕಾಯಿದೆಯ ಹಾಗೂ ಅದರನ್ವಯವಾಗಿ ಮಾಡಲಾದ ನಿಯಮಗಳ ಇಲ್ಲವೆ ಕ್ರಮ ನಿಯಮಗಳ ಶರತುಗಳು ಲ್ಯಾಂಡಮಾರ್ಗೆಜ ಬ್ಯಾಂಕಿಗೆ ಇಲ್ಲವೆ ಆದರ ಕಮಿಟಿಗೆ ಸೂಚನೆ ಹೇಳುವಂತಹ ಶರತುಗಳು ಧರ್ಮದರ್ಶಿಯನ್ನು ಸೂಚಿಸಿ ಹೇಳಿದಂತೆ ಅನ್ವಯಿಸುವುವು.

**ವಿವೇಚನೆ**

ಕಲಮು ೮೮-೮೯-೯೦ ರನ್ವಯವಾಗಿ ತಪ್ಪಿತಸ್ಥನಾದವನ ವಿರುದ್ಧ ಕ್ರಮ ತೆಗೆದುಕೊಳ್ಳಲ್ಪಡಬೇಕು ಎಂದು ಲ್ಯಾಂಡಮಾರ್ಗೇಜ ಬ್ಯಾಂಕಿನ ಕಮಿಟಿಗೆ ಬೋರ್ಡು ಅಥವಾ ಧರ್ಮದರ್ಶಿಯು ನಿರ್ದೇಶನ ಕೊಡಬಹುದು. ಆ ನಿರ್ದೇಶನದಂತೆ ನಡೆಯಲು ಕಮಿಟಿಯು ತಪ್ಪಿದರೆ ಇಲ್ಲವೆ ಅಲಕ್ಷಿಸಿದರೆ, ಆಗ ಬೋರ್ಡು ಇಲ್ಲವೆ ಧರ್ಮದರ್ಶಿಯು ತಾನೇ ಆ ಬಗ್ಗೆ ಕ್ರಮ ಕೈಕೊಳ್ಳಬಹುದು. ಕ್ರಮ ಕೈಕೊಳ್ಳುವುದು ಅಗತ್ಯವಾಗಿರುವಾಗ ಯಾರಾದರೂ ಆ ಕಾರ್ಯವನ್ನು ಮಾಡಬೇಕಾಗುವುದು. ಕಮಿಟಿಯು ಆ ಕಾರ್ಯವನ್ನು ಮಾಡಬೇಕೆಂದು ಮೊದಲು ನಿರ್ದೇಶನ ಕೊಡುವುದು ಬೋರ್ಡದ ಇಲ್ಲವೆ ಧರ್ಮದರ್ಶಿಯ ಕೆಲಸ. ಕಮಿಟಿಯು ಕೆಲಸ ಮಾಡದಿದ್ದರೆ ಬೋರ್ಡ ಇಲ್ಲವೆ ಧರ್ಮದರ್ಶಿಯು ಮಾಡಬೇಕಾಗುವುದು. ಮಾಡಬಹುದು ಎಂದು ಇಲ್ಲಿ ಹೇಳಿದೆ. ಅಂದರೆ ಬೋರ್ಡ ಇಲ್ಲವೆ ಧರ್ಮದರ್ಶಿ ಕ್ರಮ ಕೈಕೊಂಡರೆ ಅದು ಕಾಯದೇಶೀರ ಆಗುವುದು.

ಆದರೆ,ಈ ಪ್ರಕರಣದಲ್ಲಿ ನಿಯಮಗಳಲ್ಲಿ ಇಲ್ಲವೆ ಕ್ರಮ ನಿಯಮಗಳಲ್ಲಿಲ್ಯಾಂಡ ಮಾರ್ಗೇಜ ಬ್ಯಾಂಕು ಮತ್ತು ಕಮಿಟಿಯು ಹೀಗೆ ಮಾಡಬೇಕು ಎಂದು ಬಂದಿರುವುದು. ಬೋರ್ಡು ಕ್ರಮ ಕೈಕೊಳ್ಳುವಾಗ ಏನು ಮಾಡಬೇಕು. ಬೋರ್ಡು ಹೀಗೆ ಮಾಡಬೇಕೆಂದು ಹೇಳಿರುವುದಿಲ್ಲ. ಈ ಪ್ರಕರಣದಲ್ಲಿ, ನಿಯಮಗಳಲ್ಲಿ ಇಲ್ಲವೆ ಕ್ರಮ ನಿಯಮಗಳಲ್ಲಿ ಎಲ್ಲಿ ಲ್ಯಾಂಡಮಾರ್ಗೇಜ ಬ್ಯಾಂಕು ಮತ್ತು ಅದರ ಕಮಿಟಿ ಎಂದು

ಹೇಳಲಾಗಿರುವದೋ ಅದು ಅನುಕ್ರಮವಾಗಿ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕು ಹಾಗೂ ಅದರ ಬೋರ್ಡು ಎಂದು ಅರ್ಥ ಮಾಡಬೇಕು. ಆ ಬಗೆಯಾಗಿ ಅರ್ಥ ಮಾಡಿದಂತೆ ಈ ಪ್ರಕರಣದಲ್ಲಿಯ ಶರತುಗಳು ಹಾಗೂ ನಿಯಮಗಳ ಇಲ್ಲವೆ ಕ್ರಮನಿಯಮಗಳ ಶರತುಗಳು ಅನ್ವಯಿಸುವುವು.

ಅದರಂತೆ ಧರ್ಮದರ್ಶಿಯು ಆ ಕಾರ್ಯವನ್ನು ಮಾಡಬೇಕಾಗಿ ಬಂದಿರುವಾಗ ಏನು ಮಾಡಬೇಕು? ಈ ಕಾಯಿದೆಯಲ್ಲಿ, ನಿಯಮಗಳಲ್ಲಿ ಇಲ್ಲವೆ ಕ್ರಮನಿಯಗಳಲ್ಲಿ ಲ್ಯಾಂಡಮಾರ್ಗೇಜ ಬ್ಯಾಂಕು ಇಲ್ಲವೆ ಅದರ ಕಮಿಟಿಯ ಎಂದು ಸೂಚನೆ ಬಂದ ಶರತುಗಳು ಧರ್ಮದರ್ಶಿಯನ್ನು ಸೂಚಿಸಿ ಹೇಳಿದಂತೆಯೆಂದು ಧರ್ಮದರ್ಶಿಗೆ ಅನ್ವಯಿಸುವುವು.

ಲ್ಯಾಂಡಮಾರ್ಗೇಜ ಬ್ಯಾಂಕು ಮತ್ತು ಅದರ ಕಮಿಟಿ ಎಂದು ಇದ್ದುದು ಸಂದರ್ಭಾನುಸಾರವಾಗಿ ಈ ಪ್ರಕರಣದಲ್ಲಿ ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕು, ಬೋರ್ಡು ಎಂದೂ ಧರ್ಮದರ್ಶಿ ಎಂದೂ ಸೂಚಿಸಿದಂತೆ ಆಗುವುದು. ಅದರಿಂದ ಆ ಶರತುಗಳು ಅವರ ಹೆಸರು ಇದ್ದಂತೆಯೆ ಅಧಿಕಾರ ಕೊಡುವುವು.

## ೬೨ ಅಕ್ರಮ ಉಂಟಾದ್ದು ಆಗಿದೆಯೆಂಬ ಕಾರಣಕ್ಕಾಗಿ ಖರೀದಿದಾರನ ಹಕ್ಕನ್ನು ಪ್ರಶ್ನಿಸಲಾಗದು

ಕಲಮು ೪೯ ರನ್ವಯವಾಗಿರುವ ಮಾರಾಟ ಮಾಡುವ ಅಧಿಕಾರ ನಿರ್ವಹಿಸುವಾಗ ಇಲ್ಲವೆ ನಿರ್ವಹಿಸಲಾಗಿದೆಯೆಂದು ಇರುವಾಗ ಯಾವುದೇ ಆಸ್ತಿಯು ಮಾರಾಟವಾದರೆ, ಖರೀದಿದಾರನ ಹಕ್ಕನ್ನು ಈ ಕೆಳಗಿನ ಕಾರಣಗಳ ಮೂಲಕ ಪ್ರಶ್ನಿಸಲಾಗದು—

(ಅ) ಮಾರಾಟವನ್ನು ಅಧಿಕರಿಸುವದಕ್ಕಾಗಿ ಅಗತ್ಯವಾದ ಪರಿಸ್ಥಿತಿಗಳು ಉಂಟಾಗಿದ್ದಿಲ್ಲವೆಂಬ ಕಾರಣಕ್ಕಾಗಿ, ಇಲ್ಲವೆ

(ಬ) ಮಾರಾಟಮಾಡುವ ಅಧಿಕಾರವು ಅಯೋಗ್ಯವಾಗಿ ಇಲ್ಲವೆ ಅಕ್ರಮವಾಗಿ ನಿರ್ವಹಿಸಲಾಗಿದೆಯೆಂಬ ಕಾರಣಕ್ಕಾಗಿ ;

ಆದರೆ, ಇಂತಹ ಅಧಿಕಾರದ ಅನಧಿಕೃತ, ಅಯೋಗ್ಯ ಇಲ್ಲವೆ ಅಕ್ರಮ ನಿರ್ವಹಣೆಯಿಂದ ಯಾವುದೇ ವ್ಯಕ್ತಿ ಯಾವುದೇ ರೀತಿಯಿಂದ ಹಾನಿಗೊಳಗಾಗಿದ್ದರೆ, ಲ್ಯಾಂಡಮಾರ್ಗೇಜ ಬ್ಯಾಂಕಿನ ವಿರುದ್ಧ ಲುಕುಸಾನು ಭರಪಾಯಿ ಮಾಡಿಕೊಳ್ಳಲು ಅವನಿಗೆ ಉಪಾಯ ಇರತಕ್ಕದ್ದು.

**ವಿವೇಚನೆ**

ಕಲಮು ೪೯ರನ್ವಯವಾಗಿ ಮಾರಾಟವನ್ನು ಯಾವಾಗ ಮಾಡಬೇಕೆಂದು ಹೇಳಲಾಗಿರುವ ಅಧಿಕಾರವನ್ನು ನಡೆಸಬೇಕೆಂದು ಮಾಡಿದಾಗ, ಅಧಿಕಾರ ನಡಿಸಿ ಆಸ್ತಿಯನ್ನು ಮಾರಾಟಮಾಡಿದಾಗ ಏನಾದರೂ ಅಕ್ರಮವಾಗಿದ್ದರೆ ಆ ಆಸ್ತಿಯ

ಖರೀದಿದಾರನ ಹಕ್ಕು ಬಾಧಿತವಾಗುವದೇ, ಎಂಬ ಪ್ರಶ್ನೆಗೆ ಇಲ್ಲಿ ಉತ್ತರ ಕೊಡಲಾಗಿದೆ. ಮಾರಾಟಮಾಡುವ ಅಧಿಕಾರ ನಡೆಸುವಾಗ ಯಾವುದೇ ಅಕ್ರಮವಾದರೂ ಅದು ಖರೀದಿದಾರನ ಹಕ್ಕುಗಳಿಗೆ ಬಾಧೆ ತರತಕ್ಕದ್ದಲ್ಲ ಎಂದು ಇಲ್ಲಿ ಹೇಳಿದೆ. ಅಕ್ರಮಗಳೆಂದರೆ ಎಂತಹವು?

ಕಲಮು ೬೯ರ ಉಪಕಲಮು (೨) ರಲ್ಲಿ ಹೇಳಿದ ಪರಿಸ್ಥಿತಿ ಉಂಟಾದರೆ ಮಾತ್ರ ಮಾರಾಟಮಾಡುವ ಅಧಿಕಾರ ಉಂಟಾಗುವುದು. ಈ ಪರಿಸ್ಥಿತಿಗಳೇ ಉಂಟಾಗಿದ್ದಿಲ್ಲವೆಂದಾಗ ಮಾರಾಟ ಮಾಡಿದರೆ ಅದು ಅಕ್ರಮವಾಗುವುದು. ಆದರೆ ಖರೀದಿದಾರನ ಅಧಿಕಾರಕ್ಕೆ ಆ ಬಗ್ಗೆ ವ್ಯತ್ಯಯ ಉಂಟಾಗತಕ್ಕದ್ದಲ್ಲ ಎಂದು ಹೇಳಿ ಖರೀದಿದಾರನನ್ನು ಸಂರಕ್ಷಿಸಲಾಗಿದೆ

ಇನ್ನೊಂದು ರೀತಿಯಲ್ಲಿ ಅಕ್ರಮವೆನ್ನಿಸಬಹುದಾದ ಪ್ರಸಂಗ ಇರುವುದು. ಅಧಿಕಾರವನ್ನು ಅಯೋಗ್ಯವಾಗಿ ನಿರ್ವಹಿಸಿದರೂ ಅಕ್ರಮವೆ. ಈ ಕಾರಣಕ್ಕಾಗಿಯೂ ಖರೀದಿದಾರನ ಅಧಿಕಾರಕ್ಕೆ ಧಕ್ಕೆ ಬರಲಾಗದು ಎಂದು ಸಂರಕ್ಷಣೆ ಕೊಡಲಾಗಿದೆ.

ಮಾರಾಟದ ಅಧಿಕಾರ ನಡೆಸುವವರಿಗೆ ಅಧಿಕಾರ ಇದ್ದಿತೋ ಇಲ್ಲವೋ ಎಂಬುದು ಆ ಸಂಸ್ಥೆಯ ವಿಷಯ. ಅಲ್ಲಿ ಅಕ್ರಮ ನಡೆದುದು ಮಾರಾಟದಕಿಂತಲೂ ಆಗಿರುವ ಪೂರ್ವಭಾವಿಯಾದ ಪ್ರಸಂಗ. ಖರೀದಿದಾರನಿಗೆ ಇದಾವುದರ ಪರಿವೆ ಇರುವುದಿಲ್ಲ. ತಿಳುವಳಿಕೆಯೂ ಇರುವುದಿಲ್ಲ. ಆದ್ದರಿಂದ ಸದ್ಭಾವನೆಯಿಂದ ಖರೀದಿದಾರನು ಖರೀದಿ ಹಿಡಿದಿರುವುದರಿಂದ ಅವರ ಹಕ್ಕನ್ನು ಪ್ರಶ್ನಿಸಲಾಗದು ಎಂದು ಹೇಳಲಾಗಿದೆ. ಇಷ್ಟಾಗಿಯೂ ಈ ರೀತಿಯ ಅಕ್ರಮದಿಂದ ಯಾರಿಗಾದರೂ ಏನಾದರೂ ಹಾನಿ ಸಂಭವಿಸಿದರೆ ಅವರು ಆ ಅಕ್ರಮ ಮಾರಾಟಕ್ಕೆ ಕಾರಣವಾಗಿರುವ ಲ್ಯಾಂಡ ಮಾರ್ಗೇಜ ಬ್ಯಾಂಕಿನ ವಿರುದ್ಧ ಲುಕಸಾನುಭರಪಾಯಿಗಾಗಿ 'ಕ್ರಮ ಕೈಕೊಳ್ಳಲು ಉಪಾಯ ಇದೆ.

ಈ ಮಾತುಗಳಿಂದ ಒಟ್ಟಿನಲ್ಲಿ ಖರೀದಿದಾರನ ಹಕ್ಕುಗಳನ್ನು ಭದ್ರವಾಗಿರಿಸಲಾಗಿದೆ.

## ೯೩. ಒತ್ತಿಹಾಕಿದವನು ನಾದಾರಿಯಾದರೆ ಒತ್ತಿ ಆಧಾರವು ಪ್ರಶ್ನಿಸಲ್ಪಡಬಾರದು

ನಾದಾರಿಗೆ ಸಂಬಂಧಪಟ್ಟ ಯಾವದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಆ ಒತ್ತಿ ಆಧಾರವು ಸದ್ಭಾವನೆಯಿಂದ ಬೆಲೆಯುಳ್ಳ ಪ್ರತಿಫಲಕ್ಕಾಗಿ ನಿರ್ವಹಿಸಲಟ್ಟಿಲ್ಲವೆಂಬ ಕಾರಣಕ್ಕಾಗಿ ಇಲ್ಲವೆ ಒತ್ತಿಹಾಕಿದವನ ಇತರ ಧನಕೋಗಳಕಿಂತ ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಪ್ರಾಶಸ್ತ್ಯಕೊಡುವುದಕ್ಕಾಗಿ ನಿರ್ವಹಿಸಲ್ಪಟ್ಟಿರುವುದೆಂಬ ಕಾರಣಕ್ಕಾಗಿ ಲ್ಯಾಂಡ ಮಾರ್ಗೇಜ ಬ್ಯಾಂಕಿನ ಪರವಾಗಿ ನಿರ್ವಹಿಸಲ್ಪಟ್ಟ ಒತ್ತಿ ಆಧಾರವನ್ನು ಪ್ರಶ್ನಿಸತಕ್ಕದ್ದಲ್ಲ.

**ವಿವೇಚನೆ**

ಒತ್ತಿ ವ್ಯವಹಾರವು ಒಂದು ಕರಾರು ಒಪ್ಪಂದವು. ಕರಾರು ಒಪ್ಪಂದಕ್ಕೆ ಪ್ರತಿಫಲವು ಇರಬೇಕಾಗುವುದು. ಪ್ರತಿಫಲವು ಇರದೆ ಇರುವ ಕರಾರುಗಳು ರದ್ದು ಎಂದು ಕರಾರು ಒಪ್ಪಂದ ಕಾಯಿದೆಯಲ್ಲಿ ಹೇಳಲಾಗಿದೆ. ಒತ್ತಿ ಹಾಕಿದವನು ನಾದಾರಿಯಾಗಿದ್ದರೆ, ನಾದಾರಿಗೆ ಸಂಬಂಧವಾಗಿರುವ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಅದು ಈ ಒತ್ತಿ ಆಧಾರದ ಕರಾರು ಒಪ್ಪಂದಕ್ಕೆ ಅಡ್ಡಿಯಾಗುವುದಿಲ್ಲ. ನಾದಾರಿತನವು ಆ ವ್ಯಕ್ತಿಯಲ್ಲಿ ಕರಾರುಗಳ ಸಂಬಂಧವಾಗಿ ಅನರ್ಹತೆಯನ್ನು ಉಂಟುಮಾಡುವುದು. ಆದ್ದರಿಂದ ಬೆಲೆಯುಳ್ಳ ಪ್ರತಿಫಲವು ಇದ್ದು ಸದ್ಭಾವನೆಯಿಂದ ಒತ್ತಿ ಆಧಾರವು ನಿರ್ವಹಿಸಿ ಕೊಡಲ್ಪಟ್ಟಿಲ್ಲವೆಂಬ ಕಾರಣದಿಂದ ಆ ಒತ್ತಿ ಆಧಾರದ ಕಾಯಿದೆಬದ್ಧತೆಯು ಪ್ರಶ್ನಿಸಲ್ಪಡತಕ್ಕದ್ದಲ್ಲ.

ಒತ್ತಿಹಾಕಿದವನಿಗೆ ಅನೇಕ ಧನಕೋ ಜನರು ಇರಬಹುದು. ಲ್ಯಾಂಡ ಮಾರ್ಗೇಜ ಬ್ಯಾಂಕು ಕೂಡ ಧನಕೋ ಆಗಿರುವುದು. ಇತರ ಧನಕೋ ಜನರಕಿಂತಲೂ ಹೆಚ್ಚಿನ ಪ್ರಾಶಸ್ತ್ಯವನ್ನು ಬ್ಯಾಂಕಿಗೆ ಒದಗಿಸಿಕೊಡಬೇಕೆಂಬ ಕಾರಣಕ್ಕಾಗಿ ಈ ಒತ್ತಿ ಆಧಾರವು ನಿರ್ವಹಿಸಿಕೊಡಲ್ಪಟ್ಟಿದೆಯೆಂಬ ಕಾರಣಕ್ಕಾಗಿಯೂ ಕೂಡ ಆ ಒತ್ತಿ ಆಧಾರದ ಕಾಯಿದೆಬದ್ಧತೆಯನ್ನು ಪ್ರಶ್ನಿಸತಕ್ಕದ್ದಲ್ಲ. ಅಂದರೆ ಧನಕೋ ಜನರಲ್ಲಿ ಯಾರು ಮೊದಲು ಸಾಲ ಕೊಟ್ಟಿರುವರೋ ಅವರಿಗೆ ಋಣಕೋನ ಆಸ್ತಿಯ ಮೇಲೆ ಅವರ ಸಾಲದ ಕಾಲಾನುಕ್ರಮದಲ್ಲಿ ಅಧಿಕಾರ ಉಂಟಾಗುವುದು. ಮೊದಲು ಸಾಲ ಕೊಟ್ಟವನಿಗೆ ಪ್ರಾಶಸ್ತ್ಯ. ಆದರೆ ಆ ಸಾಲಗಳು ಒತ್ತಿಯ ಆಧಾರದಿಂದ ಭದ್ರತೆ ಪಡೆದವು ಆಗಿರುವುದಿಲ್ಲ. ಇಂತಹ ವೇಳೆಯಲ್ಲಿ ಬ್ಯಾಂಕು ಒತ್ತಿ ಆಧಾರದ ಕರಾರು ಮಾಡಿಕೊಂಡು ಉಳಿದ ಧನಕೋ ಜನರಕಿಂತಲೂ ಹೆಚ್ಚಿನ ಪ್ರಾಶಸ್ತ್ಯ ಪಡೆದಿದೆ, ಎಂಬ ಕಾರಣಕ್ಕಾಗಿ ಆ ಒತ್ತಿ ಆಧಾರ ಕರಾರಿನ ಕಾಯಿದೆಬದ್ಧತೆಯನ್ನು ಪ್ರಶ್ನಿಸತಕ್ಕದ್ದಲ್ಲ. ಆ ಒತ್ತಿ ಆಧಾರವು ಕಾಯಿದೆಬದ್ಧ ವ್ಯವಹಾರವೇ ಆಗುವುದು ಎಂದು ಅರ್ಥ.

## ೯೪. ರಿಸೀವ್ಹರನ ನೇಮಕ ಹಾಗೂ ಅವನ ಅಧಿಕಾರಗಳು

(೧) ಲ್ಯಾಂಡ ಮಾರ್ಗೇಜ ಬ್ಯಾಂಕು ಮಾಡಿದ ಅರ್ಜಿಯ ಮೂಲಕ ಹಾಗೂ ಕಲಮು ೬೯ ರಿಂದ ದಯಪಾಲಿಸಲ್ಪಟ್ಟ ಮಾರಾಟ ಮಾಡುವ ಅಧಿಕಾರವು ನಿರ್ವಹಿಸಲ್ಪಡುವ ಸಂದರ್ಭದಲ್ಲಿ ಒತ್ತಿ ಆಧಾರವಾಗಿರುವ ಆ ಆಸ್ತಿಯ ಹುಟ್ಟುವಳಿ ಹಾಗೂ ಉತ್ಪನ್ನದ ಸಲುವಾಗಿ ಇಲ್ಲವೆ ಅದರ ಯಾವುದೇ ಭಾಗದ ಸಲುವಾಗಿ ಬೋರ್ಡು ಲೇಖಿಯಿಂದ ಒಬ್ಬ ರಿಸೀವ್ಹರನನ್ನು ನೇಮಿಸಬಹುದು. ಅಂತಹ ರಿಸೀವ್ಹರನು ಸಂದರ್ಭಾನುಸಾರವಾಗಿ ಆ ಆಸ್ತಿಯ ಕಬಜಾ ತೆಗೆದುಕೊಳ್ಳಬಹುದು. ಇಲ್ಲವೆ ಅದರ ಹುಟ್ಟುವಳಿ ಹಾಗೂ ಉತ್ಪನ್ನವನ್ನು ವಸೂಲ ಮಾಡಬಹುದು.

ಅವನಿಂದ ವಸೂಲ ಮಾಡಲ್ಪಟ್ಟ ಯಾವುದೇ ಹಣವನ್ನು ಸಂಚಾಲದ ವ್ಯವಸ್ಥೆಯ ವೆಚ್ಚಕ್ಕೆಂದು, ತನ್ನ ವೇತನ ಯಾವುದಾದರೂ ಇದ್ದರೆ. ಅದರ ಬಗ್ಗೆ ಬೋರ್ಡು ಗೊತ್ತು ಪಡಿಸಿದ ಹಣವನ್ನು ಒಳಗೊಂಡು ತನ್ನ ಹತ್ತಿರ ಇಟ್ಟುಕೊಳ್ಳಬಹುದು. ಮತ್ತು ಉಳಿದ ಹಣವನ್ನು ೧೮೮೨ ( ಕೇಂದ್ರ ಕಾಯಿದೆ ನಂ. ೪ — ೧೮೮೨ ) ರ ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೬೯— ಅ, ದ ಉಪಕಲಮು (೮) ರ ಶರತುಗಳ ಅನುಸಾರವಾಗಿ ಉಪಯೋಗಿಸಬಹುದು.

(೨) ಉಪಕಲಮು (೧) ರನ್ವಯವಾಗಿ ನೇಮಕವಾದ ರಿಸೀವ್ಹರನು ಯೋಗ್ಯ ಕಾರಣವಿದ್ದರೆ ಹಾಗೂ ಒತ್ತಿ ಹಾಕಿದವನು ಅರ್ಜಿ ಮಾಡಿದರೆ, ಬೋರ್ಡ ದಿಂದ ತೆಗೆದು ಹಾಕಲ್ಪಡಬಹುದು.

(೩) ರಿಸೀವ್ಹರನ ಅಧಿಕಾರ ಪದವು ತೆರವಾದರೆ ಬೋರ್ಡದಿಂದ ಅದನ್ನು ಭರತಿ ಮಾಡಬಹುದು.

(೪) ಒತ್ತಿ ಹಾಕಿದ ಆಸ್ತಿಯು ದಿವಾಣಿ ನ್ಯಾಯಾಲಯದಿಂಡ ನೇಮಕ ವಾದ ರಿಸೀವ್ಹರನ ಸ್ವಾಧೀನದಲ್ಲಿ ಆ ಮೊದಲೇ ಇದ್ದಿದ್ದರೆ, ಈ ಕಲಮಿನಲ್ಲಿ ಹೇಳಿದ ಯಾವುದೂ ಬೋರ್ಡಿಗೆ ರಿಸೀವ್ಹರನನ್ನು ನೇಮಿಸುವ ಅಧಿಕಾರವನ್ನು ಕೊಡುವುದಿಲ್ಲ.

**ವಿವೇಚನೆ**

ಒತ್ತಿ ಹಾಕಿದ ಆಸ್ತಿಯ ಹುಟ್ಟುವಳಿ ಹಾಗೂ ಅದರಿಂದ ಬರುವ ಉತ್ಪನ್ನದ ಬಗ್ಗೆ ರಿಸೀವ್ಹರನನ್ನು ನೇಮಿಸುವ ಬಗ್ಗೆ ಈ ಕಲಮು ಇದೆ. ರಿಸೀವ್ಹರನನ್ನು ನೇಮಕಮಾಡುವ ಅಧಿಕಾರವು ಬೋರ್ಡಿನದು. ನೇಮಕ ಮಾಡುವ ಮೊದಲು ಲ್ಯಾಂಡ ಮಾರ್ಗೇಜ ಬ್ಯಾಂಕಿಂದ ಅರ್ಜಿಯು ಬೋರ್ಡಿಗೆ ಮಾಡಲ್ಪಟ್ಟಿರಬೇಕು. ಅಲ್ಲದೆ, ಕಲಮು ೬೯ ರಲ್ಲಿ ಹೇಳಿದಂತೆ ಆಸ್ತಿಯ ಮಾರಾಟದ ಸಲುವಾಗಿ ಅಧಿಕಾರ ನಡೆಸಬೇಕೆಂಬುವ ಹಾಗೆ ಪರಿಸ್ಥಿತಿಯು ಉಂಟಾಗಿರಬೇಕು. ಅಂದಾಗ ಬೋರ್ಡು ಲೇಖಿಯಿಂದ ಒಬ್ಬ ರಿಸೀವ್ಹರನನ್ನು ನೇಮಿಸಬಹುದು.

ಹೀಗೆ ನೇಮಕವಾದ ರಿಸೀವ್ಹರನು ಆ ಒತ್ತಿ ಆಸ್ತಿಯನ್ನು ಕಬಜಾ ಪಡೆದು ಕೊಳ್ಳಲು ಇಲ್ಲವೆ ಅದರಲ್ಲಿಯ ಹುಟ್ಟುವಳಿ ಹಾಗೂ ಅದರ ಉತ್ಪನ್ನವನ್ನು ಕಬಜಾ ಪಡೆದುಕೊಳ್ಳುವ ಅಧಿಕಾರವುಳ್ಳವನಾಗುತ್ತಾನೆ. ಅವನು ಉತ್ಪನ್ನವನ್ನು ಪಡೆದು ಕೊಂಡಾಗ ಹಣವು ಅವನ ಕೈಗೆ ಬಂದರೆ, ಆಸ್ತಿಯ ಸಂಚಾಲನದ ವ್ಯವಸ್ಥೆಗಾಗಿ ಬೇಕಾಗುವ ವೆಚ್ಚಕ್ಕಾಗಿ, ಮತ್ತು ಬೋರ್ಡಿನವರು ಅವನಿಗೆ ವೇತನ ಗೊತ್ತುಮಾಡಿ ದ್ದರೆ ಆ ಬಗ್ಗೆ ಬೇಕಾಗುವ ಹಣವನ್ನು ತನ್ನ ಹತ್ತಿರ ಇಟ್ಟುಕೊಂಡು ಉಳಿದ ಹಣ ವನ್ನು ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೬೯ ಅ. ದ ಪ್ರಕಾರ ವಿನಿಯೋಗಿಸ ತಕ್ಕದ್ದು. ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೬೯–ಅ. ದಲ್ಲಿ ಏನು ಹೇಳಿದೆ? ಆ ಕಲಮು ಒತ್ತಿ ಆಸ್ತಿಯ ಸಂಬಂಧವಾಗಿ ರಿಸೀವ್ಹರನನ್ನು ನೇಮಕ ಮಾಡುವ ಬಗ್ಗೆ ಇದೆ. ಅದರಲ್ಲಿ ಹೀಗೆ ಹೇಳಿದೆ.

"ಒತ್ತಿ ಆಸ್ತಿಯನ್ನು ಮಾರಾಟಮಾಡುವ "ಅಧಿಕಾರವುಳ್ಳಂತಹ ಒತ್ತಿ ಹಿಡಿದವನು ಒತ್ತಿ ಆಸ್ತಿಯ ಉತ್ಪನ್ನದ ಸಲುವಾಗಿ ರಿಸೀವ್ಹರನನ್ನು ನೇಮಿಸಲು ಹಕ್ಕುದಾರನಿರುತ್ತಾನೆ. ಒತ್ತಿ ಪತ್ರದಲ್ಲಿ ಹೆಸರು ಕಾಣಿಸಿದ ಹಾಗೂ ರಿಸೀವ್ಹರನೆಂದು ಕೆಲಸ ಮಾಡಲು ಸಮರ್ಥನಿದ್ದು ಒಪ್ಪಿಕೊಂಡ ವ್ಯಕ್ತಿಯನ್ನು ರಿಸೀವ್ಹರನೆಂದು ನೇಮಕ ಮಾಡಬಹುದು. ಒತ್ತಿ ಪತ್ರದಲ್ಲಿ ಹೆಸರು ನಮೂದಾದ ವ್ಯಕ್ತಿಗಳಲ್ಲಿ ಯಾರೂ ಸಮರ್ಥರಿರದಿದ್ದರೆ ಇಲ್ಲವೆ ಒಪ್ಪಿಕೊಳ್ಳದಿದ್ದರೆ ಇಲ್ಲವೆ ಅವರು ಎಲ್ಲರೂ ಮರಣ ಹೊಂದಿದ್ದರೆ, ಒತ್ತಿ ಹಾಕಿದವನು ಒಪ್ಪಿಕೊಳ್ಳುವಂತಹ ಯಾವುದೇ ವ್ಯಕ್ತಿಯನ್ನು ರಿಸೀವ್ಹರನೆಂದು ಒತ್ತಿ ಹಿಡಿದವನು ನೇಮಕ ಮಾಡಬಹುದು. ಒತ್ತಿ ಹಾಕಿದವನು ಈ ಕರಾರಿಗೆ ಒಪ್ಪದಿದ್ದರೆ, ರಿಸೀವ್ಹರನ ನೇಮಕಕ್ಕಾಗಿ ಒತ್ತಿ ಹಿಡಿದವನು ನ್ಯಾಯಾಲಯಕ್ಕೆ ಅರ್ಜಿ ಮಾಡಿಕೊಳ್ಳಬೇಕು. ನ್ಯಾಯಾಲಯದಿಂದ ನೇಮಕವಾದ ವ್ಯಕ್ತಿಯು ಒತ್ತಿ ಹಿಡಿದವನಿಂದ ನೇಮಕ ಮಾಡಲ್ಪಟ್ಟಂತೆ ಎಂದು ಗಣಿಸಲ್ಪಡಲಾಗುವುದು.

ಒತ್ತಿ ಹಾಕಿದವನು ಹಾಗೂ ಒತ್ತಿ ಹಿಡಿದವನು ಲೇಖಿಯಿಂದ ರಿಸೀವ್ಹರನನ್ನು ತೆಗೆದು ಹಾಕಬಹುದು. ಇಲ್ಲವೆ ಯಾವುದೇ ಪಕ್ಷಕಾರನು ನ್ಯಾಯಾಲಯಕ್ಕೆ ಅರ್ಜಿ ಮಾಡಿದರೆ ಮತ್ತು ಯೋಗ್ಯ ಕಾರಣ ತೋರಿಸಿದರೆ ನ್ಯಾಯಾಲಯವು ರಿಸೀವ್ಹರನನ್ನು ತೆಗೆದು ಹಾಕಬಹುದು. ರಿಸೀವ್ಹರನ ಅಧಿಕಾರ ಪದವು ಖಾಲೀ ಆದರೆ ಈ ಕಲಮಿನ ಶರತ್ತುಗಳ ಪ್ರಕಾರ ಅದನ್ನು ಭರತಿ ಮಾಡತಕ್ಕದ್ದು."

ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೬೯ ಅ ದಲ್ಲಿ ಹೇಳಿದ ಮಾತುಗಳನ್ನು ಪರ್ಯಾಯವಾಗಿ ಸಹಕಾರಿ ಸಂಘದ ಕಾಯಿದೆಯ ಈ ೯೪ ನೆಯ ಕಲಮಿನಲ್ಲಿ ಹೇಳಿದೆ. ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೬೯ ಅ ದಲ್ಲಿಯ ಉಪ ಕಲಮು (೮) ರಲ್ಲಿ ರಿಸೀವ್ಹರನು ವಸೂಲಮಾಡಿ ಆಸ್ತಿ ಆಡಳಿತದ ವೆಚ್ಚ ಹಾಗೂ ತನ್ನ ವೆಚ್ಚಕಳೆದು ಉಳಿದ ಹಣದ ಹಣದ ವಿನಿಯೋಗ ಹೇಗೆ ಮಾಡಬೇಕೆಂಬ ಬಗ್ಗೆ ಹೇಳಿದೆ.

೬೯ ಅ— (೮) ರಲ್ಲಿ ಹೀಗೆ ಅದೆ "ಈ ಕಾಯಿದೆಯ ಶರತ್ತುಗಳು ವಿಮಾ ಹಣದ ಬಗ್ಗೆ ಹೇಳಿದ ಮಾತುಗಳಿಗೆ ಅಂಕಿತವಾಗಿ ರಿಸೀವ್ಹರನು ತನ್ನ ಕಡೆಗೆ ಬಂದ ಎಲ್ಲ ಹಣವನ್ನು ಈ ಕೆಳಗಿನಂತೆ ವಿನಿಯೋಗಿಸತಕ್ಕದ್ದು. ಹೇಗೆಂದರೆ—

(i) ಒತ್ತಿ ಆಸ್ತಿಯನ್ನು ಬಾಧಿಸುವ ಎಲ್ಲ ಲಾವಣಿಗಳನ್ನು ಕೊಡಲಿಕ್ಕೆ, ಕರಗಳನ್ನು ಸಲ್ಲಿಸಲಿಕ್ಕೆ, ಭೂಕಂದಾಯವನ್ನು ಕೊಡಲಿಕ್ಕೆ ಮತ್ತು ಇತರ ಯಾವುದೇ ವೆಚ್ಚವನ್ನು ಕೊಡಲಿಕ್ಕೆ;

(ii) ಯಾವ ಒತ್ತೀ ಆಧಾರದ ಮೇಲೆ ಅವನು ರಿಸೀವ್ಹರನಾಗಿರುವನೊ ಆ ಒತ್ತಿ ವ್ಯವಹಾರದ ವ್ಯವಹಾರಗಳಲ್ಲಿ ಪ್ರಾಥಮಿಕತೆ ಇರುವ ಎಲ್ಲ ವಾರ್ಷಿಕ ಕಂತು

ಗಳು ಇಲ್ಲವೆ ಇತರ ಹಣವನ್ನು ಕೊಡುವುದಕ್ಕಾಗಿ ಮತ್ತು ಎಲ್ಲ ಮೂಲ ಹಣದ ಮೇಲಿನ ಬಡ್ಡಿಯನ್ನು ಕೊಡುವುದಕ್ಕಾಗಿ;

(iii) ಅವನ ಕಮಿಶನು ಕೊಡುವುದಕ್ಕಾಗಿ ಮತ್ತು ಒತ್ತಿ ಆಧಾರದನ್ವಯ ವಾಗಿ ಇಲ್ಲವೆ ಈ ಕಾಯಿದೆಯನ್ವಯವಾಗಿ ಯೋಗ್ಯವಾಗಿ ಅಗ್ನಿ, ಜೀವ ಇಲ್ಲವೆ ಇತರ ವಿಮೆಗಳು ಯಾವುದಾದರೂ ಇದ್ದರೆ ಅವುಗಳ ಕಂತು ಕೊಡುವುದಕ್ಕಾಗಿ. ಮತ್ತು ಒತ್ತಿ ಹಿಡಿದವನಿಂದ ಲೇಖೀಯಾಗಿ ನಿರ್ದೇಶಿಸಲ್ಪಟ್ಟ ಎಲ್ಲ ಆವಶ್ಯಕ ರಿಪೇರಿಗಳನ್ನು ಮಾಡುವುದಕ್ಕಾಗಿ;

(iv) ಒತ್ತಿಆಧಾರದನ್ವಯವಾಗಿ ಸಲ್ಲಿಸಬೇಕಾಗಿ ಬಾಕಿಯಾಗಿರುವ ಬಡ್ಡಿ ಯನ್ನು ಕೊಡುವುದಕ್ಕಾಗಿ,

(v) ಒತ್ತಿ ಹಿಡಿದವನಿಂದ ಲೇಖೀಯಾಗಿ ನಿರ್ದೇಶಿಸಲ್ಪಟ್ಟಿದ್ದರೆ ಮೂಲ ಒತ್ತಿ ಹಣವನ್ನು ಪಾವತಿ ಮಾಡುವದರ ಸಲುವಾಗಿ.

ಮತ್ತು ಉಳಿದ ಹಣವನ್ನು ರಿಸಿವ್ಹರನು ನೇಮುಕವಾಗದೇ ಇದ್ದರೆ ಆ ಉತ್ಪನ್ನವು ಯಾರ ಕೈಗೆ ಬರುತ್ತಿತ್ತೋ ಆ ವ್ಯಕ್ತಿಗೆ ಇಲ್ಲವೆ ಯಾವನು ಇತರ ರೀತಿಯಿಂದ ಒತ್ತಿ ಆಸ್ತಿಗೆ ಬಾಧಸ್ಥನಾಗಿರುವನೋ ಅವನಿಗೆ ಕೊಡತಕ್ಕದ್ದು-

ಈ ಎಲ್ಲ ವಿವರಗಳನ್ನು ನೋಡಿದರೆ ಒತ್ತಿ ಆಧಾರದ ಆಸ್ತಿಯ ಬೆಲೆಯು ಯಾವುದೇ ರೀತಿಯಿಂದ ಕಡಿಮೆಯಾಗದ ಹಾಗೆ ಅದರ ಮೇಲೆ ಹೆಚ್ಚು ಅಧಿಕಾರ ಭಾರ ಉಂಟಾಗದ ಹಾಗೆ ಅದನ್ನು ಸಂಚಾಲನ ಮಾಡಬೇಕಾಗುವುದಕ್ಕೆ ಆವಶ್ಯಕ ವಾದ ಎಲ್ಲ ವೆಚ್ಚಗಳನ್ನು ಮಾಡಲು ಆ ಹಣವನ್ನು ಬಳಸಬೇಕೆಂದು ಹೇಳಿದ ಹಾಗೆ ಎಂದು ಕಂಡು ಬರುವುದು.

ಬೋರ್ಡು ರಿಸೀವ್ಹರನನ್ನು ನೇಮುಕ ಮಾಡಬೇಕೆಂದು ಮಾಡಿದ ಕಾಲದಲ್ಲಿ ಆ ಮೊದಲೇ ದಿವಾಣಿ ನ್ಯಾಯಾಲಯದಿಂದ ಆ ಒತ್ತಿ ಆಸ್ತಿಯ ಸಂಬಂಧವಾಗಿ ಒಬ್ಬ ರಿಸೀವ್ಹರನು ನೇಮುಕ ಮಾಡಲ್ಪಟ್ಟಿದ್ದರೆ ಈ ಕಲಮಿನಲ್ಲಿ ಹೇಳಿದ ಯಾವುದೂ ರಿಸೀವ್ಹರನನ್ನು ನೇಮುಕ ಮಾಡಲು ಬೋರ್ಡಿಗೆ ಅಧಿಕಾರ ಕೊಡುವುದಿಲ್ಲ. ಅಂದರೆ ಒಂದು ಆಸ್ತಿಗೆ ಇಬ್ಬರು ರಿಸೀವ್ಹರರು ಬೇರೆ ಬೇರೆ ಅಧಿಕಾರದಿಂದ ನೇಮುಕಮಾಡಲು ಬರುವುದಿಲ್ಲ. ದಿವಾಣಿ ನ್ಯಾಯಾಲಯದ ರಿಸೀವ್ಹರನು ಇದ್ದಾಗ ಬೋರ್ಡು ಮತ್ತು ಆ ಆಸ್ತಿಯ ಸಂಬಂಧವಾಗಿ ರಿಸೀವ್ಹರನನ್ನು ನೇಮಿಸಲಿಕ್ಕೆ ಬರುವುದಿಲ್ಲ.

## ೯೫. ಒತ್ತಿ ಹಾಕಿದವನು ಲಾವಣಿ ಕೊಡುವ ಅಧಿಕಾರ

(೧) ೧೮೮೨ (ಕೇಂದ್ರ ಕಾಯಿದೆ ನಂ. ೪-೧೮೮೨) ರ ಆಸ್ತಿ ಹಸ್ತಾಂತರ ಕಾಯಿದೆಯಲ್ಲಿ ಇಲ್ಲವೆ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಒತ್ತಿ ಹಾಕಿದವನು ಒತ್ತಿ ಹಾಕಿದ ಆಸ್ತಿಯನ್ನು ಐದು ವರುಷ ಮೀರುವಷ್ಟು ಕಾಲಾವಧಿಯ ವರೆಗೆ ಲಾವಣಿಗೆ ಕೊಡತಕ್ಕದ್ದಲ್ಲ.

(೨) ಉಪಕಲಮು (೧) ರ ಶರತುಗಳ ವಿರುದ್ಧವಾಗಿ ದಯಪಾಲಿಸಲಾದ ಯಾವುದೇ ಲಾವಣಿ ಕರಾರು ರದ್ದಾಗತಕ್ಕದ್ದು.

**ವಿವೇಚನೆ**

ಒಬ್ಬನು ಆಸ್ತಿಯನ್ನು ಒತ್ತಿ ಹಾಕಿರುವನು. ಆ ಒತ್ತಿ ಹಾಕಿದ ಆಸ್ತಿಯನ್ನು ಅವನು ಲಾವಣಿ ಕೊಡಬೇಕೆಂದಿರುವನು. ಲಾವಣಿ ಕೊಡಲು ಅವನಿಗೆ ಅಧಿಕಾರವೇನೋ ಇದೆ. ಆದರೆ ಆ ಲಾವಣಿ ಕಾಲಾವಧಿಯು ಐದು ವರುಷಕ್ಕಿಂತ ಹೆಚ್ಚು ಆಗತಕ್ಕದ್ದಲ್ಲ. ಒಂದು ವೇಳೆ ಹೆಚ್ಚು ಕಾಲಾವಧಿಯ ವರೆಗೆ ಕೊಡಲಾದರೆ ಆ ಕರಾರು ವ್ಯವಹಾರವು ರದ್ದು ಆಗತಕ್ಕದ್ದು.

ಇಲ್ಲಿ ಎರಡು ಮಾತುಗಳು ಇವೆ. ಒಂದು, ಆಸ್ತಿಯು ಒತ್ತಿಹಾಕಲ್ಪಟ್ಟಿದೆ. ಇನ್ನೊಂದು ಲಾವಣಿ, ಕೊಡಬೇಕಾಗಿದೆ. ಒತ್ತಿಹಾಕುವುದು ಆಸ್ತಿ ಹಸ್ತಾಂತರ ಮಾಡಿದ ಹಾಗೆ. ಆ ಬಗ್ಗೆ ಆಸ್ತಿಹಸ್ತಾಂತರ ಕಾಯಿದೆಯು ಅನ್ವಯಿಸುವುದು, ಲಾವಣಿ ಕೊಡಬೇಕಾದರೆ ಲಾವಣಿಗೆ ಸಂಬಂಧಪಟ್ಟ ಕಾಯಿದೆ ಇರುವುವು. ಆ ಕಾಲಕ್ಕೆ ಜಾರಿಯಲ್ಲಿದ್ದ ಇತರ ಕಾಯಿದೆಗಳು ಇರುವುವು. ಈ ಕಾಯಿದೆಗಳಲ್ಲಿ ಏನೇ ಹೇಳಲಾಗಿದ್ದರೂ ಒತ್ತಿಹಾಕಿದವನು ತನ್ನ ಆ ಆಸ್ತಿಯನ್ನು ಲಾವಣಿಗಾಗಿ ಕೊಡಲು ಅಧಿಕಾರವಿದೆ. ಆದರೆ ಆ ಲಾವಣಿ ಕಾಲಾವಧಿಯು ೫ ವರುಷದ ಅವಧಿಯನ್ನು ಮೀರತಕ್ಕದ್ದಲ್ಲ.

ಇತರ ಕಾಯಿದೆಗಳೆಂದರೆ ಟೆನನ್ಸಿ ಇಲ್ಲವೆ ಭೂಸಾಧಾರಣೆಯ ಕಾಯಿದೆಗಳು, ಎಂದು ಅರ್ಥ. ಈ ಕಾಯಿದೆಗಳಲ್ಲಿ ಲಾವಣಿಯ ಬಗ್ಗೆ ಏನೇ ಹೇಳಲಾಗಿದ್ದರೂ ಆಸ್ತಿಹಸ್ತಾಂತರ ಕಾಯಿದೆಯಲ್ಲ ಒತ್ತಿಯಬಗ್ಗೆ ಏನೆ ಹೇಳಲಾಗಿದ್ದರೂ ಒತ್ತಿಹಾಕಿದವರಿಗೆ ಆ ಆಸ್ತಿಯನ್ನು ೫ ವರುಷದ ಒಳಗೆ ಇರುವಷ್ಟು ಕಾಲಾವಧಿಯ ವರೆಗೆ ಲಾವಣಿ ಕೊಡಲು ಅಧಿಕಾರವಿದೆ. ಆ ನಿರ್ಬಂಧ ಮೀರಿದರೆ, ಆ ಲಾವಣಿ ಕರಾರು ರದ್ದಾದಂತೆ ಎಂದು ತಿಳಿಯತಕ್ಕದ್ದು.

## ೯೭. ಬೋರ್ಡದಿಂದ ಕೆಲವು ಅಧಿಕಾರಗಳನ್ನು ಒಪ್ಪಿಸಿಕೊಡುವುದು:

ಕಲಮು ೮೯, ೯೧ ಮತ್ತು ೯೪ ರನ್ವಯವಾಗಿರುವ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳನ್ನು ಬೋರ್ಡು, ತನಗೆ ಯೋಗ್ಯ ಕಂಡರೆ, ತಾನು ರಚಿಸಿರುವ ಹಾಗೂ ಇಬ್ಬರು ಇಲ್ಲವೆ ಹೆಚ್ಚು ಸಂಖ್ಯೆಯಲ್ಲಿ ತನ್ನ ಸದಸ್ಯರು ಇರುವ ಕಾರ್ಯಕಾರಿ ಸಮಿತಿಗೆ ಒಪ್ಪಿಸಿಕೊಡಬಹುದು.

**ವಿವೇಚನೆ**

ಬೋರ್ಡಿಗೆ ಅಧಿಕಾರಗಳು ಇರುವುವು. ಆ ಅಧಿಕಾರಗಳು ಕಲಮು ೮೯, ೯೧ ಹಾಗೂ ೯೪ ರನ್ವಯವಾಗಿ ಬಂದಿದ್ದರೆ, ಆ ಅಧಿಕಾರಗಳನ್ನು ಇಲ್ಲವೆ ಅವುಗಳಲ್ಲಿ ಕೆಲವನ್ನು ಒಪ್ಪಿಸಿಕೊಡಬಹುದು. ಯಾರಿಗೆ ಒಪ್ಪಿಸಿಕೊಡಬಹುದು? ಬೋರ್ಡು

ತಾನೇ ಒಂದು ಕಾರ್ಯಕಾರಿ ಸಮಿತಿಯನ್ನು ರಚಿಸಿರಬೇಕು. ಅದರಲ್ಲಿ ಇಬ್ಬರು ಇಲ್ಲವೆ ಹೆಚ್ಚು ಸಂಖ್ಯೆಯಲ್ಲಿ ಅದರ ಸದಸ್ಯರು ಇರಬೇಕು. ಇಂತಹ ಸದಸ್ಯರುಳ್ಳ ಕಾರ್ಯಕಾರಿ ಸಮಿತಿಗೆ ಒಪ್ಪಿಸಿಕೊಡಬಹುದು.

ಕಲಮು ೪೯ ಮಾರಾಟದ ಅಧಿಕಾರದ ಬಗ್ಗೆ ಇದೆ. ಕಲಮು ೯೧ ಆಸ್ತಿ ಮುಂತಾದವುಗಳ ಜಪ್ತಿ ಹಾಗೂ ಮಾರಾಟದ ಬಗ್ಗೆ ಇರುವ ಬೋರ್ಡದ ಇಲ್ಲವೆ ಧರ್ಮದರ್ಶಿಯ ಅಧಿಕಾರದ ಬಗ್ಗೆ ಇದೆ. ಕಲಮು ೯೪ ರಿಸೀವ್ಹರನ ನೇಮಕದ ಬಗ್ಗೆ ಇರುವ ಅಧಿಕಾರದ ವಿಷಯವಾಗಿದೆ. ಈ ಕಲಮುಗಳಲ್ಲಿ ಹೇಳಲಾದ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳನ್ನು ಬೋರ್ಡು ತಾನು ರಚಿಸಿರುವ ಕಾರ್ಯಕಾರಿ ಸಮಿತಿಗೆ ಒಪ್ಪಿಸಿಕೊಡಬಹುದಾಗಿದೆ.

## ೯೭. ಈ ಪ್ರಕರಣದನ್ವಯವಾಗಿರುವ ನೋಟೀಸುಗಳಿಗೆ— ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೧೦೨, ೧೦೩ ಹಾಗೂ ೧೦೪ ಅನ್ವಯಿಸತಕ್ಕದ್ದು

ಈ ಪ್ರಕರಣದನ್ವಯವಾಗಿ ಜಾರಿ ಮಾಡಲ್ಪಡಬೇಕಾಗಿರುವ ಎಲ್ಲ ನೋಟೀಸುಗಳ ಸಂಬಂಧವಾಗಿ, ಶಕ್ಯವಾದಷ್ಟು ಮಟ್ಟಿಗೆ, ೧೮೮೨ (ಕೇಂದ್ರ ಕಾಯಿದೆ ನಂ. ೪-೧೮೮೨) ರ ಆಸ್ತಿ ಹಸ್ತಾಂತರ ಕಾಯಿದೆಯ ೧೦೨ ಹಾಗೂ ೧೦೩ ನೆಯ ಕಲಮಿನ ಶರತುಗಳು ಮತ್ತು ಆ ಕಲಮುಗಳ ಉದ್ದೇಶಗಳನ್ನು ಕಾರ್ಯ ಮಾಡುವುದಕ್ಕಾಗಿ ಕಲಮು ೧೦೪ ರನ್ವಯವಾಗಿ ಹಾಯಕೋರ್ಟದಿಂದ ಮಾಡಲ್ಪಟ್ಟ ಯಾವುದೇ ನಿಯಮಗಳ ಶರತುಗಳು ಅನ್ವಯಿಸತಕ್ಕದ್ದು

**ವಿವೇಚನೆ**

ಈ ಪ್ರಕರಣದಲ್ಲಿ ಅನೇಕ ಕಲಮುಗಳಲ್ಲಿ ನೋಟೀಸು ಕೊಡತಕ್ಕದ್ದು ಹಾಗೂ ನೋಟೀಸು ಜಾರಿ ಮಾಡತಕ್ಕದ್ದು ಎಂದು ಬಂದಿದೆ. ನೋಟೀಸು ಜಾರಿಯ ಬಗ್ಗೆ ಈ ಪ್ರಕರಣದಲ್ಲಿ ಬಂದಲ್ಲೆಲ್ಲ ಆಸ್ತಿ ಹಸ್ತಾಂತರ ಕಾಯಿದೆಯಲ್ಲಿಯ ಕಲಮು ೧೦೨, ೧೦೩ ಹಾಗೂ ೧೦೪ ಅನ್ವಯಿಸತಕ್ಕದ್ದು ಎಂದು ಹೇಳಿದೆ. ಕಲಮು ೧೦೨ ಹಾಗೂ ೧೦೩ ಇವು ನೋಟೀಸಿನ ಬಗ್ಗೆ ಇದ್ದು ಕಲಮು ೧೦೪ ಇದು ನಿಯಮಗಳನ್ನು ಮಾಡುವ ಅಧಿಕಾರದ ಬಗ್ಗೆ ಇದೆ.

ಆಸ್ತಿಹಸ್ತಾಂತರ ಕಾಯಿದೆಯ ಕಲಮು ೧೦೨ ಹೀಗೆ ಇದೆ ;

"ಈ ಪ್ರಕರಣದನ್ವಯವಾಗಿ ಯಾವದೇ ವ್ಯಕ್ತಿಯ ಮೇಲೆ ಯಾವುದೇ ನೋಟೀಸು ಜಾರಿ ಮಾಡಲ್ಪಡಬೇಕಾಗಿರುವಾಗ ಆ ವ್ಯಕ್ತಿಯು ಒತ್ತಿ ಆಸ್ತಿಯು ಇಲ್ಲವೆ ಅದರ ಕೆಲವು ಭಾಗವು ಇರುವ ಜಿಲ್ಲೆಯಲ್ಲಿ ವಾಸವಾಗಿರದಿದ್ದರೆ, ಆ ವ್ಯಕ್ತಿಯಿಂದ ಒಟ್ಟ ಮುಕ್ತ್ಯಾರ ಪತ್ರವನ್ನು ಪಡೆದಿರುವ ಏಜಂಟನ ಮೇಲೆ ಇಲ್ಲ

ನೋಟೀಸು ಸ್ವೀಕರಿಸಲು ಅಧಿಕರಿಸಲ್ಪಟ್ಟ ವ್ಯಕ್ತಿಯ ಮೇಲೆ ಜಾರಿ ಮಾಡಿದರೆ ಅದು ಯೋಗ್ಯ ಜಾರಿಯೆಂದು ಗಣಿಸಲ್ಪಡಲಾಗುವುದು.

ಆ ವ್ಯಕ್ತಿಯಾಗಲಿ, ಇಲ್ಲವೆ ಅವನ ಏಜೆಂಟರಾಗಲಿ ನೋಟೀಸು ಜಾರಿ ಮಾಡಬೇಕೆಂದವನಿಗೆ ದೊರಕದಿದ್ದರೆ ಇಲ್ಲವೆ ಪತ್ತೆ ಗೊತ್ತಿರದಿದ್ದರೆ, ಜಾರಿ ಮಾಡ ಬೇಕೆಂದ ವ್ಯಕ್ತಿಯು ಒತ್ತಿ ಆಸ್ತಿಯ ಋಣವಿಮೋಚನ ಮಾಡಲು ದಾವೆ ತರ ಬಹುದಾದಂತಹ ನ್ಯಾಯಾಲಕ್ಕೆ ಅರ್ಜಿ ಮಾಡಿಕೊಳ್ಳಬಹುದು. ಮತ್ತು ಆ ನ್ಯಾಯಾ ಲಯವು ಆ ನೋಟೀಸು ಹೇಗೆ ಜಾರಿಮಾಲ್ಪಡಬೇಕೆಂಬ ಬಗ್ಗೆ ನಿರ್ದೇಶನ ಕೊಡತ ಕ್ಕದ್ದು ಮತ್ತು ಇಂತಹ ನಿರ್ದೇಶನದ ಅನುಸಾರವಾಗಿ ಜಾರಿ ಮಾಡಿದ ನೋಟೀಸು ಯೋಗ್ಯವಾಗಿ ಜಾರಿಮಾಡಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವುದು.

ಆದರೆ, ಕಲಮು ೮೩ ರಿಂದ ಹೇಳಲ್ಪಟ್ಟ ನೋಟೀಸಿನ ಸಂದರ್ಭದಲ್ಲಿ ಠೇವಿನ ಸಂಬಂಧವಾಗಿರುವಾಗ ಯಾವ ನ್ಯಾಯಾಲಯದಲ್ಲಿ ಠೇವು ಇಡಲ್ಪಟ್ಟಿರುವುದೋ ಆ ನ್ಯಾಯಾಲಯಕ್ಕೆ ಅರ್ಜಿ ಮಾಡಲ್ಪಡಬೇಕು

ಆ ವ್ಯಕ್ತಿಯಾಗಲೀ ಅವನ ಏಜೆಂಟನಾಗಲೀ ದೊರಕದೆ ಇದ್ದರೆ ಇಲ್ಲವೆ ಪತ್ತೆ ಹತ್ತದಿದ್ದರೆ, ಹಣ ಸಲ್ಲಬೇಕೆಂದು ಮಾಡಿದವನು ಆ ಒತ್ತಿ ಋಣ ವಿಮೋಚನ ಮಾಡಲು ದಾವೆ ತರಬಹುದಾದಂತಹ ಯಾವುದೇ ನ್ಯಾಯಾಲಯದಲ್ಲಿ ಆ ಹಣ ವನ್ನು ಠೇವಾಗಿ ಇಡಬಹುದು ಮತ್ತು ಹೀಗೆ ಇಟ್ಟ ಠೇವು ಆ ಹಣವನ್ನು ಕೊಡ ಮಾಡಿದ ಪರಿಣಾಮವನ್ನುಂಟುಮಾಡತಕ್ಕದ್ದು."

ಆಸ್ತಿ ಹಸ್ತಾಂತರ ಕಾಯಿದೆಯ ಕಲಮು ೧೦೩ ರಲ್ಲಿ ಹೀಗೆ ಹೇಳಿದೆ;

ಕರಾರು ಒಪ್ಪಂದ ಮಾಡಿಕೊಳ್ಳಲು ಅಸಮರ್ಥತೆಯಿರುವ ವ್ಯಕ್ತಿಯಿಂದ ಈ ಪ್ರಕರಣದ ಶರತುಗಳ ಅನ್ವಯವಾಗಿ "ನ್ಯಾಯಾಲಯದ ನೆರವಿಲ್ಲದೆ ನೋಟೀಸು ಮುಂತಾದ್ದು ಜಾರಿ ಮಾಡಲ್ಪಡಬೇಕಾಗಿರುವಾಗ ಇಂತಹ ನೋಟೀಸು ಇಂತಹ ಅಸಮರ್ಥ ವ್ಯಕ್ತಿಯ ಆಸ್ತಿಯ ಕಾಯಿದೇಶೀರ ವ್ಯವಸ್ಥಾಪಕ ನಿಂದ ಜಾರಿ ಮಾಡಿಸಲ್ಪಡಬೇಕು. ಆದರೆ ಈ ತರಹದ ವ್ಯವಸ್ಥಾಪಕನು ಇರದೇ ಇರುವಾಗ ಮತ್ತು ನೋಟೀಸು ಜಾರಿ ಮಾಡಲ್ಪಡುವುದು ಆವಶ್ಯಕವಾಗಿರುವಾಗ, ಯಾವ ನ್ಯಾಯಾಲಯದಲ್ಲಿ ಒತ್ತಿ ಆಸ್ತಿ ಋಣ ವಿಮೋಚನಕ್ಕಾಗಿ ದಾವಾ ಮಾಡ ಬಹುದಾಗಿಯೋ ಆ ನ್ಯಾಯಾಲಯಕ್ಕೆ ದಾವಾದ ಮಟ್ಟಿಗೆ ಪಾಲಕನನ್ನು ನೇಮಿಸಲು ಇಂತಹ ನೋಟೀಸು ಜ್ಯಾರಿ ಮಾಡಿಸಲು ಇಲ್ಲವೆ ಸ್ವೀಕರಿಸಲು, ಅವನು ಸಮರ್ಥ ನಾಗಿದ್ದರೆ ಯಾವ ಕಾರ್ಯಗಳನ್ನು ಮಾಡಬಹುದಾಗಿದ್ದವೋ ಅವನ್ನೆಲ್ಲವನ್ನು ಆ ಸಂಬಂಧವಾಗಿ ಎಲ್ಲ ಪಾರಿಣಾಮಿಕ ಕಾರ್ಯಗಳನ್ನು ಮಾಡಲು ,ಅರ್ಜಿ ಮಾಡ ತಕ್ಕದ್ದು. ಈ ಸಂಬಂಧವಾಗಿ ಇಂತಹ ಅರ್ಜಿಗೆ ಅದರ ಪಕ್ಷಕಾರರಿಗೆ ಮತ್ತು ನೇಮಕವಾದ ಪಾಲಕನಿಗೆ ಸಿವಿಲ್ ಪ್ರೊಸಿಜರ ಕೋಡದ ಮೊದಲನೆಯ ಕೋಷ್ಟಕದ ಆರ್ಡರ ೩೨ ಅನ್ವಯಿಸತಕ್ಕದ್ದು."

ಸಿವಿಲ ಪ್ರೊಸಿಜರ ಕೋಡದ-ಮೊದಲನೆಯ ಕೋಷ್ಟಕದ ಆರ್ಡರು ೩೨ ಇದು ಅಲ್ಪವಯಿ ಇಲ್ಲವೆ ಅಬಂಧುರ ಮನಸ್ಸಿನವರಿಂದ ಇಲ್ಲವೆ ಅದರ ವಿರುದ್ಧ ದಾವೆ ಮಾಡಬೇಕಾದರೆ ಏನು ಮಾಡಬೇಕೆಂಬ ಬಗ್ಗೆ ಇದೆ.

ಆಸ್ತಿ ಹಸ್ತಾಂತರ ಕಾಯಿದೆಯ ೧೦೪ ನೆಯ ಕಲುಮಿನಲ್ಲಿ ಹೀಗೆ ಹೇಳಿದೆ. "ಈ ಪ್ರಕರಣದಲ್ಲಿಯ ಶರತುಗಳನ್ನು ಕಾರ್ಯಕಾರಿ ಮಾಡುವುದಕ್ಕಾಗಿ ಹಾಯ್ ಕೋರ್ಟು ಕಾಲಕಾಲಕ್ಕೆ ಈ ಕಾಯಿದೆಗೆ ಸುಸಂಗತವಾಗುವಂತೆ ನಿಯಮಗಳನ್ನು ಮಾಡಬಹುದು".

ಈ ಎಲ್ಲ ಮಾತುಗಳನ್ನು ಲಕ್ಷಿಸಿ, ಈ ಪ್ರಕರಣದನ್ವಯವಾಗಿರುವ ನೋಟೀಸುಗಳನ್ನು ಜಾರಿ ಮಾಡತಕ್ಕದ್ದು.

## ೯೮. ಕ್ರಮ ನಿಯಮಗಳನ್ನು ಮಾಡಲು ಬೋರ್ಡದ ಅಧಿಕಾರ

ಧರ್ಮದರ್ಶಿಯ ಒಪ್ಪಿಗೆಯ ಅಂಕಿತವಾಗಿ ಅಧಿಕೃತ ಗ್ಯಾಜಿಟದಲ್ಲಿಯ ಪ್ರಕಟನೆಯಿಂದ ಬೋರ್ಡು ಈ ಕಾಯದೆಯ ಇಲ್ಲವೆ ನಿಯಮಗಳ ಶರತುಗಳಿಗೆ ವಿಸಂಗತವಾಗದಂತೆ ಈ ಕೆಳಗಿನ ವಿಷಯಗಳ ಬಗ್ಗೆ ಕ್ರಮ ನಿಯಮಗಳನ್ನು ಮಾಡಬಹುದು:—

(ಅ) ಡಿಬೆಂಚರುಗಳ ಕಾಲಾವಧಿಯನ್ನು ಮತ್ತು ಅವುಗಳ ಮೇಲಿನ ಬಡಿಯ ದರವನ್ನು ಗೊತ್ತುಮಾಡುವುದಕ್ಕಾಗಿ;

(ಬ) ಡಿಬೆಂಚರ ಧಾರಕರಿಗೆ ನೋಟೀಸು ಕೊಟ್ಟ ನಂತರ ಡಿಬೆಂಚರುಗಗಳನ್ನು ಕರೆಯುವದಕ್ಕಾಗಿ;

(ಕ) ಧಕ್ಕೆ ತಗಲಿ ಇಲ್ಲಿವೆ ಹಾಳಾದ ಡಿಬೆಂಚರುಗಳ ಸ್ಥಳದಲ್ಲಿ ಹೊಸ ಡಿಬೆಂಚರಗಳನ್ನು ಹೊರಡಿಸುವದಕ್ಕಾಗಿ;

(ಡ) ಒಂದು ವರ್ಗದ ಡಿಬೆಂಚರುಗಳನ್ನುಬೇರೆ ಬಡ್ಡಿದರವುಳ್ಳ ಬೇರೆ ವರ್ಗದ ಡಿಬೆಂಚರುಗಳನ್ನಾಗಿ ಪರಿವರ್ತಿಸುವದಕ್ಕಾಗಿ;

(ಇ) ಲ್ಯಾಂಡ ಮಾರ್ಗೇಜ ಬ್ಯಾಂಕುಗಳ ಕಾರ್ಯಕಲಾಪಗಳನ್ನು ಹಾಗೂ ಲೆಕ್ಕದ ಪುಸ್ತಕಗಳನ್ನು ಪರಿಶೀಲಿಸುವುದಕ್ಕಾಗಿ;

(ಫ) ತಮ್ಮ ವ್ಯವಹಾರಗಳ ಬಗ್ಗೆ ಲ್ಯಾಂಡ ಮಾರ್ಗೇಜ ಭ್ಯಾಂಕುಗಳು ವಿವರ ಪತ್ರಿಕೆಗಳನ್ನು ಸಾದರಪಡಿಸುವುದಕ್ಕಾಗಿ;

(ಗ) ಲ್ಯಾಂಡಮಾರ್ಗೇಜ ಬ್ಯಾಂಕುಗಳ ನಡುವಿನ ನಿಯತಕಾಲಿಕ ಲೆಕ್ಕಗಳನ್ನು ನಿಶ್ಚಿತಗೊಳಿಸುವವುದಕ್ಕಾಗಿ ಮತ್ತು ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಹಸ್ತಾಂತರಿಸಲಾದ ಇಲ್ಲವೆ ಕಲಮು ೮೫ ರ ಶರತುಗಳನ್ವಯವಾಗಿ ಹಸ್ತಾಂತರಿಸಲಾಗಿದೆಯೆಂದು ಗಣಿಸಲಾದ ಒತ್ತಿ ಆಧಾರಗಳ ಮೇಲೆ ಲ್ಯಾಂಡ ಮಾರ್ಗೇಜ ಬ್ಯಾಂಕುಗಳಿಂದ ವಸೂಲಮಾಡಲ್ಪಟ್ಟ ರಕಮುಗಳನ್ನು ಕೊಡುವುದಕ್ಕಾಗಿ;

(ಹ) ಲ್ಯಾಂಡ ಮಾರ್ಗೇಜ ಬ್ಯಾಂಕುಗಳಿಗೆ ಸಾಲಗಳ ಸಲುವಾಗಿ ಯಾವ ನಮೂನೆಗಳಲ್ಲಿ ಅರ್ಜಿಗಳನ್ನು ಮಾಡಬೇಕೆಂಬುದರ ನಮೂನೆಗಳನ್ನು ನಿರ್ದಿಷ್ಟಪಡಿಸುವುದಕ್ಕಾಗಿ ಹಾಗೂ ಇಂತಹ ಸಾಲಗಳಿಗಾಗಿ ಭದ್ರತೆಯೆಂದು ಕೊಡಮಾಡಿದ ಆಸ್ತಿಗಳ ಮೌಲ್ಯಮಾಪನಕ್ಕಾಗಿ;

(ಈ) ಒತ್ತಿ ಆಧಾರಗಳಿಂದ ವಸೂಲಾದ ಹಣಗಳನ್ನು ತೊಡಗಿಸುವುದಕ್ಕಾಗಿ;

(ಜ) ಈ ಪ್ರಕರಣದ ಶರತುಗಳನ್ನು ಸಾಮಾನ್ಯವಾಗಿ ಕಾರ್ಯಕಾರಿ ಮಾಡುವ ಉದ್ದೇಶಕ್ಕಾಗಿ.

**ವಿವೇಚನೆ**

ಬೋರ್ಡು ಕೆಲವೊಂದು ವ್ಯವಹಾರಗಳ ಪದ್ಧತಿಕ್ರಮ ನಿರ್ಣಯಿಸುವುದಕ್ಕಾಗಿ ಕ್ರಮನಿಯಮಗಳನ್ನು ಮಾಡಲು ಈ ಕಲಮು ಅಧಿಕಾರ ಕೊಡುತ್ತದೆ. ಕ್ರಮನಿಯಮಗಳು ಈ ಕಾಯಿದೆಯ ಶರತುಗಳಿಗೆ ಇಲ್ಲವೆ ನಿಯಮಗಳಿಗೆ ವಿಸಂಗತವಾಗುವಂತೆ ಇರಬಾರದು ಎಂಬುದು ಮುಖ್ಯ ಮಾತು. ಅಲ್ಲದೆ ಕ್ರಮನಿಯಮಗಳನ್ನು ರೂಪಿಸುವುದಕ್ಕೆ ಧರ್ಮದರ್ಶಿಯ ಒಪ್ಪಿಗೆ ಬೇಕು. ಮತ್ತು ಅಧಿಕೃತ ಗ್ಯಾಜೆಟದಲ್ಲಿ ಆ ಬಗ್ಗೆ ಪ್ರಕಟನೆಯನ್ನು ಹೊರಡಿಸಬೇಕು. ಈ ವಿಧಾನವನ್ನು ಅನುಸರಿಸಿದ ಮೇಲೆ ಬೋರ್ಡ ಕ್ರಮನಿಯಮಗಳನ್ನು ಮಾಡಬಹುದು. ಕ್ರಮನಿಯಮಗಳನ್ನು ಯಾವ ವಿಷಯಗಳ ಬಗ್ಗೆ ಮಾಡಬಹುದೆಂಬ ಬಗ್ಗೆ ಈ ಕಲಮಿನಲ್ಲಿ ವಿವರಗಳನ್ನು ಕೊಡಲಾಗಿದೆ. ಅವು ಇಂತಿವೆ.

ಡಿಬೆಂಚರುಗಳು ನಿಶ್ಚಿತ ಕಾಲಾವಧಿಯ ಸಾಲಗಳು. ಆ ಕಾಲಾವಧಿಯನ್ನು ನಿಶ್ಚಿತಗೊಳಿಸಲಿಕ್ಕೆ, ಡಿಬೆಂಚರುಗಳ ಮೇಲಿನ ಬಡ್ಡಿಯ ದರವನ್ನು ನಿಶ್ಚಿತಗೊಳಿಸಲಿಕ್ಕೆ ಕ್ರಮನಿಯಗಳನ್ನು ಮಾಡಬಹುದು. ಡಿಬೆಂಚರುಗಳನ್ನು ಆ ಕಾಲಾವಧಿ ಮುಗಿಯುವಕಿಂತ ಮೊದಲೆ ಕಲಮು ೭೯ರ ಪ್ರಕಾರ ಹಿಂದೆ ತೆಗೆದುಕೊಳ್ಳಬೇಕೆಂದು ನಿರ್ಣಯಿಸಿದರೆ, ಡಿಬೆಂಚರುಗಳನ್ನು ಕರೆಯಿಸಿಕೊಳ್ಳುವುದಕ್ಕೆ ಮತ್ತು ಆ ಬಗ್ಗೆ ಡಿಬೆಂಚರು ಧಾರಕರಿಗೆ ನೋಟೀಸು ಕೊಡುವುದಕ್ಕೆ ಕ್ರಮನಿಯಮಗಳನ್ನು ಮಾಡಬಹುದು. ಡಿಬೆಂಚರುಗಳು ಹಾಳಾಗಿದ್ದರೆ ಇಲ್ಲವೆ ಅವಕ್ಕೆ ಧಕ್ಕೆ ತಗಲಿದ್ದರೆ ಅವುಗಳ ಬದಲು ಹೊಸ ಡಿಬೆಂಚರುಗಳನ್ನು ಹೊರಡಿಸಲಿಕ್ಕೆ ಮತ್ತು ಒಂದು ವರ್ಗದ ಡಿಬೆಂಚರುಗಳನ್ನು ಇನ್ನೊಂದು ವರ್ಗದ ಡಿಬೆಂಚರುಗಳನ್ನಾಗಿ ಪರಿವರ್ತಿಸಲಿಕ್ಕೆ ಹಾಗೂ ಪರಿವರ್ತಿತವಾದ ಡಿಬೆಂಚರುಗಳ ಮೇಲೆ ಬೇರೆ ಬಡ್ಡಿಯ ದರವನ್ನು ನಿರ್ಣಯಿಸಲಿಕ್ಕೆ ಕ್ರಮನಿಯಮಗಳನ್ನು ಮಾಡಬಹುದು. ಇವೆಲ್ಲವೂ ಒಂದು ವಿಧಾನ ಹಾಗೂ ಕ್ರಮದಿಂದ ನಡೆಯಬೇಕಾಗುವುದು. ಏಕೆಂದರೆ ಅವುಗಳಿಗೆ ಕಾಯಿದೆಶೀರ ಹಕ್ಕುಗಳು ಪ್ರಾಪ್ತವಾಗುವವು. ಪ್ರಾಪ್ತವಾದ ಹಕ್ಕುಗಳು ಭದ್ರವಾಗಿ ಉಳಿಯಬೇಕು. ಆದ್ದರಿಂದ ಕ್ರಮನಿಯಮಗಳು ಬೇಕಾಗುವವು.

ಲ್ಯಾಂಡಮಾರ್ಗೇಜ ಬ್ಯಾಂಕುಗಳ ಲೆಖ್ಖದ ಪುಸ್ತಕಗಳನ್ನು ಹಾಗೂ ಅವುಗಳ ಕಾರ್ಯಕಲಾಪಗಳ ಪುಸ್ತಕಗಳನ್ನು ಪರಿಶೀಲನೆ ಮಾಡುವುದು ಒಂದು ಕ್ರಮ. ಅದಕ್ಕಾಗಿ ಕ್ರಮನಿಯಮಗಳನ್ನು ಮಾಡಬೇಕಾಗುವುದು. ಲ್ಯಾಂಡ ಮಾರ್ಗೇಜ ಬ್ಯಾಂಕುಗಳು ತಮ್ಮ ವ್ಯವಹಾರಗಳ ಬಗ್ಗೆ ವಿವರ ಪತ್ರಿಕೆಗಳನ್ನು ಕಳಿಸಬೇಕಾಗುವುದು. ಅವುಗಳನ್ನು ಹೇಗೆ ಕಳಿಸಬೇಕು, ಎಂದು ಕಳಿಸಬೇಕು, ಅದರಲ್ಲಿ ವಿವರ ಏನು ಇರಬೇಕು ಎಂಬ ಬಗ್ಗೆ ಕ್ರಮನಿಯಮಗಳನ್ನು ಮಾಡಬೇಕಾಗುವುದು.

ಲ್ಯಾಂಡಮಾರ್ಗೇಜ ಬ್ಯಾಂಕುಗಳು ಒಂದು ಮತ್ತೊಂದರ ಸಂಗಡ ವ್ಯವಹಾರ ಮಾಡುವುವು. ಅವುಗಳ ನಡುವಿನ ಲೆಖ್ಖಗಳನ್ನು ನಿಯತಕಾಲಿಕವಾಗಿ ನಿಶ್ಚಿತಗೊಳಿಸಬೇಕಾಗುವುದು ಲ್ಯಾಂಡಮಾರ್ಗೇಜ ಬ್ಯಾಂಕುಗಳು ತಮ್ಮ ಹತ್ತರ ಬಂದ ಒತ್ತಿ ಆಸ್ತಿಗಳನ್ನು ರಾಜ್ಯದ ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಹಸ್ತಾಂತರ ಮಾಡಿರುವುವು. ಇಲ್ಲವೆ ಕಲಮು ೮೫ ರ ಪ್ರಕಾರ ಹಸ್ತಾಂತರ ಮಾಡಲ್ಪಟ್ಟಿವೆ ಎಂದು ಗಣಿಸಲ್ಪಟ್ಟಿರುವುದು. ಲ್ಯಾಂಡಮಾರ್ಗೇಜ ಬ್ಯಾಂಕುಗಳು ಒತ್ತಿ ಆಸ್ತಿಯ ಮೇಲೆ ವಸೂಲ ಮಾಡಿದ ರಕಮುಗಳನ್ನು ಕೊಡಬೇಕಾಗುವುದು. ಆ ಬಗ್ಗೆ ಕ್ರಮ ನಿಯಮಗಳು ಬೇಕಾಗುವುದು. ಈ ವಿಷಯಗಳ ಮೇಲೆ ಕ್ರಮ ನಿಯಮಗಳನ್ನು ಮಾಡಬಹುದು.

ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಸಾಲದ ಅರ್ಜಿಗಳು ಬರುವುವು. ಆ ಅರ್ಜಿಗಳು ಯಾವ ನಮೂನೆಯಲ್ಲಿ ಇರಬೇಕು ಎಂಬುದನ್ನು ನಿಶ್ಚಿತಗೊಳಿಸುವುದಕ್ಕಾಗಿ ಕ್ರಮ ನಿಯಮಗಳನ್ನು ಮಾಡಬಹುದು. ಅದರಂತೆ ಸಾಲಕ್ಕಾಗಿ ಕೊಡಮಾಡಿದ ಭದ್ರತೆಯ ಆಸ್ತಿಯ ಬೆಲೆಯನ್ನು ಕಟ್ಟಲಿಕ್ಕೆ ವಿಧಾನಗಳನ್ನು ಗೊತ್ತು ಮಾಡಬೇಕಾಗುವುದು. ಅದರ ಸಲುವಾಗಿ ಕ್ರಮ ನಿಯಮಗಳನ್ನು ಮಾಡಬಹುದು.

ಒತ್ತಿ ಆಧಾರದ ಆಸ್ತಿಯಿಂದ ವಸೂಲಾದ ಹಣವನ್ನು ಹೇಗೆ ತೊಡಗಿಸಬೇಕು ಎಂಬುವ ಬಗ್ಗೆ ಕ್ರಮ ನಿಯಮಗಳು ಬೇಕು. ಒಟ್ಟಿನಲ್ಲಿ ಈ ಪ್ರಕರಣದ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದಕ್ಕೆ ಏನೇನು ಮಾಡಬೇಕಾಗುವುದೊ ಅದೆಲ್ಲವನ್ನು ಕ್ರಮವಾಗಿ ಮಾಡಲು ಕ್ರಮ ನಿಯಮಗಳನ್ನು ಮಾಡಬಹುದು.

ಸಂಘ ಸಂಸ್ಥೆಗಳ ವ್ಯವಹಾರಗಳು ವೈಯಕ್ತಿಕ ವಿವೇಕದ ಮೇಲೆ ನಡೆಯಬಾರದೆಂದು ಪ್ರತಿಯೊಂದು ಕಾರ್ಯಕ್ಕೂ ಒಂದು ಕ್ರಮ ಇರಬೇಕು. ಅದಕ್ಕಾಗಿ ಕ್ರಮ ನಿಯಮಗಳನ್ನು ರೂಪಿಸಬೇಕಾಗಿರುವುದು. ಕ್ರಮ ನಿಯಮಗಳನ್ನು ಮಾಡಲು ಈ ಕಲಮು ಬೋರ್ಡಿಗೆ ಅಧಿಕಾರ ಕೊಡುತ್ತದೆ.

## ಪ್ರಕರಣ: ೧೨: ಅವಾರ್ಡುಗಳ, ಡಿಕ್ರಿಗಳ, ಹುಕುಮುಗಳ ಹಾಗೂ ನಿರ್ಣಯಗಳ ನಿರ್ವಹಣೆ

### ೯೯ ಅಧಿಕಾರ ಭಾರವನ್ನು ಕಾರ್ಯಕಾರಿ ಮಾಡುವುದು.

ಪ್ರಕರಣ ೯ ರಲ್ಲಿ ಇಲ್ಲವೆ ಆ ಕಾಲದಲ್ಲಿ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ, ಆದರೆ ಈ ಕಾಯಿದೆಯಲ್ಲಿ ಅನುಕೂಲಿಸ

ಲಾದ ವಸೂಲಿಯ ಯಾವುದೇ ಬೇರೆ ವಿಧಾನಕ್ಕೆ ವ್ಯತ್ಯಯ ಬರದಂತೆ, ಕಲಮು ೩೨ ರ ಉಪಕಲಮು (೧) ರನ್ವಯವಾಗಿರುವ ಅಧಿಕಾರ ಭಾರದ ಅಂಕಿತವಾಗಿರುವ ಆಸ್ತಿಯನ್ನು ಸಹಕಾರಿ ಸಂಘವು ಅರ್ಜಿಮಾಡಿದರೆ, ರಜಿಸ್ಟ್ರಾರನು ಇಲ್ಲವೆ ಅವನ ಕೈಕೆಳಗೆ ಕೆಲಸ ಮಾಡುವ ಹಾಗೂ ರಜಿಸ್ಟ್ರಾರನಿಂದ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ಯಾವುದೇ ಸದಸ್ಯನಿಂದ, ಹಿಂದಿನ ಸದಸ್ಯನಿಂದ ಇಲ್ಲವೆ ಮರಣಹೊಂದಿದ ಸದಸ್ಯನಿಂದ ಸಂಘಕ್ಕೆ ಕೊಡಬೇಕಾದ ಯಾವುದೇ ಸಾಲದ ಸಲುವಾಗಿ ಇಲ್ಲವೆ ಯಾವುದೇ ಬಾಕಿಯ ಸಲುವಾಗಿ ಮಾರಾಟಮಾಡಿಸಿ ಹಣವನ್ನು ಕೊಡಬೇಕೆಂಬ ನಿರ್ದೇಶನವುಳ್ಳ ಹುಕುಮನ್ನು ಮಾಡಬಹುದು.

ಆದರೆ, ಹಾಗೆ ಅರ್ಜಿ ಮಾಡಲಾಗಿದೆಯೆಂದು ಆ ಸದಸ್ಯನಿಗೆ, ಹಿಂದಿನ ಸದಸ್ಯರಿಗೆ, ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣದ ವ್ಯಕ್ತಿಗೆ, ವಾರಸದಾರನಿಗೆ ಇಲ್ಲವೆ ಕಾಯಿದೇಶೀರ ಪ್ರತಿನಿಧಿಗೆ ನೋಟೀಸು ಜಾರಿಮಾಡಿದ ಹೊರತು ಮತ್ತು ಇಂತಹ ನೋಟೀಸು ಮುಟ್ಟಿದ ತಾರೀಖಿನಿಂದ ಏಳು ದಿವಸಗಳ ಒಳಗೆ ಅವನು ಸಾಲವನ್ನು ಇಲ್ಲವೆ ಬಾಕಿಯಾಗಿರುವ ಹಣವನ್ನು ಸಲ್ಲಿಸಲು ತಪ್ಪಿದ ಹೊರತು ಈ ಕಲಮಿನನ್ವಯವಾಗಿ ಯಾವ ಹುಕುಮೂ ಮಾಡಲ್ಪಡತಕ್ಕದ್ದಲ್ಲ.

**ವಿವೇಚನೆ**

ಅಧಿಕಾರ ಭಾರವನ್ನು ಕಾರ್ಯಕಾರಿ ಮಾಡುವುದರ ಸಲುವಾಗಿ ಈ ಕಲಮಿನಲ್ಲಿ ಹೇಳಿದೆ. ಪ್ರಕರಣ ೯ ರಲ್ಲಿ ಏನೇ ಹೇಳಿದ್ದರೂ ಇಲ್ಲವೆ ಆ ಕಾಲದಲ್ಲಿ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಿದ್ದರೂ ಈ ಕಲಮು ಕಾರ್ಯಕಾರಿಯಾಗುವುದು ಎಂದು ಹೇಳಿದೆ. ಪ್ರಕರಣ ೯ ತಂಟೆಗಳ ನಿರ್ಣಯಗಳ ಬಗ್ಗೆ ಇದೆ. ಬೇರೆ ಕಾಯಿದೆಗಳೆಂದರೆ ಆಸ್ತಿಯ ಮೇಲೆ ಅಧಿಕಾರ ಭಾರ ಇರುವುದರ ಬಗ್ಗೆ ಇರುವ ಕಾಯಿದೆಗಳು ಅಂದರೆ ಆಸ್ತಿ ಹಸ್ತಾಂತರ ಕಾಯಿದೆಗಳಂತಹವು. ಅವುಗಳಲ್ಲಿ ಏನೇ ಹೇಳಿದ್ದರೂ ಈ ಕಲಮಿನಲ್ಲಿ ಹೇಳಿದ ಅಧಿಕಾರಕ್ಕೆ ಅವು ಅಡ್ಡಬರಲಾರವು ಎಂದು ಅರ್ಥ.

ಕಲಮು ೩೨ ರ ಉಪಕಲಮು (೧) ರಲ್ಲಿ "........ ಬೆಳೆಯು ಮತ್ತು ಇತರ ಒಕ್ಕಲುತನ ಹುಟ್ಟುವಳಿಯು, ದನ, ದನಕ್ಕಾಗಿ ಮೇವು, ಒಕ್ಕಲುತನ ಇಲ್ಲವೆ ಔದ್ಯಮಿಕ ಉಪಕರಣಗಳು ಇಲ್ಲವೆ ಯಂತ್ರಗಳು, ಸಿದ್ಧಸರಕಿಗಾಗಿ ಕಚ್ಚಾಮಾಲುಗಳು ಮತ್ತು ಇಂತಹ ಕಚ್ಚಾಮಾಲುಗಳಿಂದ ಸಿದ್ಧವಾದ ಸರಕುಗಳು ಇವುಗಳ ಮೇಲೆ ಸಂಘದ ಪ್ರಥಮ ಅಧಿಕಾರಭಾರ ಇರತಕ್ಕದ್ದು...." ಎಂದು ಹೇಳಿದೆ. ಹೀಗೆ ಅಧಿಕಾರ ಭಾರವಿರುವ ಆಸ್ತಿಗಳನ್ನು ಮಾರಾಟ ಮಾಡಿಸಿ, ಸದಸ್ಯನ ಇಲ್ಲವೆ ಹಿಂದಿನ ಸದಸ್ಯನ ಇಲ್ಲವೆ ಮರಣ ಹೊಂದಿದ ಸದಸ್ಯ ಸಾಲವು ಇಲ್ಲವೆ ಬಾಕಿಯಾಗಿರುವ ಹಣವು ಕೊಡಲ್ಪಡಬೇಕೆಂಬ ಹಾಗೆ ನಿರ್ದೇಶನಕೊಡಲು ಬರುವುದು

ಎಂದು ಈ ಕಲಮು ಹೇಳುತ್ತದೆ. ಹೀಗೆ ಮಾರಾಟ ಮಾಡಿಸಲು ನಿರ್ದೇಶನ ಕೊಡುವವನು ರಜಿಸ್ಟ್ರಾರ ಅಥವಾ ಅವನ ಕೈಕೆಳಗೆ ಕೆಲಸ ಮಾಡುವ ಹಾಗೂ ರಜಿಸ್ಟ್ರಾರನಿಂದ ಈ ಸಂಬಂಧವಾಗಿ ಅಧಿಕರಿಸಲ್ಪಟ್ಟ ಬೇರೆ ವ್ಯಕ್ತಿಯು. ಈ ನಿರ್ದೇಶನವನ್ನು ಅವನು ಕೊಡಬೇಕಾದರೆ ಅದಕ್ಕೆ ಮುಂಚೆ ಆ ಸಹಕಾರಿ ಸಂಘವು ಅರ್ಜಿ ಮಾಡಿರಬೇಕು.

ಅರ್ಜಿಯು ಮಾಡಲ್ಪಟ್ಟ ನಂತರ, ಹೀಗೆ ಅರ್ಜಿ ಬಂದಿದೆಯೆಂದು ಒಂದು ನೋಟೀಸನ್ನು ಸಂಬಂಧಪಟ್ಟ ಸದಸ್ಯನಿಗೆ, ಹಿಂದಿನ ಸದಸ್ಯನಿಗೆ, ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣದ ವ್ಯಕ್ತಿಗೆ, ವಾರಸದಾರನಿಗೆ ಇಲ್ಲವೆ ಕಾಯಿದೇಶೀರ ಪ್ರತಿನಿಧಿಗೆ ಕೊಡಬೇಕು. ಆ ನೋಟೀಸಿನ ತಾರೀಖಿನ ನಂತರ ಏಳು ದಿನಸಗಳ ಒಳಗೆ ಆ ಸಂಬಂಧಪಟ್ಟ ವ್ಯಕ್ತಿಯು ಸಾಲದ ಇಲ್ಲವೆ ಬಾಕಿಯಾಗಿರುವ ಹಣದ ಸಂಬಂಧವಾಗಿ ಹಣವನ್ನು ಸಲ್ಲಿಸದಿದ್ದರೆ ಅವನ ಆ ಆಸ್ತಿಯು ಮಾರಾಟ ಮಾಡಿಸಲ್ಪಟ್ಟು ಹಣವನ್ನು ಭರತಿ ಮಾಡಬೇಕೆಂಬ ನಿರ್ದೇಶನವುಳ್ಳ ಹುಕುಮನ್ನು ಮಾಡಬಹುದು ಎಂದು ಹೇಳಿದೆ.

ಅಂದರೆ ಸಂಘದ ಪ್ರಥಮ ಅಧಿಕಾರಭಾರ ಇರುವ ಆಸ್ತಿಗಳು ಇರಬೇಕು. ಆ ಸದಸ್ಯನು ಸಂಘಕ್ಕೆ ಸಾಲ ಇಲ್ಲವೆ ಬಾಕಿ ಹಣ ಕೊಡುವುದಾಗಿರಬೇಕು. ಸಂಘವು ಅರ್ಜಿ ಮಾಡಿರಬೇಕು. ಅರ್ಜಿಯ ಬಗ್ಗೆ ಆ ಸದಸ್ಯನಿಗೆ ನೋಟೀಸು ಆಗಬೇಕು. ನೋಟೀಸು ಮುಟ್ಟಿದ ೭ ದಿವಸಗಳಲ್ಲಿ ಸದಸ್ಯನು ಹಣವನ್ನು ಕೊಡದಿದ್ದರೆ ಮುಂದೆ ರಜಿಸ್ಟ್ರಾರನು ಇಲ್ಲವೆ ಅಧಿಕರಿಸಲ್ಪಟ್ಟ ವ್ಯಕ್ತಿಯು ಹುಕುಮು ಹೊರಡಿಸಬೇಕು. ಅಧಿಕಾರ ಭಾರವಿದ್ದ ಆಸ್ತಿಯನ್ನು ಮಾರಾಟಮಾಡಿಸಿ ಸಾಲದ ಹಣಕ್ಕೆ ಕೊಡಬೇಕೆಂಬ ನಿರ್ದೇಶನವು ಆ ಹುಕುಮಿನಲ್ಲಿ ಇರಬೇಕು ಎಂದು ವಿಧಾನ ಹಾಗೂ ಅಧಿಕಾರಗಳು ಈ ಕಲಮಿನಲ್ಲಿ ಹೇಳಲಾಗಿದೆ.

## ೧೦೦. ಸಂಘಗಳಿಗೆ ಸಲ್ಲಬೇಕಾಗಿದ್ದ ಹಣಗಳ ವಸೂಲಿ

(೧) ಪ್ರಕರಣ ೯ ರಲ್ಲಿ ಇಲ್ಲವೆ ಆ ಕಾಲಕ್ಕೆ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಬೆಳೆಯ ಸಲುವಾಗಿ ಇಲ್ಲವೆ ಹಂಗಾಮಿ ಆರ್ಥಿಕ ಸಹಾಯ ಮಾಡಿದ ಕಾರಣದಿಂದ ಯಾವುದೇ ತನ್ನ ಸದಸ್ಯನಿಗೆ ಸಲ್ಲಿಸಿದ ಯಾವುದೇ ಮುಂಗಡ ಹಣದ ಬಾಕಿ ವಸೂಲಿಗಾಗಿ ಮನ್ನಣೆ ಪಡೆದ ಸಂಘದಿಂದ ಅರ್ಜಿಯು ಮಾಡಲ್ಪಟ್ಟರೆ ಮತ್ತು ಬಾಕಿಯ ಸಂಬಂಧವಾಗಿ ವಿವರಗಳುಳ್ಳ ಒಂದು ಹೇಳಿಕೆಯು ಕೊಡಲ್ಪಟ್ಟರೆ, ಗೊತ್ತು ಮಾಡಬಹುದಾದ ರೀತಿಯಲ್ಲಿ ವಿಚಾರಣೆ ಮಾಡಿದ ನಂತರ ರಜಿಸ್ಟ್ರಾರನು ಆ ಹೇಳಿಕೆಯಲ್ಲಿ ನಮೂದಿಸಲಾದ ಹಣದ ವಸೂಲಿಗಾಗಿ ಆ ಹಣವು ಬಾಕಿಯಾಗಿ ಉಳಿದಿರುವ ಹಣವೆಂದು ಸರ್ಟಿಫಿಕೇಟನ್ನು ದಯಪಾಲಿಸಬಹುದು.

ಆದರೆ, ಸಂಘಕ್ಕೆ ಸಲ್ಲಬೇಕಾಗಿದ್ದ ಬಾಕಿಯಾದ ಹಣವನ್ನು ನಿರ್ಧರಿಸುವುದು ವಸ್ತುಸ್ಥಿತಿ ಇಲ್ಲವೆ ಕಾಯಿದೆಯ ಜಟಿಲ ಪ್ರಶ್ನೆಗಳ ಮೇಲೆ ಅವಲಂಬಿತವಾಗಿದ್ದರೆ, ಕಲಮು ೭೧ ರ ಪ್ರಕಾರ ರಜಿಸ್ಟ್ರಾರನು ಆ ಪ್ರಕರಣವನ್ನು ಅದು ಕಲಮು ೭೦ ರನ್ವಯವಾಗಿ ಅವನಿಗೆ ಕಳಿಸಲ್ಪಟ್ಟ ತಂಟೆ ಇರುವುದೆಂಬ ಹಾಗೆ ತಿಳಿದು ನಿಕಾಲೆ ಮಾಡತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿ ರಜಿಸ್ಟ್ರಾರನಿಂದ ದಯಪಾಲಿಸಲಾದ ಸರ್ಟಿಫಿಕೇಟು ಕೊನೆಯದೂ ನಿರ್ಣಾಯಕವೂ ಆಗಿರತಕ್ಕದ್ದು. ಅದರಲ್ಲಿ ನಮೂದಾದ ಬಾಕಿ ಹಣವು ಭೂ ಕಂದಾಯದ ಬಾಕಿಯಂತೆ ಇಲ್ಲವೆ ಕಲಮು ೧೦೧ ರಲ್ಲಿ ಅನುಕೂಲಿಸಲಾದ ವಿಧಾನದಂತೆ ವಸೂಲ ಮಾಡಲ್ಪಡಲು ಯೋಗ್ಯವಾಗತಕ್ಕದ್ದು.

ಆದರೆ, ಇಂತಹ ಸರ್ಟಿಫಿಕೇಟದಲ್ಲಿ ಕಂಡು ಬಂದ ಯಾವುದೇ ತಪ್ಪು, ರಜಿಸ್ಟ್ರಾರನಿಂದ ಅವನ ಸ್ವಂತದ ಪ್ರೇರಣೆಯಿಂದ ಇಲ್ಲವೆ ಸಂಘದ ಇಲ್ಲವೆ ಸರ್ಟಿಫಿಕೇಟದಿಂದ ಬಾಧಿತನಾದ ಸದಸ್ಯನ ಅರ್ಜಿಯ ಮೂಲಕ ತಿದ್ದುಪಡಿ ಮಾಡಲ್ಪಡಬಹುದು.

(೩) ಸಂಘಕ್ಕೆ ಸಲ್ಲಬೇಕಾಗಿರುವ ಬಾಕಿಯಾದ ಹಣ, ಬಡ್ಡಿ ಸಹಿತವಾಗಿ ಹಾಗೂ ಇಂತಹ ಬಾಕಿ ಹಣವನ್ನು ವಸೂಲು ಮಾಡುವಾಗ ಹತ್ತಿದ ವೆಚ್ಚದ ಹಣ ಕೊಡಲ್ಪಡುವ ತನಕ ಇಲ್ಲವೆ ರಜಿಸ್ಟ್ರಾರನಿಗೆ ಸಮಾಧಾನವಾಗುವಂತೆ ಆ ಹಣವು ಸಲ್ಲಿಸಲ್ಪಡುವುದಕ್ಕಾಗಿ ಭದ್ರತೆಯ ಜಾಮೀನು ಕೊಡುವ ತನಕ ೧೮೮೮ (ಮೈಸೂರ ಕಾಯಿದೆ–೪–೧೮೮೮) ರ ಮೈಸೂರ ಲ್ಯಾಂಡ ರೆವೆನ್ಯೂಕೋಡದ ೧೪೬ ರಿಂದ ೧೫೦ ರ ವರೆಗೆ ಇರುವ ಕಲಮುಗಳಿಂದ ಅಧಿಕರಿಸಲ್ಪಟ್ಟ ಮುಂಜಾಗ್ರತೆಯ ಉಪಾಯಗಳನ್ನು ಡೆಪ್ಯೂಟಿ ಕಮಿಶನರನು ತೆಗೆದುಕೊಳ್ಳುವುದು ಕಾಯುದೇಶೀರ ಎನ್ನಿಸತಕ್ಕದ್ದು.

**ವಿವರಣೆ:** ಈ ಕಲಮಿನ ಉದ್ದೇಶಗಳಿಗಾಗಿ—

(i) "ಮನ್ನಣೆ ಪಡೆದ ಸಂಘ"ವೆಂದರೆ, ನಿಯಮಗಳಿಂದ ಈ ಕಲಮಿನ ಉದ್ದೇಶಗಳಿಗಾಗಿ ಮನ್ನಣೆ ಪಡೆದ ಸಂಘಗಳೆಂದು ಸಾರಲಾದಂತಹ ಸಂಘಗಳ ವರ್ಗದಲ್ಲಿಯ ಸಂಘ ಎಂದು ಅರ್ಥವಾಗತಕ್ಕದ್ದು.

(ii) "ಬೆಳೆಗಾಗಿ ಆರ್ಥಿಕ ಸಹಾಯ" ಎಂದರೆ, ಗಳೇ ಹೊಡೆಯುವ ಹಂಗಾಮಿನಲ್ಲಿ ಇಲ್ಲವೆ ನಂತರ, ನೇಗಿಲು ಹೊಡೆಯುವುದಕ್ಕೆ, ಕಳೆ ತೆಗೆಯುವುದಕ್ಕೆ, ಒಕ್ಕುವುದಕ್ಕೆ, ಬೀಜಗಳನ್ನು ಕೊಳ್ಳುವುದಕ್ಕೆ, ಗೊಬ್ಬರಕ್ಕೆ ಇಲ್ಲವೆ ರಜಿಸ್ಟ್ರಾರನಿಂದ ಗೊತ್ತುಮಾಡಬಹುದಾದಂತಹ ಬೇರೆ ಉದ್ದೇಶಗಳಿಗಾಗಿ ಬೆಳೆಯನ್ನು ಸಂವರ್ಧಿಸುವುದಕ್ಕಾಗಿ ಮುಂಗಡವಾಗಿ ಕೊಟ್ಟ ಸಾಲಗಳು ಎಂದು ಅರ್ಥವಾಗತಕ್ಕದ್ದು. ಈ ಸಾಲಗಳು ಯಾವ ಬೆಳೆಗಳ ಸಲುವಾಗಿ ಮುಂಗಡ ಕೊಡಲ್ಪಟ್ಟವೊ ಅವುಗಳನ್ನು ಒಕ್ಕುವ ಸಮಯಕ್ಕೆ ಮರಳಿ ಕೊಡಲ್ಪಡಲು ಯೋಗ್ಯವಾಗಿರತಕ್ಕದ್ದು.

(iii) "ಹಂಗಾಮಿ ಆರ್ಥಿಕ ಸಹಾಯ" ಎಂದರೆ, ರಜಿಸ್ಟ್ರಾರನಿಂದ ಅಧಿಕೃತ ಗ್ಯಾಜೆಟಿದಲ್ಲಿ ಪ್ರಕಟನೆಯಿಂದ ನಿರ್ದಿಷ್ಟಪಡಿಸಬಹುದಾದಂತಹ ಉದ್ದೇಶಗಳಿಗಾಗಿ ಮುಂಗಡವಾಗಿ ಕೊಟ್ಟ ಸಾಲಗಳು ಎಂದು ಅರ್ಥವಾಗತಕ್ಕದ್ದು. ಇಂತಹ ಸಾಲಗಳು ಆ ಮುಂದಿನ ಮಾರ್ಚ ೩೧ ಕ್ಕೆ ಇಲ್ಲವೆ ಮೊದಲು ಇಲ್ಲವೆ ರಜಿಸ್ಟ್ರಾರನಿಂದ ಅಂತಹ ಪ್ರಕಟನೆಯಿಂದ ನಿರ್ದಿಷ್ಟಪಡಿಸಬಹುದಾದಂತಹ ಬೇರೆ ತಾರೀಖಿನ ಒಳಗೆ ಮರಳಿ ಕೊಡಲ್ಪಡಲು ಯೋಗ್ಯವಾಗಿರತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘಗಳಿಗೆ ಹಣವು ಬಾಕಿಯಾಗಿರುವಾಗ ಅವುಗಳ ವಸೂಲಿ ಹೇಗೆ ಮಾಡಬೇಕು ಎಂಬ ಬಗ್ಗೆ ಈ ಕಲಮು ಇದೆ.

ಪ್ರಕರಣ ೯ ರಲ್ಲಿ ಏನೇ ಹೇಳಲಾಗಿದ್ದರೂ ಈ ಕಲಮಿನ ಅಧಿಕಾರಕ್ಕೆ ವ್ಯತ್ಯಯ ಬರುವುದಿಲ್ಲವೆಂಬುದನ್ನು ಹೇಳಿದೆ. ಪ್ರಕರಣ ೯ ತಂಟೆಗಳ ನಿರ್ಣಯದ ವಿಷಯದ ಬಗ್ಗೆ ಇದೆ. ಅಲ್ಲದೆ ಆ ಕಾಲದಲ್ಲಿ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯಲ್ಲಿ ಏನೇ ಹೇಳಲಾದ್ದರೂ ಆ ಯಾವ ಮಾತುಗಳು ಈ ಕಲಮಿನ ಅಧಿಕಾರಕ್ಕೆ ವ್ಯತ್ಯಯ ತರುವುದಿಲ್ಲವೆಂದೂ ಹೇಳಲಾಗಿದೆ.

ಮನ್ನಣೆ ಪಡೆದ ಸಂಘವು ತನ್ನ ಸದಸ್ಯರಿಗೆ ಸಾಲ ಕೊಟ್ಟಿರಬೇಕು. ಆ ಸಾಲವು ಬೆಳೆಗಾಗಿ ಸಹಾಯವೆಂದು ಇಲ್ಲವೆ ಹಂಗಾಮಿ ಧನ ಸಹಾಯವೆಂದು ಕೊಡಲ್ಪಟ್ಟಿರಬೇಕು. ಆ ಸಾಲದ ವಸೂಲಿ ಮಾಡುವ ಪ್ರಸಂಗ ಬಂದಿರಬೇಕು. ಆ ಮನ್ನಣೆ ಪಡೆದ ಸಂಘವು ರಜಿಸ್ಟ್ರಾರನಿಗೆ ಅರ್ಜಿ ಮಾಡಿರಬೇಕು. ಸಾಲವು ಎಂತಹದು, ಬಾಕಿ ಎಷ್ಟು ಉಳಿದಿದೆ ಎಂಬ ಬಗ್ಗೆ ರಜಿಸ್ಟ್ರಾರನಿಗೆ ಲೆಕ್ಕದ ವಿವರ ಹೇಳಿಕೆ ಕೊಡಲ್ಪಟ್ಟಿರಬೇಕು. ಆಗ ರಜಿಸ್ಟ್ರಾರನು ವಿಚಾರಣೆ ಮಾಡಬೇಕು. ಹೇಗೆ ವಿಚಾರಣೆ ನಡೆಸಬೇಕೆಂಬ ಬಗ್ಗೆ ನಿಯಮಗಳು ಹೇಳುವುವು. ಆ ವಿಚಾರಣೆಯ ನಂತರ ಬಾಕಿಯಾಗಿ ಉಳಿದಿದೆಯೆಂದು ಹೇಳಿಕೆಯ ವಿವರಗಳಲ್ಲಿ ತೋರಿಸಿದ ಬಾಕಿ ಹಣಕ್ಕಾಗಿ ಅದರ ವಸೂಲಿಗಾಗಿ ರಜಿಸ್ಟ್ರಾರನು ಒಂದು ಸರ್ಟಿಫಿಕೇಟನ್ನು ದಯಪಾಲಿಸಬಹುದು.

ಬಾಕಿಯಾಗಿ ಹಣವು ಎಷ್ಟು ಉಳಿದಿದೆ ಎಂಬ ಪ್ರಶ್ನೆಯನ್ನು ರಜಿಸ್ಟ್ರಾರನು ನಿರ್ಧರಿಸುವಾಗ ಆ ಬಗ್ಗೆ ನಿರ್ಣಯವು ಕೆಲವೊಂದು ಜಟಿಲವಾದ ವಸ್ತುಸ್ಥಿತಿ ಇಲ್ಲವೆ ಕಾಯಿದೆಯ ಪ್ರಶ್ನೆಗಳ ಮೇಲೆ ಅವಲಂಬಿಸಿದೆ ಎಂದು ಕಂಡು ಬಂದರೆ ರಜಿಸ್ಟ್ರಾರನು ಆ ಪ್ರಕರಣವನ್ನು ಕಲಮು ೭೧ ರ ಶರತುಗಳ ಅನುಸಾರವಾಗಿ ನಿಕಾಲೆ ಮಾಡಬೇಕು ಎಂದು ಹೇಳಲಾಗಿದೆ. ಕಲಮು ೭೧ ತಂಟೆಗಳ ನಿಕಾಲೆಯ ಬಗ್ಗೆ ಇದೆ ಅದನ್ನು ನೋಡಬೇಕು. ಅಂದರೆ ಈ ಬಾಕಿ ಹಣವು ಎಷ್ಟಿದೆಯೆಂಬ ಬಗ್ಗೆ ತಂಟೆ ಉಂಟಾಗಿದೆಯೆಂದು ತಿಳಿದು ಆ ಬಗ್ಗೆ ಕಲಮು ೭೧ ರಲ್ಲಿ ಹೇಳಿದ ಹಾಗೆ ನಿಕಾ

ಕೊಡಬೇಕು. ಆ ತಂಟೆಯು ಕಲಮು ೭೦ ನ್ವಯವಾಗಿ ರಜಿಸ್ಟ್ರಾರನ ಕಡೆಗೆ ಕಳಿಸಲಾದ ತಂಟೆಯಾಗಿರುವಂತೆ ನಿರ್ಣಯ ಕೊಡಬೇಕೆಂದು ಹೇಳಲಾಗಿದೆ. ಅಂದರೆ ಆ ಬಗ್ಗೆ ನಿರ್ಣಯವನ್ನು ರಜಿಸ್ಟ್ರಾರನು ಕೊಡಬೇಕು.

ಹೀಗೆ ವಿಚಾರಣೆ ನಡೆಸಿ, ಬಾಕಿ ಹಣ ಇಷ್ಟು ಎಂದು ನಿರ್ಧರಿಸಿಕೊಟ್ಟ ಸರ್ಟಿಫಿಕೇಟು ನಿರ್ಣಯಕ ಹಾಗೂ ಕೊನೆಯದು ಎಂದು ಹೇಳಲಾಗಿದೆ. ಅಂದರೆ ಆ ಬಗ್ಗೆ ಬೇರೆ ಅಪೀಲು ಮುಂತಾದ್ದು ಇಲ್ಲವೆಂದು ಸೂಚನೆ. ಮತ್ತು ಆ ಸರ್ಟಿಫಿಕೇಟದಲ್ಲಿ ಕಾಣಿಸಲಾದ ಲಾಕಿ ಹಣವು ಭೂಕಂದಾಯದ ಬಾಕಿಯಾಗಿರುವಂತೆ ವಸೂಲ ಮಾಡಲು ಯೋಗ್ಯವಾಗುವುದು. ಇಲ್ಲವೆ ಕಲಮು ೧೦೧ ರಲ್ಲಿ ಹೇಳದಂತೆ ಕ್ರಮ ಕೈಕೊಂಡು ವಸೂಲು ಮಾಡಲು ಯೋಗ್ಯವಾಗುವುದು. ಒಂದು ವೇಳೆ ಸರ್ಟಿಫಿಕೇಟದಲ್ಲಿ ಕಾಣಿಸಿಡ ಬಾಕಿ ಹಣವು ತಪ್ಪು ಆಗಿದೆಯೆಂದು ನಂತರ ಕಂಡು ಬಂದರೆ,ರಜಿಸ್ಟ್ರಾರನು ಸ್ವತಃ ಪ್ರೇರಣೆಯಿಂದ ತಿದ್ದಬಹುದು. ಇಲ್ಲವೆ ಸಂಬಂಧಪಟ್ಟ ಸಂಘವು ಸರ್ಟಿಫಿಕೇಟದಿಂದ ಬಾಧಿತನಾದ ಸದಸ್ಯನು ಅರ್ಜಿಮಾಡಿದರೆ ಅದನ್ನು ತಿದ್ದಬಹುದು. ಹೀಗೆ ಕ್ರಮ ಕೈಕೊಂಡು ತಿದ್ದಲ್ಪಡದಿದ್ದರೆ, ಸರ್ಟಿಫಿಕೇಟದಲ್ಲಿ ಕಾಣಿಸಿದ ಬಾಕಿ ರಕಮು ನಿಶ್ಚಿತ ಹಾಗೂ ನಿರ್ಣಯವಾಚಕದ ರಕಮು ಎಂದು ತಿಳಿಯತಕ್ಕದ್ದು. ವಸೂಲು ಅದನ್ನು ಮಾಡಲು ಕ್ರಮ ಕೈಕೊಳ್ಳತಕ್ಕದ್ದು.

ಸಂಘಕ್ಕೆ ಸಲ್ಲಬೇಕಾದ್ದ ಬಾಕಿ ಹಣ ಅದರ ಮೇಲಿನ ಬಡ್ಡಿ, ಬಾಕಿ ವಸೂಲಿಗಾಗಿ ಆದ ವೆಚ್ಚ ಇವುಗಳನ್ನು ಕೊಡಬೇಕು. ಇಲ್ಲವೆ ಈ ಎಲ್ಲ ಹಣದ ಬಗ್ಗೆ ರಜಿಸ್ಟ್ರಾರನಿಗೆ ಸಮಾಧಾನವಾಗುವಂತಹ ಭದ್ರತೆಯ ಜಾಮೀನು ಕೊಡಬೇಕು. ಈ ಬಗ್ಗೆ ಏನೂ ಮಾಡದಿದ್ದರೆ ಡೆಪ್ಯೂಟಿ ಕಮಿಶನರನು ಮುಂಜಾಗ್ರತೆಯ ಕ್ರಮಗಳನ್ನು ಕೈಕೊಳ್ಳಬಹುದು. ಹೀಗೆ ಕ್ರಮಕೈಕೊಳ್ಳಲು ಅವನಿಗೆ ಮೈಸೂರ ಲ್ಯಾಂಡ ರೆವೆನ್ಯೂ ಕೋಡದ ೧೪೬ ರಿಂದ ೧೫೦ ರ ವರೆಗಿನ ಕಲಮುಗಳು ಅಧಿಕಾರ ಕೊಡುವುವು. ಈ ಅಧಿಕಾರದನ್ವಯವಾಗಿ ಮಾಡಿದ ಡೆ. ಕಮಿಶನರನ ಕಾರ್ಯವು ಕಾಯಿದೇಶೀರ ಕಾರ್ಯವೆಂದಾಗುವುದು.

ಈ ಕಲಮಿನಲ್ಲಿ ಕೆಲವೊಂದು ಪದ ಪ್ರಯೋಗ ಮಾಡಲಾಗಿದೆ. ಆ ಬಗ್ಗೆ ವಿವರಣೆಯನ್ನು ಕೊಡಲಾಗಿದೆ. "ಮನ್ನಣೆ ಪಡೆದ ಸಂಘ"— ನಿಯಮಗಳು ಈ ಕಲಮಿನ ಉದ್ದೇಶಕ್ಕಾಗಿ ಮನ್ನಣೆ ಪಡೆದ ಸಂಘಗಳು ಯಾವು ಎಂಬುದನ್ನು ಹೇಳುವುವು. ಅಂತಹ ವರ್ಗದ ಸಂಘಗಳಲ್ಲಿಯ ಸಂಘವೆಂದರೆ ಮನ್ನಣೆ ಪಡೆದ ಸಂಘ. "ಬೆಳೆಗಾಗಿ ಆರ್ಥಿಕ ಸಹಾಯ"— ಬೆಳೆಯನ್ನು ತಯಾರ ಮಾಡುವುದಕ್ಕೆ ಬೇಕಾಗುವ ಒಕ್ಕಲುತನದ ಕಾರ್ಯ ಮಾಡಲು ಕೊಟ್ಟ ಆರ್ಥಿಕ ಸಹಾಯ. ಬೀಜ ಕೊಳ್ಳುವುದು. ಗೊಬ್ಬರ ಕೊಳ್ಳುವುದು ಮೊದಲುಗೊಂಡು ನೇಗಲು ಹೊಡೆವುದು ಕಳೆತೆಗೆಯಲು ಒಕ್ಕುವುದು, ಮುಂತಾದ ಎಲ್ಲ ಕಾರ್ಯಗಳಿಗಾಗಿ ಸಹಾಯ.

" ಹಂಗಾಮಿ ಆರ್ಥಿಕ ಸಹಾಯ " ಇದು ಯಾವ ಉದ್ದೇಶಗಳಿಗಾಗಿ ಕೊಡಲಾಗುವುದು ಎಂಬ ಬಗ್ಗೆ ಅಧಿಕೃತ ಗ್ಯಾಜೆಟದಲ್ಲಿ ಪ್ರಕಟನೆಯು ಹೊರಡಿಸಲ್ಪಡುವುದು. ಈ ಆರ್ಥಿಕ ಸಹಾಯದ ಲಕ್ಷಣವೆಂದರೆ ಅದರ ಹಣವು ಮುಂದಿನ ಮಾರ್ಚ ತಿಂಗಳ ೩೧ ರ ಒಳಗೆ ಮರಳಿ ಕೊಡಬೇಕು. ಅಥವಾ ಆ ಪ್ರಕಟನೆಯಲ್ಲಿ ಗೊತ್ತು ಮಾಡಿದ ತಾರೀಖಿನ ಒಳಗೆ ಕೊಡಲ್ಪಡಬೇಕು. ಹಂಗಾಮಿ, ಎಂದರೆ ತಾತ್ಪೂರ್ತಿಕ ಹಂಗಾಮದ ಕೆಲಸಕ್ಕಾಗಿ— ಬೇಗನೇ ಮರಳಿ ಕೊಡಬೇಕಾದ ಸಹಾಯ.

**೧೦೧ ಹುಕುಮು ಮುಂತಾದವುಗಳ ಅಮಲ ಬಜಾವಣೆ.**

ಕಲಮು ೭೯ ರ ಉಪಕಲಮು (೨) ರನ್ವಯವಾಗಿ ಇಲ್ಲವೆ ಕಲಮು ೯೯ ರನ್ವಯವಾಗಿ ರಜಿಸ್ಟ್ರಾರನಿಂದ ಮಾಡಲ್ಪಟ್ಟ ಪ್ರತಿಯೊಂದು ಹುಕುಮು, ಕಲಮು ೭೧ ರನ್ವಯವಾಗಿ ಮಾಡಲ್ಪಟ್ಟ ಪ್ರತಿಯೊಂದು ನಿರ್ಣಯ ಇಲ್ಲವೆ ಅವಾರ್ಡು, ಕಲಮು ೭೪ ರನ್ವಯವಾಗಿ ಲಿಕ್ವಿಡೇಟರನಿಂದ ಮಾಡಲ್ಪಟ್ಟ ಪ್ರತಿಯೊಂದು ಹುಕುಮು ಮತ್ತು ಕಲಮು ೧೦೫ ಮತ್ತು ೧೦೭ ರನ್ವಯವಾಗಿ ಟ್ರಿಬ್ಯೂನಲದಿಂದ ಮಾಡಲ್ಪಟ್ಟ ಪ್ರತಿಯೊಂದು ಹುಕುಮು ಮತ್ತು ಕಲಮು ೧೦೬ ಇಲ್ಲವೆ ೧೦೮ ರನ್ವಯವಾಗಿ ಮಾಡಲ್ಪಟ್ಟ ಪ್ರತಿಯೊಂದು ಹುಕುಮು, ಈ ಕಾಯಿದೆಯ ಬೇರೆ ಯಾವುದೇ ಶರತುಗಳಂಕಿತವಾಗಿ ಯಾವ ವ್ಯಕ್ತಿಯು ಇಲ್ಲವೆ ಸಹಕಾರಿ ಸಂಘದ ವಿರುದ್ಧ, ಆ ಹುಕುಮು, ನಿರ್ಣಯ, ಅವಾರ್ಡು, ಪಡೆಯಲಾಗಿದೆಯೋ ಇಲ್ಲವೆ ಮಾಡಲಾಗಿದೆಯೋ ಆ ವ್ಯಕ್ತಿಗೆ ಇಲ್ಲವೆ ಸಹಕಾರಿ ಸಂಘಕ್ಕೆ ಭಾಂಧಾಯಿಸಕ್ಕದ್ದು ಮತ್ತು ಅದು ಕಾರ್ಯಕಾರಿ ಮಾಡಲ್ಪಡದಿದ್ದರೆ—

(ಅ) ರಜಿಸ್ಟ್ರಾರನಿಂದ ಇಲ್ಲವೆ ಈ ಸಂಬಂಧದಲ್ಲಿ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯಿಂದ ಸಹಿ ಮಾಡಲ್ಪಟ್ಟ ಸರ್ಟಿಫಿಕೇಟು ದಿವಾಣಿ ನ್ಯಾಯಾಲಯದ ಡಿಕ್ರಿ ಎಂದು ಗಣಿಸಲ್ಪಡತಕ್ಕದ್ದು ಮತ್ತು ಅಂತಹ ನ್ಯಾಯಾಲಯದ ಡಿಕ್ರಿ ಎಂಬ ಹಾಗೆ ಅಮಲಬಜಾವಣಿ ಮಾಡಲ್ಪಡತಕ್ಕದ್ದು; ಇಲ್ಲವೆ.

(ಬ) ಭೂಕಂದಾಯದ ಬಾಕಿ ವಸೂಲಿಗಾಗಿ ಆ ಕಾಲದಲ್ಲಿ ಜಾರಿಯಲ್ಲಿರುವ ಕಾಯಿದೆಯ ಅನುಸಾರವಾಗಿ ಹಾಗೂ ನಿಯಮಗಳ ಅನ್ವಯವಾಗಿ ಅಮಲಬಜಾವಣಿ ಮಾಡಲ್ಪಡತಕ್ಕದ್ದು.

ಆದರೆ, ಯಾವುದೇ ಹಣದ ವಸೂಲಿಯು ಇಂತಹ ರೀತಿಯಲ್ಲಿ ನಡೆಯಬೇಕಾದಾಗ, ಅರ್ಜಿಯು.

(i) ಡೆಪ್ಯುಟಿ ಕಮಿಶನರನಿಗೆ ಮಾಡಲ್ಪಡತಕ್ಕದ್ದು ಮತ್ತು ಅದರ ಜತೆಗೆ ರಜಿಸ್ಟ್ರಾರನಿಂದ ಇಲ್ಲವೆ ಈ ಸಂಬಂಧದಲ್ಲಿ ಅವನಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯಿಂದ ಸಹಿ ಮಾಡಲ್ಪಟ್ಟ ಸರ್ಟಿಫಿಕೇಟು ಇಡಲ್ಪಟ್ಟಿರಬೇಕು;

(ii) ಆ ಹುಕುಮಿನಲ್ಲಿ, ನಿರ್ಣಯದಲ್ಲಿ ಇಲ್ಲವೆ ಅವಾರ್ಡದಲ್ಲಿ, ಗೊತ್ತು ಮಾಡಲ್ಪಟ್ಟ ತಾರೀಖಿನಿಂದ ಮತ್ತು ಅಂತಹ ತಾರೀಖು ಗೊತ್ತುಮಾಡಲ್ಪಟ್ಟಿರದಿದ್ದರೆ,

ಸಂದರ್ಭಾನುಸಾರವಾಗಿ ಆ ಹುಕುಮಿನ, ನಿರ್ಣಯದ ಇಲ್ಲವೆ ಅವಾರ್ಡದ ತಾರೀಖಿನಿಂದ ಹನ್ನೆರಡು ವರುಷಗಳ ಒಳಗೆ ಮಾಡಲ್ಪಡತಕ್ಕದ್ದು; ಇಲ್ಲವೆ

(ಕ) ಯಾವ ವ್ಯಕ್ತಿಯ ಇಲ್ಲವೆ ಸಹಕಾರಿ ಸಂಘದ ವಿರುದ್ಧ ಆ ಹುಕುಮು ನಿರ್ಣಯ ಇಲ್ಲವೆ ಅವಾರ್ಡ ಪಡೆದುಕೊಳ್ಳಲಾಗಿದೆಯೋ ಇಲ್ಲವೆ ಮಾಡಲಾಗಿದೆಯೋ ಆ ವ್ಯಕ್ತಿಯ ಇಲ್ಲವೆ ಸಂಘದ ಯಾವುದೇ ಆಸ್ತಿಯನ್ನು ಜಪ್ತಿ ಮಾಡಿಸಿ ಮಾರಾಟ ಮಾಡಿಸಿ ಇಲ್ಲವೆ ಜಪ್ತಿ ಇಲ್ಲದೆ ಮಾರಾಟ ಮಾಡಿಸಿ, ರಜಿಸ್ಟ್ರಾರನಿಂದ ಇಲ್ಲವೆ ಅವನ ಕೈಕೆಳಗಿನವನಾಗಿದ್ದು ರಜಿಸ್ಟ್ರಾರನಿಂದ ಈ ಸಂಬಂಧವಾಗಿ ಅಧಿಕರಿಸಲ್ಪಟ್ಟ ಬೇರೆ ಯಾವುದೇ ವ್ಯಕ್ತಿಯಿಂದ ಅಮಲಬಜಾವಣಿ ಮಾಡಲ್ಪಡತಕ್ಕದ್ದು.

**ವಿವೇಚನೆ**

ಹುಕುಮು, ಅವಾರ್ಡ ಮುಂತಾದವುಗಳನ್ನು ಹೇಗೆ ಅಮಲ ಬಜಾವಣೆ ಮಾಡಬೇಕು ಎಂಬ ಬಗ್ಗೆ ಈ ಕಲಮಿನಲ್ಲಿ ಹೇಳಲಾಗಿದೆ. ಹುಕುಮು, ನಿರ್ಣಯ, ಅವಾರ್ಡ ಎಂದರೆ ಯಾವು?

ಕಲಮು ೭೯ ರ ಉಪಕಲಮು (೨) ರನ್ವಯವಾಗಿ, ಇಲ್ಲವೆ ಕಲಮು ೯೯ ರನ್ವಯವಾಗಿ ರಜಿಸ್ಟ್ರಾರನು ಮಾಡಿದ ಹುಕುಮು, ಕಲಮು ೭೧ ರನ್ವಯವಾಗಿ ಮಾಡಲಾದ ನಿರ್ಣಯ, ಕಲಮು ೭೪ ರನ್ವಯವಾಗಿ ಲಿಕ್ವಿಡೇಟರನು ಮಾಡಿದ ಹುಕುಮು ಇಲ್ಲವೆ ಅವಾರ್ಡು. ಟ್ರಿಬ್ಯೂನಲದವರು ಕಲಮು ೧೦೫ ಹಾಗೂ ೧೦೭ ರನ್ವಯವಾಗಿ ಮಾಡಿದ ಹುಕುಮು. ಕಲಮು ೧೦೬ ಇಲ್ಲವೆ ೧೧೮ ರನ್ವಯವಾಗಿ ಮಾಡಿದ ಹುಕುಮು. ಇವುಗಳನ್ನು ಅಮಲಬಜಾವಣಿ ಮಾಡುವುದರ ಬಗ್ಗೆ ಹೇಳಲಾಗಿದೆ.

ಕಲಮು ೭೯ ರ ಉಪಕಲಮು (೨) ಸರಚಾರ್ಜದ ಬಗ್ಗೆ ಇದೆ. ಕಲು ೯೯ ಅಧಿಕಾರ ಭಾರವನ್ನು ಕಾರ್ಯಕಾರಿ ಮಾಡುವುದರ ಬಗ್ಗೆ ಇದೆ. ಕಲಮು ೭೧ ತಂಟೆಗಳನ್ನು ನಿಕಾಲೆ ಮಾಡುವುದರ ಬಗ್ಗೆ ಇದೆ. ಕಲಮು ೧೦೫ ಹಾಗೂ ೧೦೭ ಇವು ಟ್ರಿಬ್ಯೂನಲದ ಮುಂದೆ ಬಂದ ಅಪೀಲು ಹಾಗೂ ಪುನರ್ವಿಮರ್ಶೆಯ ಬಗ್ಗೆ ಇವೆ. ಕಲಮು ೧೦೬ ಬೇರೆ ಅಧಿಕಾರಿಗಳ ಎದುರು ಬಂದ ಅಪೀಲುಗಳ ಬಗ್ಗೆ ಇದ್ದು ಕಲಮು ೧೧೮ ಇದು ರಾಜ್ಯ. ಸರಕಾರದ ಎದುರು ಬಂದ ಅಪೀಲಿನ ಬಗ್ಗೆ ಇದೆ. ಈ ಎಲ್ಲ ಕಲಮುಗಳ ಪ್ರಕಾರ ಮಾಡಲ್ಪಟ್ಟ ಹುಕುಮು, ನಿರ್ಣಯ, ಇಲ್ಲವೆ ಅವಾರ್ಡು ಇದರ ಅಮಲಬಜಾವಣಿ ಹೇಗೆ ಮಾಡಬೇಕು ಎಂಬುದನ್ನು ಇಲ್ಲಿ ಹೇಳಲಾಗಿದೆ.

ಈ ಕಲಮುಗಳನ್ವಯವಾಗಿ ಮಾಡಲಾದ ಹುಕುಮು ಮುಂತಾದುವು ಯಾವ ವ್ಯಕ್ತಿ ಇಲ್ಲವೆ ಸಂಘದ ವಿರುದ್ಧ ಮಾಡಲಾಗಿರುವುವೋ ಅವರಿಗೆ ಅದು ಬಾಂಧಾಯಿಸುವುದು. ಈ ಕಾಯಿದೆಯ ಇತರ ಶರತುಗಳ ಅಂಕಿತವಾಗಿ ಅವು ಬಾಂಧಾಯಿಸುವುವು.

ಆ ಹುಕುಮು, ಅವಾರ್ಡು ಇಲ್ಲವೆ ನಿರ್ಣಯ ಕಾರ್ಯಕಾರಿ ಮಾಡಲ್ಪಟ್ಟಿರ ದಿದ್ದರೆ, ಅಮಲಬಜಾವಣಿ ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿ ಯು ಒಂದು ಸರ್ಟಿಫಿಕೇಟ ಕೊಡುವನು. ಆ ಸರ್ಟಿಫಿಕೇಟು ದಿವಾಣಿ ನ್ಯಾಯಾ ಲಯದ ಡಿಕ್ರಿ ಇದ್ದಂತೆ. ಅದನ್ನು ದಿವಾಣಿ ನ್ಯಾಯಾಲಯದ ಡಿಕ್ರಿಯನ್ನು ಹೇಗೆ ಅಮಲಬಜಾವಣಿ ಮಾಡುವರೊ ಹಾಗೆ ಮಾಡಬೇಕು. ಅಂದರೆ, ಯಾವ ನ್ಯಾಯಾ ಲಯದ ಅಧಿಕಾರ ಕ್ಷೇತ್ರದಲ್ಲಿ ಆ ಆಸ್ತಿ ಇರುವುದೋ ಆ ನ್ಯಾಯಾಲಯವು ಅಮಲ ಬಜಾವಣಿ ಮಾಡುವುದಕ್ಕೆ ಆ ನ್ಯಾಯಾಲಯಕ್ಕೆ ಈ ಸರ್ಟಿಫಿಕೇಟನ್ನು ಅಮಲಬಜಾ ವಣೆಗಾಗಿ ಕಳಿಸಬೇಕು. ಆ ಬಗ್ಗೆ ಸಿವಿಲ ಪ್ರೊಸಿಜರ ಕೋಡಿನ ಶರತುಗಳ ಅನ್ವ ಯಿಸುವುವು.

ದಿವಾಣಿ ನ್ಯಾಯಾಲಯಕ್ಕೆ ಅಮಲಬಜಾವಣೆಗಾಗಿ ಕಳಿಸುವುದು ಬೇಕಿರದಿ ದ್ದರೆ ಭೂಕಂದಾಯ ಬಾಕಿ ವಸೂಲ ಮಾಡುವ ಕ್ರಮದಲ್ಲಿ ಸಂಬಂಧ ಪಟ್ಟ ಕಾಯಿ ದೆ ಹಾಗೂ ನಿಯಮಗಳ ಅನ್ವಯವಾಗಿ ಅಮಲಬಜಾವಣಿ ಮಾಡಲ್ಪಡುವಂತೆ ಕಳಿ ಸಬೇಕು. ಈ ಕ್ರಮ ಕೈಕೊಂಡರೆ ಅದು ಡೆ. ಕಮಿಶನರನ ಕಡೆಗೆ ಕಳಿಸಲ್ಪಡಬೇ ಕಾಗುವುದು. ಡೆ. ಕಮಿಶನರನ ಕಡೆಗೆ ಅರ್ಜಿ ಮಾಡಬೇಕಾಗುವುದು ಅರ್ಜಿಯ ಜತೆಗೆ ಆ ಸರ್ಟಿಫಿಕೇಟು ಇಡಬೇಕಾಗುವುದು. ಮತ್ತು ಅರ್ಜಿಯನ್ನು ೧೨ ವರುಷಗಳ ಒಳಗೆ ಮಾಡಬೇಕು. ಹನ್ನೆರಡು ವರುಷ ಎಂದಿನಿಂದ? ಹುಕುಮಿನಲ್ಲಿ, ನಿರ್ಣಯ ದಲ್ಲಿ ಇಲ್ಲವೆ ಅವಾರ್ಡದಲ್ಲಿ ತಾರೀಖು ನಿಶ್ಚಿತ ಮಾಡಿದ್ದರೆ ಆ ತಾರೀಖಿನಿಂದ ೧೨ ವರುಷ. ಇಲ್ಲದಿದ್ದರೆ, ಆ ಹುಕುಮಿನ, ನಿರ್ಣಯದ, ಇಲ್ಲವೆ ಅವಾರ್ಡದ ತಾರೀಖಿ ನಿಂದ ೧೨ ವರುಷದಲ್ಲಿ ಅರ್ಜಿ ಮಾಡಲ್ಪಡಬೇಕು.

ದಿವಾಣಿ ನ್ಯಾಯಾಲಯದ ನೆರವು ಇಲ್ಲವೆ ಭೂಕಂದಾಯ ವಸೂಲಿ ವಿಧಾನ ವನ್ನು ಅನುಸರಿಸದಿದ್ದರೆ, ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿ ಯು ಯಾವ ವ್ಯಕ್ತಿಯ ಇಲ್ಲವೆ ಸಂಘದ ವಿರುದ್ಧ ಹುಕುಮ ಮುಂತಾದ್ದು ಆಗಿವೆಯೊ ಅವರ ಆಸ್ತಿಯನ್ನು ಜಪ್ತ ಮಾಡಿಸಿ ಮಾರಾಟ ಮಾಡಿಸಿ ಅಮಲಬಜಾವಣಿ ಮಾಡತಕ್ಕದ್ದು; ಜಪ್ತಿ ಮಾಡದೆಯೂ ಮಾರಾಟ ಮಾಡಿಸಲು ಬರುವುದು. ಹಾಗೆ ಮಾಡಿ ಅಮಲಬಜಾವಣಿ ಮಾಡಬಹುದು.

ಮೂರು ಬಗೆಯಾಗಿ ಅಮಲಬಜಾವಣಿ ಮಾಡಲಿಕ್ಕೆ ಬರುವುವೆಂದ ಹಾಗಾ ಯಿತು. ಸಿವಿಲ ಪ್ರೊಸೀಜರ ಕೋಡದ ಪ್ರಕಾರ ಡೆಪ್ಯೂಟಿಕಮಿಶನರನಿಂದ, ಸಹಕಾರಿ ಸಂಘಗಳ ಕಾಯಿದೆಯಿಂದ ರಜಿಸ್ಟ್ರಾರನಿಂದ ಅಮಲಬಜಾವಣಿ ಮಾಡಲು ಬರುವು ದೆಂದು ಈ ಕಲಮಿನಿಂದ ಸ್ಪಷ್ಟವಾಗುವುದು. ಯಾವುದಾದರೊಂದು ವಿಧಾನವನ್ನು ಅನುಸರಿಸಬೇಕೇ ಹೊರತು ಏಕಕಾಲಕ್ಕೆ ಮೂರೂ ವಿಧಾನಗಳನ್ನು ಅನುಸರಿಸ ಲಿಕ್ಕೆ ಬಾರದು.

**೧೦೨ ಕೆಲವು ಉದ್ದೇಶಗಳಿಗಾಗಿ ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯು ದಿವಾಣಿ ನ್ಯಾಯಾಲಯುವಾಗಬೇಕು.**

ಯಾವುದೇ ಆಸ್ತಿಯ ಜಪ್ತಿ ಹಾಗೂ ಮಾರಾಟ ಇಲ್ಲವೆ ಜಪ್ತಿ ಇಲ್ಲದೆ ಮಾರಾಟ ಮಾಡಿಸಿ, ಯಾವುದೇ ರಕಮಿನ ವಸೂಲಿಯನ್ನು ಮಾಡಲು ಈ ಕಾಯಿದೆಯನ್ವಯವಾಗಿ ಅಧಿಕಾರ ನಿರ್ವಹಿಸುವಾಗ ಇಲ್ಲವೆ ಇಂತಹ ವಸೂಲಿಯ ಸಲುವಾಗಿ ಅವನಿಗೆ ಮಾಡಿದ ಅರ್ಜಿಯ ಮೇಲೆ ಹುಕುಮು ಮಾಡುವಾಗ ಇಲ್ಲವೆ ಇಂತಹ ವಸೂಲಿಗಾಗಿ ಸಹಾಯಕ್ರಮ ತೆಗೆದುಕೊಳ್ಳುವಾಗ ರಜಿಸ್ಟ್ರಾರನು ಇಲ್ಲವೆ ಈ ಸಂಬಂಧದಲ್ಲಿ ಅವನಿಂದ ಅಧಿಕರಿಸಲ್ಪಟ್ಟ ಯಾವುದೇ ವ್ಯಕ್ತಿಯು ೧೯೦೮ ( ಕೇಂದ್ರಕಾಯಿದೆ ನಂ ೯-೧೯೦೮ ) ರ ಭಾರತದ ಕಾಲಮಿತಿ ಕಾಯಿದೆ ( ಇಂಡಿಯನ್ ಲಿಮಿಟೇಶನ್ ಆ್ಯಕ್ಟದ ಮೊದಲನೆಯ ಕೋಷ್ಟಕದ ನಿಬಂಧನೆ ೧೮೨ ರ ಉದ್ದೇಶಗಳಿಗಾಗಿ ದಿವಾಣಿ ನ್ಯಾಯಾಲಯುವಾಗಿರುವನೆಂದು ಗಣಿಸಲ್ಪಡತಕ್ಕದ್ದು

**ವಿವೇಚನೆ**

ಹಣದ ವಸೂಲಿಯು ಕಾರ್ಯ ಇರಬೇಕು. ಅದನ್ನು ಯಾವುದೇ ಆಸ್ತಿಯ ಜಪ್ತಿ ಹಾಗೂ ಮಾರಾಟದಿಂದ ಇಲ್ಲವೆ ಜಪ್ತಿ ಇಲ್ಲದ ಮಾರಾಟದಿಂದ ನಡೆಸುವಂತಿರಬೇಕು. ಇಲ್ಲವೆ ವಸೂಲಿಯ ಸಲುವಾಗಿ ಮಾಡಿದ ಅರ್ಜಿಯ ಮೇಲೆ ಹುಕುಮು ಮಾಡುವಂತಿರಬೇಕು. ಇಲ್ಲವೆ ಇಂತಹ ವಸೂಲಿಗಾಗಿ ಯಾವುದೇ ಸಹಾಯಕ್ರಮ ತೆಗೆದುಕೊಳ್ಳುವಂತಿರಬೇಕು. ಈ ಪ್ರಸಂಗಗಳು ಇರುವಾಗ ಭಾರತದ ಕಾಲಮಿತಿ ಕಾಯಿದೆಯ ನಿಬಂಧನೆ ೧೮೨ ರ ಉದ್ದೇಶಗಳಿಗಾಗಿ ರಜಿಸ್ಟ್ರಾರನು ಇಲ್ಲವೆ ಅವನಿಂದ ಅಧಿಕರಿಸಲ್ಪಟ್ಟ ವ್ಯಕ್ತಿಯು ದಿವಾಣಿ ನ್ಯಾಯಾಲಯುವಾಗಿದ್ದಾನೆಂದು ಗಣಿಸಬೇಕು.

ನಿಬಂಧನೆ ೧೮೨ ರಲ್ಲಿ ಏನು ಹೇಳಿದೆ: " ನಿಭಂಧನೆ ೧೮೩ ರಲ್ಲಿ ಇಲ್ಲವೆ ಸಿವಿಲ ಪ್ರೊಸೀಜರ ಕೋಡದ ಕಲಮು ೪೮ ರಲ್ಲಿ ಅನುಕೂಲಮಾಡಿ ಕೊಡದೆ ಇರುವ ಯಾವುದೇ ದಿವಾಣಿನ್ಯಾಯಾಲಯುದ ಡಿಕ್ರಿಯ ಇಲ್ಲವೆ ಹುಕುಮಿನ ಅಮಲಬಜಾವಣೆಗಾಗಿ"

ಅದಕ್ಕೆ ಕಾಲಮಿತಿ ಎಷ್ಟು, ಮತ್ತು ಎಂದಿನಿಂದ ಎಂದು ಹೇಳಿದೆ. . ಸಿವಿಲ ಪ್ರೊಸೀಜರ ಕೋಡದ ಕಲಮು ೪೮ ರಲ್ಲಿ ಕೆಲವು ಸಂದರ್ಭಗಳಲ್ಲಿ ಅಮಲಬಜಾವಣೆಗೆ ಆತಂಕ ಯಾವುದು ಎಂಬುದನ್ನು ಹೇಳಿದೆ.

೧೮೨ ನೆಯ ನಿಬಂಧನೆಗಾಗಿ ರಜಿಸ್ಟ್ರಾರನು ಇಲ್ಲವೆ ಅವರಿಂದ ಅಧಿಕರಿಸಲ್ಪಟ್ಟ ವ್ಯಕಿಯು ದಿವಾಣಿ ನ್ಯಾಯಾಲಯುವಿದ್ದಹಾಗೆ. ಯಾವ ಕಾರ್ಯದ ಸಲುವಾಗಿ ಎಂಬುದನ್ನು ಮೇಲೆ ಹೇಳಲಾಗಿದೆ.

## ೧೦೩. ಅವಾರ್ಡು ಇಲ್ಲವೆ ಹುಕುಮು ಆಗುವ ಮುಂಚೆ ಆಸ್ತಿಯ ಜಪ್ತಿ

ಈ ಕಾಯಿದೆಯ ಶರತುಗಳನ್ವಯವಾಗಿ ತನ್ನ ವಿರುದ್ಧ ಮಾಡಬಹುದಾದ ಯಾವುದೇ ಹುಕುಮು,ನಿರ್ಣಯ ಇಲ್ಲವೆ ಅವಾರ್ಡು ಕಾರ್ಯಕಾರಿ ಯಾಗುವುದನ್ನು ವಿಲಂಬಿಸಬೇಕೆಂದು ಇಲ್ಲವೆ ತಡೆಗಟ್ಟಬೇಕೆಂದು ಉದ್ದೇಶವಿಟ್ಟುಕೊಂಡಿರುವನೆಂದು ಅದಕ್ಕಾಗಿ

(ಅ) ಅವನು ಇಡಿ ಇಲ್ಲವೆ ಯಾವುದೇ ಭಾಗ ಆಸ್ತಿಯನ್ನು ವಿಲೇವಾಟ ಮಾಡುವವನಿದ್ದಾನೆಂದು, ಇಲ್ಲವೆ

(ಬ) ಸಂದರ್ಭಾನುಸಾರವಾಗಿ,ರಜಿಸ್ಟ್ರಾರನ,ಮಧ್ಯಸ್ಥಿಕೆಗಾರನ ಇಲ್ಲವೆ ಲಿಕ್ವಿಡೇಟರನ ಅಧಿಕಾರ ಕ್ಷೇತ್ರದಿಂದ ಇಡಿ ಇಲ್ಲವೆ ಯಾವುದೇ ಭಾಗ ಆಸ್ತಿಯನ್ನು ಸ್ಥಳಾಂತರ ಮಾಡುವವನಿದ್ದಾನೆಂದು,

ಅರ್ಜಿಯ ಮೂಲಕ, ವರದಿ, ವಿಚಾರಣೆ ಇಲ್ಲವೆ ಬೇರೆ ರೀತಿಯ ಮೂಲಕ ರಜಿಸ್ಟ್ರಾರನಿಗೆ ಸಮಾಧಾನವಾದರೆ ಅದಕ್ಕಾಗಿ ತಕ್ಕ ಭದ್ರತೆಯ ಜಾಮೀನು ಕೊಡಲ್ಪಟ್ಟ ಹೊರತು, ಅವನು ಅಂತಹ ಆಸ್ತಿಯು ಜಪ್ತಿ ಮಾಡಲ್ಪಡಬೇಕೆಂದು ನಿರ್ದೇಶಿಸಬಹುದು. ಮತ್ತು ಇಂತಹ ಜಪ್ತಿಯು ಸಮರ್ಥ ದಿವಾಣಿ ನ್ಯಾಯಾಲಯದಿಂದ ಮಾಡಲ್ಪಟ್ಟಿದ್ದರೆ ಯಾವ ಪರಿಣಾಮ ಆಗುತ್ತಿತ್ತೋ ಅದೇ ಪರಿಣಾಮವನ್ನು ಉಂಟುಮಾಡತಕ್ಕದ್ದು.

**ವಿವೇಚನೆ**

ಅಮಲಬಜಾವಣೆ ಕಾರ್ಯ ನಡೆಸುವುದು ಯಾವುದೊಂದು ಆಸ್ತಿಯ ಜಪ್ತಿ ಹಾಗೂ ಮಾರಾಟ ಮಾಡಿಸುವುದರಿಂದ ಆಗಬೇಕಾದುದು. ಅದನ್ನು ತಪ್ಪಿಸಲು ಇಲ್ಲವೆ ತಡೆಗಟ್ಟಲು, ಆಸ್ತಿಯ ವಿಲೇವಾಟ ಇಲ್ಲವೆ ಸ್ಥಳಾಂತರ ಮಾಡುವ ಸಂಭವ ಇರುತ್ತದೆ. ಹೀಗೆ ಮಾಡುವ ಉದ್ದೇಶವು ಇದೆಯೆಂದು ರಜಿಸ್ಟ್ರಾರನಿಗೆ ಸಮಾಧಾನವಾಗಬೇಕು. ರಜಿಸ್ಟ್ರಾರನ ಲಕ್ಷಕ್ಕೆ ಈ ಸಂಗತಿಗಳು ಬರಬೇಕಾದರೆ ಸಂಬಂಧಪಟ್ಟವರು ಅರ್ಜಿ ಮಾಡಬೇಕು, ಇಲ್ಲವೆ ಯಾವುದೇ ತರದ ವಿಚಾರಣೆ ಇಲ್ಲವೆ ಬೇರೆ ಕ್ರಮದಿಂದ ರಜಿಸ್ಟ್ರಾರನ ಲಕ್ಷಕ್ಕೆ ಬರಬೇಕು. ಅದರಿಂದ ವಸ್ತುಸ್ಥಿತಿಯ ಬಗ್ಗೆ ರಜಿಸ್ಟ್ರಾರನಿಗೆ ಸಮಾಧಾನವಾದರೆ ಅವರು ಆ ಆಸ್ತಿಯನ್ನು ಜಪ್ತಿ ಮಾಡಬೇಕೆಂದು ನಿರ್ದೇಶನ ಕೊಡಬಹುದು. ಹೀಗೆ ಅವನು ಕೊಟ್ಟ ನಿರ್ದೇಶನವು ದಿವಾಣಿ ನ್ಯಾಯಾಲಯದಿಂದ ಕೊಡಲ್ಪಟ್ಟ ನಿರ್ದೇಶನದ ಹಾಗೆ ಪರಿಣಾಮ ಉಂಟುಮಾಡತಕ್ಕದ್ದು.

ಆಸ್ತಿಯ ವಿಲೇವಾಟವು ಮಾಡಲ್ಪಡುತ್ತದೆ ಇಲ್ಲವೆ ರಜಿಸ್ಟ್ರಾರನ ಅಧಿಕಾರ ಕ್ಷೇತ್ರದ ಹೊರಗೆ ಸ್ಥಳಾಂತರವಾಗುತ್ತದೆ ಎಂಬುದರ ತಿಳುವಳಿಕೆ ಆಗಬೇಕು.

ನುತ್ತು ಈ ವಿಲೇವಾಟ ಹಾಗೂ ಸ್ಥಳಾಂತರವು ಅಮಲ ಬಜಾವಣೆಯನ್ನು ವಿಲಂಬ ಮಾಡುವ ಇಲ್ಲವೆ ತಡೆಗಟ್ಟುವ ಉದ್ದೇಶದಿಂದ ಆಗಿರಬೇಕು. ಅಂದಾಗ ಜಪ್ತಿಯ ಹುಕುಮು ಹೊರಡಿಸಲ್ಪಡುವುದು.

## ೧೦೪. ಸರಕಾರಕ್ಕೆ ಸಲ್ಲಬೇಕಾಗಿದ್ದ ರಕಮುಗಳ ವಸೂಲಿ

(೧) ಸಹಕಾರಿ ಸಂಘದಿಂದ ಇಲ್ಲವೆ ಸಹಕಾರಿ ಸಂಘದ ಅಧಿಕಾರಿ ಇಲ್ಲವೆ ಸದಸ್ಯ, ಇಲ್ಲವೆ ಹಿಂದಿನ ಸದಸ್ಯ, ಎಂದು ಸರಕಾರಕ್ಕೆ ಸಲ್ಲಬೇಕಾಗಿದ್ದ, ಈ ಕಾಯಿದೆಯ ಯಾವುದೇ ಶರತುಗಳನ್ವಯವಾಗಿ ಸರಕಾರಕ್ಕೆ ಕೊಡಬೇಕಾಗಿದ್ದ ಯಾವುದೇ ವೆಚ್ಚವನ್ನು ಒಳಗೊಂಡು, ಎಲ್ಲ ರಕಮುಗಳು ಭೂಕಂದಾಯದ ಬಾಕಿ ವಸೂಲಿಯಂತೆ ಈ ಸಂಬಂಧದಲ್ಲಿ ರಜಿಸ್ಟ್ರಾರನಿಂದ ಹೊರಡಿಸಲಾದ ಸರ್ಟಿಫಿಕೇಟದ ಮೂಲಕ ವಸೂಲು ಮಾಡಲ್ಪಡಬಹುದು.

(೨) ಉಪಕಲಮು (೧) ರನ್ವಯವಾಗಿ ಸರಕಾರಕ್ಕೆ ಸಹಕಾರಿ ಸಂಘದಿಂದ ಸಲ್ಲಬೇಕಾಗಿದ್ದ ಹಾಗೂ ವಸೂಲಿಯಾಗಬೇಕಾಗಿದ್ದ ರಕಮುಗಳು ಮೊದಲು ಸಂಘದ ಆಸ್ತಿಯಿಂದ ವಸೂಲಮಾಡತಕ್ಕದ್ದು; ಎರಡನೆಯದಾಗಿ ನಿಯಮಿತ ಹೊಣೆಗಾರಿಕೆ ಸಂಘವು ಇದ್ದ ಸಂದರ್ಭದಲ್ಲಿ ಸದಸ್ಯರಿಂದ, ಹಿಂದಿನ ಸದಸ್ಯರಿಂದ, ಇಲ್ಲವೆ ಮರಣಹೊಂದಿದ ಸದಸ್ಯನ ಆಸ್ತಿಯಿಂದ ಅವರವರ ಹೊಣೆಗಾರಿಕೆಯ ಮಿತಿಯ ಅಂಕಿತವಾಗಿ ವಸೂಲಮಾಡತಕ್ಕದ್ದು. ಮೂರನೆಯದಾಗಿ, ಇತರ ಸಂಘಗಳ ಸಂದರ್ಭದಲ್ಲಿ, ಸದಸ್ಯರಿಂದ ಹಿಂದಿನ ಸದಸ್ಯರಿಂದ ಇಲ್ಲವೆ ಮರಣಹೊಂದಿದ ಸದಸ್ಯರ ಆಸ್ತಿಯಿಂದ ವಸೂಲಮಾಡತಕ್ಕದ್ದು.

ಆದರೆ, ಹಿಂದಿನ ಸದಸ್ಯರ ಹಾಗೂ ಮರಣ ಹೊಂದಿದ ಸದಸ್ಯರ ಆಸ್ತಿಯ ಹೊಣೆಗಾರಿಕೆಯು ಎಲ್ಲ ಸಂದರ್ಭಗಳಲ್ಲಿ ಕಲಮು ೨೫ ರ ಶರತುಗಳ ಅಂಕಿತವಾಗಿರತಕ್ಕದ್ದು.

**ವಿವೇಚನೆ**

ಸಹಕಾರಿಸಂಘದಿಂದ, ಇಲ್ಲವೆ ಸಹಕಾರಿ ಸಂಘದ ಅಧಿಕಾರಿ, ಸದಸ್ಯ, ಹಿಂದಿನ ಸದಸ್ಯರಿಂದ ಸರಕಾರಕ್ಕೆ ರಕಮು ಬಾಕಿಯಾಗಿರಬೇಕು. ಈ ಬಾಕಿಯಾದ ರಕಮಿನಲ್ಲಿ ಸರಕಾರಕ್ಕೆ ಕಾಯಿದೆಯ ಶರತುಗಳ ಪ್ರಕಾರ ಕೊಡಬೇಕಾದ ವೆಚ್ಚವೂ ಒಳಗೊಂಡಿರುವುದು. ಈ ಬಾಕಿ ಹಣದ ಬಗ್ಗೆ ರಜಿಸ್ಟ್ರಾರನು ಒಂದು ಸರ್ಟಿಫಿಕೇಟು ಕೊಡಬೇಕು. ಆಗ ಆ ರಕಮುಗಳು ಭೂಕಂದಾಯದ ಬಾಕಿ ಹಣ ವಸೂಲಮಾಡಲ್ಪಡುವಂತೆ ಮಾಡಬಹುದು.

ಸಂಘದಿಂದ ಸರಕಾರಕ್ಕೆ ಸಲ್ಲಬೇಕಾಗಿದ್ದ ರಕಮುಗಳನ್ನು ಮೂರು ರೀತಿಯಲ್ಲಿ ವಸೂಲು ಮಾಡಬಹುದು. ಮೊದಲನೆಯದಾಗಿ, ಸಂಘದ ಆಸ್ತಿಯ ಮೇಲಿಂದ ವಸೂಲ ಮಾಡಬಹುದು; ಎರಡನೆಯದಾಗಿ, ಸಂಘವು ನಿಯಮಿತ ಹೊಣೆಗಾರಿಕೆ

ಯದು ಆಗಿದ್ದರೆ, ಸದಸ್ಯರಿಂದ, ಹಿಂದಿನ ಸದಸ್ಯರಿಂದ ಇಲ್ಲವೆ ಮರಣ ಹೊಂದಿದ ಸದಸ್ಯನ ಆಸ್ತಿಯಿಂದ ಅವರು ಹೊಣೆಗಾರರಾಗಿರುವಷ್ಟು ಮಿತಿಯ ಮಟ್ಟಿಗೆ ವಸೂಲ ಮಾಡಬಹುದು. ನಿಯಮಿತ ಹೊಣೆಗಾರಿಕೆಯ ಸಂಘವಾಗಿರುವುದರಿಂದ ಹೊಣೆಗಾರಿಕೆಯು ಶೇರು ಹಣಕ್ಕೆ ಇಲ್ಲವೆ ಅವರು ತಾವಾಗಿಯೆ ವಂತಿಗೆ ಕೊಡಲು ಒಪ್ಪಿದ ಹಣದ ಪರಿಮಿತಿಯ ಮಟ್ಟಿಗೆ ಮಾತ್ರ ಹೊಣೆಗಾರಿಕೆ ಇರುವುದು. ಹೀಗೆ ಹೊಣೆಗಾರಿಕೆಯ ಮಿತಿಯು ಎಷ್ಟು ಇರುವುದೋ ಅಷ್ಟರಮಟ್ಟಿಗೆ ಅವರಿಂದ ವಸೂಲ ಮಾಡಬಹುದು.

ಮೂರನೆಯದಾಗಿ, ಇನ್ನುಳಿದ ಸಂಘಗಳು ಇರುವ ಸಂದರ್ಭದಲ್ಲಿ ಅಂದರೆ ಅನಿಯಮಿತ ಹೊಣೆಗಾರಿಕೆಯ ಸಂಘಗಳು ಇರುವ ಸಂದರ್ಭದಲ್ಲಿ ಸದಸ್ಯರಿಂದ, ಹಿಂದಿನ ಸದಸ್ಯರಿಂದ ಇಲ್ಲವೆ ಮರಣ ಹೊಂದಿದ ಸದಸ್ಯರ ಆಸ್ತಿಯಿಂದ ವಸೂಲ ಮಾಡಬಹುದು.

ಸಂಘದ ಆಸ್ತಿಯು ಮೊದಲು ಹೊಣೆಗಾರವಾಗಿರುವುದು. ಆದರಿಂದ ರಕಮು ಭರತಿಯಾಗದಿದ್ದರೆ ಸದಸ್ಯರು ಹೊಣೆಗಾರರಾಗುವರು. ಅವರ ಹೊಣೆಗಾರಿಕೆ ಸಂಘವು ನಿಯಮಿತವೋ ಅನಿಯಮಿತವೊ ಎಂಬುದರ ಮೇಲೆ ಇದೆ. ಸದಸ್ಯರೆಂದರೆ, ಇಂದಿನ, ಹಿಂದಿನ ಸದಸ್ಯರು. ಹಾಗೂ ಮರಣ ಹೊಂದಿದ ಸದಸ್ಯರು. ಮರಣ ಹೊಂದಿದ ಸದಸ್ಯರ ಆಸ್ತಿಯು ಹೊಣೆಗಾರವಾಗುವುದು. ಇಂದಿನ, ಹಿಂದಿನ, ಸದಸ್ಯರು ವೈಯ್ಯಕ್ತಿಕವಾಗಿ ಹೊಣೆಗಾರರಾಗುವರು.

ಆದರೆ ಹಿಂದಿನ ಸದಸ್ಯರ ಹೊಣೆಗಾರಿಕೆ ಹಾಗೂ ಮರಣ ಹೊಂದಿದ ಸದಸ್ಯನ ಆಸ್ತಿಯ ಹೊಣೆಗಾರಿಕೆಯು ಎಲ್ಲ ಸಂದರ್ಭಗಳಲ್ಲಿ ಕಲಮು ೨೫ ರ ಶರತುಗಳ ಅಂಕಿತವಾಗಿರತಕ್ಕದ್ದು. ಅಂದರೆ, ಅವರು ಸದಸ್ಯರಾಗಿ ಉಳಿಯದೆ ಇದ್ದ ತಾರೀಖಿನಿಂದ ಎರಡು ವರುಷಗಳ ವರೆಗೆ ಮಾತ್ರ ಅವರ ಹೊಣೆಗಾರಿಕೆ ಎಂಬುದನ್ನು ಕಲಮು ೨೫ ಹೇಳುವುದು. ಆ ಬಗ್ಗೆ ಅದು ವಿವರಗಳನ್ನು ಕೊಡುವುದು.

## ಪ್ರಕರಣ : ೧೩ ಅಪೀಲುಗಳು, ಪರಾಮರ್ಶೆ ಹಾಗೂ ಪುನರ್ವಿಮರ್ಶೆ

### ೧೦೫. ಟ್ರಿಬ್ಯೂನಲ್ಲಿಗೆ ಅಪೀಲುಗಳು.

ಯಾವುದೇ ವ್ಯಕ್ತಿಯು-

(ಅ) ಕಲಮು ೭೧ ರ ಉಪಕಲಮು (೧) ರ ವಾಕ್ಯಾವಳಿ (ಅ) ದನ್ವಯವಾಗಿ ಮಾಡಿದ ರಜಿಸ್ಟ್ರಾರನ ಯಾವುದೇ ನಿರ್ಣಯದಿಂದ; ಇಲ್ಲವೆ

(ಬ) ಕಲಮು ೭೧ ರ ಉಪಕಲಮು (೧) ರ ವಾಕ್ಯಾವಳಿ (ಬ) ದನ್ವಯವಾಗಿ ಆ ಸಂಬಂಧದಲ್ಲಿ ರಾಜ್ಯಸರಕಾರದಿಂದ ಅಧಿಕಾರಗಳನ್ನು ದಯಪಾಲಿಸಲ್ಪಟ್ಟ ವ್ಯಕ್ತಿಯ ಯಾವುದೇ ನಿರ್ಣಯದಿಂದ;

(ಕ) ಕಲಮು ೭೧ ರ ಉಪಕಲಮು (೧) ರ ವಾಕ್ಯಾವಳಿ (ಕ) ದನ್ವಯ ವಾಗಿರುವ ಮಧ್ಯಸ್ಥಿಕೆಗಾರನ ಯಾವುದೇ ಅವಾರ್ಡದಿಂದ;

(ಡ) ಕಲಮು ೭೪ ರ ಉಪಕಲಮು (೨) ರ ವಾಕ್ಯಾವಳಿ (ಫ) ದನ್ವಯ ವಾಗಿರುವ ಲಿಕ್ವಿಡೇಟರನ ಯಾವುದೇ ನಿರ್ಧಾರದಿಂದ;

(ಇ) ಕಲಮು ೭೧ ರನ್ವಯವಾಗಿ ಮಾಡಬಹುದಾದ ಯಾವುದೇ ನಿರ್ಣಯದ ಇಲ್ಲವೆ ಅವಾರ್ಡಿದ ಅಮಲಬಜಾವಣೆಯಲ್ಲಿಯ ವಿಲಂಬವನ್ನು ಇಲ್ಲವೆ ಅಡ್ಡಿಯಾಗುವುದನ್ನು ತಡೆಯುವ ಉದ್ದೇಶದಿಂದ ಕಲಮು ೧೦೩ ರನ್ವಯವಾಗಿ ಮಾಡಿದ ಯಾವುದೇ ಹುಕುಮಿನಿಂದ;

ಬಾಧಿತನಾಗಿದ್ದರೆ, ಸಂದರ್ಭಾನುಸಾರವಾಗಿ ಆ ನಿರ್ಣಯದ, ಅವಾರ್ಡಿನ ಇಲ್ಲವೆ ಹುಕುಮಿನ ತಾರೀಖಿನಿಂದ ಅರವತ್ತು ದಿವಸಗಳ ಒಳಗೆ ಟ್ರಿಬ್ಯೂನಲಕ್ಕೆ ಅಪೀಲು ಮಾಡಬಹುದು.

**ವಿವೇಚನೆ**

ಟ್ರಿಬ್ಯೂನಲಕ್ಕೆ ಅಪೀಲು ಮಾಡಿಕೊಳ್ಳುವ ಬಗ್ಗೆ ಅವಕಾಶ ಕೊಡುವ ಬಗ್ಗೆ ಈ ಕಲಮು ಇದೆ. ಟ್ರಿಬ್ಯೂನಲ ಎಂದರೆ ೧೯೫೭ ನೆಯ ಇಸ್ವಿಯ ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ ಕಾಯಿದೆಯ ಪ್ರಕಾರ ಸ್ಥಾಪಿತವಾದ ಮೈಸೂರ ರೆವೆನ್ಯೂ ಅಪೆಲೆಟ ಟ್ರಿಬ್ಯೂನಲ ಎಂದು ಕಲಮು (೨)ರ (ಕಾ) ದಲ್ಲಿ ವ್ಯಾಖ್ಯೆಮಾಡಲಾಗಿದೆ. ಇಲ್ಲಿ ಹೇಳಲಾದ ಅಪೀಲುಗಳನ್ನು ಆ ಟ್ರಿಬ್ಯೂನಲಕ್ಕೆ ಮಾಡಬೇಕು.

ಯಾವ ಹುಕುಮು ಇಲ್ಲವೆ ನಿರ್ಣಯದ ವಿರುದ್ಧ ಅಪೀಲು ಮಾಡಲು ಅವಕಾಶವಿದೆ ಎಂಬ ಬಗ್ಗೆ ಇಲ್ಲಿ ಹೇಳಲಾಗಿದೆಃ

ಕಲಮು ೭೧ ಇದು ತಂಟೆಗಳ ನಿಕಾಲೆಯ ಬಗ್ಗೆ ಇದೆ. ಅದರ ಉಪಕಲಮು (೧) ರ ವಾಕ್ಯಾವಳಿ (ಅ) ದಲ್ಲಿ ಹೇಳಿದಂತೆ ರಜಿಸ್ಟ್ರಾರನು ತಂಟೆಯನ್ನು ತಾನೇ ಸ್ವತಃ ನಿರ್ಣಯಿಸಿ ಕೊಟ್ಟ ನಿಕಾಲೆಯ ನಿರ್ಣಯದ ವಿರುದ್ಧ ಅಪೀಲು ಮಾಡಬಹುದು. ಅದೇ ಉಪಕಲಮಿನ (ಬ) ವಾಕ್ಯಾವಳಿಯ ಪ್ರಕಾರ ಸರಕಾರ ನಿಯಮಿತ ವ್ಯಕ್ತಿಯ ಕಡೆಗೆ ರಜಿಸ್ಟ್ರಾರನು ತಂಟೆಯನ್ನು ನಿಕಾಲೆಗೆ ಕಳಿಸಿರುವಾಗ ಆ ವ್ಯಕ್ತಿಯು ಕೊಟ್ಟ ಆ ತಂಟೆಯ ನಿರ್ಣಯದ ಮೇಲೆ ಅಪೀಲು ಮಾಡಬಹುದು. ಅದೇ ಉಪಕಲಮಿನ (ಕ) ವಾಕ್ಯಾವಳಿಯ ಪ್ರಕಾರ ಮಧ್ಯಸ್ಥಿಕೆಗಾರನು ಮಾಡಿದ ಅವಾರ್ಡಿನ ವಿರುದ್ಧವಾಗಿ ಅಪೀಲು ಮಾಡಬಹುದು. ಈ ಎಲ್ಲ ಅಪೀಲುಗಳು ಕಲಮು ೭೧ ರ ಉಪಕಲಮು (೧) ರನ್ವಯವಾಗಿ ಮಾಡಲಾದ ನಿರ್ಣಯಗಳ ವಿರುದ್ಧವಾಗಿವೆ.

ಕಲಮು ೭೧ ರನ್ವಯವಾಗಿ ಮಾಡಿದ ಯಾವುದೇ ನಿರ್ಣಯ ಇಲ್ಲವೆ ಅವಾರ್ಡು ಅಮಲಬಜಾವಣೆ ಮಾಡಲ್ಪಡುವುದು ಕಲಮು ೧೦೩ ರ ಪ್ರಕಾರ. ಈ ಅಮಲಬಜಾವಣೆಯನ್ನು ವಿಲಂಬಮಾಡುವುದನ್ನು ಇಲ್ಲವೆ ಅಡ್ಡಿಮಾಡುವುದನ್ನು ತಡೆಯಬೇಕೆಂಬ ಉದ್ದೇಶದಿಂದ ಹುಕುಮು ಮಾಡಬಹುದಾಗಿದೆ. ಆ ಹುಕುಮಿನ ವಿರುದ್ಧವೂ ಅಪೀಲು ಮಾಡಿಕೊಳ್ಳಬಹುದು. ಅಂದರೆ ಮೂಲದಲ್ಲಿ ಕಲಮು ೭೧-

ಆದರ ಪರಿಣಾಮವಾಗಿ ಹುಕುಮು ೧೦೩ ನೆಯ ಕಲಮಿನ ಪ್ರಕಾರ. ೧೦೩ ನೆಯ ಕಲಮಿನ ಪ್ರಕಾರ ಆದ ಹುಕುಮಿನ ವಿರುದ್ಧ ಅಪೀಲು ಮಾಡಿಕೊಳ್ಳಲು ಬರುವುದು.

ಕಲಮು ೭೪ ರನ್ವಯವಾಗಿ ದೊರೆತ ಅಧಿಕಾರದ ಮೂಲಕ ಲಿಕ್ವಿಡೇಟರನು ಆ ಕಲಮಿನ ಉಪಕಲಮು (೨) ರ ವಾಕ್ಯಾವಳಿ (ಫ) ದ ಪ್ರಕಾರ ಯಾವುದೇ ವ್ಯಕ್ತಿಯು ಸದಸ್ಯನು, ಹಿಂದಿನ ಸದಸ್ಯನು ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣದ ವ್ಯಕ್ತಿಯು ಇರುವನೋ ಇಲ್ಲವೊ ಎಂಬುದರ ಬಗ್ಗೆ ನಿರ್ಧಾರವನ್ನು ಹೇಳುವನು. ಆ ನಿರ್ಧಾರದ ವಿರುದ್ಧ ಅಪೀಲು ಮಾಡಲು ಬರುವುದು.

ಈ ಅಪೀಲುಗಳನ್ನು ಆ ಹುಕುಮು, ನಿರ್ಣಯ, ಅವಾರ್ಡು ಇಲ್ಲವೆ ನಿರ್ಧಾರ ಮಾಡಲಾದ ತಾರೀಖಿನಿಂದ ೬೦ ದಿವಸಗಳಲ್ಲಿ ಮಾಡಬೇಕಾಗುವುದು.

**೧೦೬. ಇತರ ಅಧಿಕಾರಿಗಳಿಗೆ ಅಪೀಲುಗಳು**

(೧) ಈ ಕಲಮಿನನ್ವಯವಾಗಿ ಅಪೀಲು—

(ಅ) ಕಲಮು ೭ ರ ಉಪಕಲಮು (೨) ರನ್ವಯವಾಗಿ ಸಹಕಾರಿ ಸಂಘವನ್ನು ನೋಂದಾಯಿಸಲು ನಿರಾಕರಿಸಿ ರಜಿಸ್ಟ್ರಾರನು ಮಾಡಿದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಬ) ಕಲಮು ೧೨ ರ ಉಪಕಲಮು (೪) ರನ್ವಯವಾಗಿ ಸಹಕಾರಿ ಸಂಘದ ಪೋಟನಿಯಮಗಳ ತಿದ್ದುಪಡಿಯನ್ನು ನೋಂದಾಯಿಸಿಕೊಳ್ಳಲು ನಿರಾಕರಿಸಿ ರಜಿಸ್ಟ್ರಾರನು ಮಾಡಿದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಕ) ಸಂಘದ ಸದಸ್ಯನೆಂದು ಪ್ರವೇಶ ಕೊಡಲು ನಿರಾಕರಿಸಿದ ಇಲ್ಲವೆ ಸಂಘದ ಸದಸ್ಯನನ್ನು ಸದಸ್ಯತ್ವದಿಂದ ಹೊರಗೆ ಹಾಕಿದ ಸಹಕಾರಿ ಸಂಘದ ನಿರ್ಣಯದ ವಿರುದ್ಧವಾಗಿ ಉಂಟಾಗತಕ್ಕದ್ದು.

(ಡ) ಕಲಮು ೨೭ ರ ಉಪಕಲಮು (೨) ರನ್ವಯವಾಗಿರುವ ರಜಿಸ್ಟ್ರಾರನ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಇ) ಕಲಮು ೩೦ ರನ್ವಯವಾಗಿ ಸಹಕಾರಿ ಸಂಘದ ಕಮಿಟಿಯನ್ನು ಅಧಿಕಾರದಿಂದ ತೆಗೆದುಹಾಕಲು ರಜಿಸ್ಟ್ರಾರನು ಮಾಡಿದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಫ) ಕಲಮು ೬೭ ರನ್ವಯವಾಗಿ ಪುಸ್ತಕಗಳ ಇಲ್ಲವೆ ಆಸ್ತಿಯನ್ನು ಜಪ್ತಿ ಮಾಡಿದುದರ ಹಾಗೂ ಬಂಧಿಸಿಟ್ಟುದರ ವಿರುದ್ಧವಾಗಿ ಉಂಟಾಗತಕ್ಕದ್ದು;

(ಗ) ಕಲಮು ೬೪ ರನ್ವಯವಾಗಿ ನಡೆಸಿದ ವಿಚಾರಣೆಯ ಇಲ್ಲವೆ ಕಲಮು ೬೫ ರನ್ವಯವಾಗಿ ಮಾಡಲಾದ ಪರಿಶೀಲನೆಯ ವೆಚ್ಚವನ್ನು ಕಲಮು ೬೭ ರನ್ವಯವಾಗಿ ಹಂಚಿ ಹಾಕಲು ಮಾಡಿದ ರಜಿಸ್ಟ್ರಾರನ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು.

(ಹ) ಕಲಮು ೬೪ ರನ್ವಯವಾಗಿ ಮಾಡಿದ ರಜಿಸ್ಟ್ರಾರನ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು.

(ಈ) ಕಲಮು ೬೮ ರನ್ವಯವಾಗಿ ರಜಿಸ್ಟ್ರಾರನಿಂದ ಮಾಡಲಾದ ಸರಚಾರ್ಜದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು.

(ಜ) ಸಹಕಾರಿ ಸಂಘವು ದುಂಡು ಸುತ್ತಲ್ಪಡಬೇಕೆಂದು ಕಲಮು ೭೨ ರನ್ವಯವಾಗಿ ನಿರ್ದೇಶಿಸಲಾದ ರಜಿಸ್ಟ್ರಾರನಿಂದ ಮಾಡಲಾದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು.

(ಕ) ಕಲಮು ೭೪ ರ ಉಪಕಲಮು (೨) ರ ವಾಕ್ಯಾವಳಿ (ಫ) ದನ್ವಯವಾಗಿ ಮಾಡಲಾದ ನಿರ್ಧಾರವನ್ನು ಬಿಟ್ಟು ಕಲಮು ೭೪ ರಿಂದ ಅವನಿಗೆ ದಯಪಾಲಿಸಲಾದ ಅಧಿಕಾರಗಳ ನಿರ್ವಹಣೆಯಲ್ಲಿ ಸಹಕಾರಿ ಸಂಘದ ಲಿಕ್ವಿಡೆಟರನು ಮಾಡಿದ ಯಾವುದೇ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಲ) ಕಲಮು ೧೦೧ ರನ್ವಯವಾಗಿ ರಜಿಸ್ಟ್ರಾರನಿಂದ ಮಾಡಲಾದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು;

(ಮ) ಕಲಮು ೧೦೫ ರ ವಾಕ್ಯಾವಳಿ (ಇ) ಯಲ್ಲಿ ಹೇಳಿದ ಹುಕುಮನ್ನು ಬಿಟ್ಟು ಕಲಮು ೧೦೩ ರನ್ವಯವಾಗಿ ಯಾವುದೇ ಆಸ್ತಿಯ ಜಪ್ತಿಯ ಸಲುವಾಗಿ ರಜಿಸ್ಟ್ರಾರನಿಂದ ಮಾಡಲಾದ ಹುಕುಮಿನ ವಿರುದ್ಧವಾಗಿ ಉಂಟಾಗತಕ್ಕದ್ದು.

(೨) ಉಪಕಲಮು (೧) ರನ್ವಯವಾಗಿರುವ ಯಾವುದೇ ಕೃತಿಯ, ನಿರ್ಣಯದ ಇಲ್ಲವೆ ಹುಕುಮಿನ ವಿರುದ್ಧವಾಗಿ ಅಪೀಲನ್ನು ಆ ಕೃತಿಯ, ನಿರ್ಣಯದ, ಇಲ್ಲವೆ ಹುಕುಮಿನ ತಾರೀಖಿನಿಂದ ಅರುವತ್ತು ದಿವಸಗಳ ಒಳಗೆ

(ಅ) ಆ ಕೃತಿಯು ನಿರ್ಣಯವು, ಇಲ್ಲವೆ ಹುಕುಮು ರಜಿಸ್ಟ್ರಾರನನ್ನು ಬಿಟ್ಟು ಬೇರೆ ಯಾವುದೇ ವ್ಯಕ್ತಿಯಿಂದ ಇಲ್ಲವೆ ಸಹಕಾರಿ ಸಂಘದಿಂದ ಮಾಡಲ್ಪಟ್ಟಿದ್ದರೆ, ರಜಿಸ್ಟ್ರಾರನಿಗೆ ಮಾಡಲ್ಪಡತಕ್ಕದ್ದು; ಇಲ್ಲವೆ

(ಬ) ಆ ಕೃತಿಯು, ನಿರ್ಣಯವು, ಇಲ್ಲವೆ ಹುಕುಮು ರಜಿಸ್ಟ್ರಾರನಿಂದ ಮಾಡಲ್ಪಟ್ಟಿದ್ದರೆ, ರಾಜ್ಯ ಸರಕಾರಕ್ಕೆ ಮಾಡಲ್ಪಡತಕ್ಕದ್ದು.

**ವಿವರಣೆ:** ಉಪಕಲಮು (೨) ರ ಉದ್ದೇಶಗಳಿಗಾಗಿ "ರಜಿಸ್ಟ್ರಾರ" ಶಬ್ದವು ರಜಿಸ್ಟ್ರಾರನ ಎಲ್ಲ ಇಲ್ಲವೆ ಯಾವುದೇ ಅಧಿಕಾರಗಳನ್ನು ನಿರ್ವಹಿಸುವ ವ್ಯಕ್ತಿಯನ್ನು ಒಳಗೊಳ್ಳತಕ್ಕದ್ದಲ್ಲ.

**ವಿವೇಚನೆ**

ಕಲಮು ೧೦೫ ರಲ್ಲಿ ಟ್ರಿಬ್ಯೂನಲಕ್ಕೆ ಅಪೀಲು ಮಾಡುವ ಅವಕಾಶದ ಬಗ್ಗೆ ಹೇಳಲಾಯಿತು. ಕಲಮು ೧೦೬ ರಲ್ಲಿ ಇತರ ಅಧಿಕಾರಿಗಳಿಗೆ ಅಪೀಲು ಮಾಡಿಕೊಳ್ಳುವ ಬಗ್ಗೆ ಹೇಳಲಾಗಿದೆ. ಇತರ ಅಧಿಕಾರಿಗಳೆಂದರೆ ರಜಿಸ್ಟ್ರಾರ ಹಾಗೂ

ರಾಜ್ಯ ಸರಕಾರ. ರಜಿಸ್ಟ್ರಾರನು ಮಾಡಿದ ಹುಕುಮು ಮುಂತಾದವುಗಳ ಮೇಲೆ ರಾಜ್ಯ ಸರಕಾರಕ್ಕೆ ಅಪೀಲು. ರಜಿಸ್ಟ್ರಾರನಲ್ಲದೆ ಅವನ ಆಧೀನವಾಗಿರುವ ಬೇರೆ ಅಧಿಕಾರಿ ಇಲ್ಲವೆ ಸಹಕಾರಿ ಸಂಘವು ಮಾಡಿದ ಹುಕುಮು ಮುಂತಾದವುಗಳ ಮೇಲೆ ರಜಿಸ್ಟ್ರಾರನಿಗೆ ಅಪೀಲು ಮಾಡತಕ್ಕದ್ದು. ಅಪೀಲಿನ ಅಧಿಕಾರವು ವಿಧ್ಯರ್ಥಕವಾಗಿದೆ. ಕಾಯಿದೆಯಿಂದ ಅವಕಾಶ ಮಾಡಿ ಕೊಡಲಾಗಿದೆ. ಅಂದರೆ ಈ ಕಲಮಿನಲ್ಲಿ ಹೇಳಿದ ಪ್ರತಿಯೊಂದು ಹುಕುಮು ಮುಂತಾದವುಗಳ ಮೇಲೆ ಅಪೀಲು ಮಾಡುವ ಅಧಿಕಾರ ಇದೆ.

ಯಾವ ಯಾವ ಕಲಮಿನ ಪ್ರಕಾರ ಮಾಡಲಾದ ಹುಕುಮು, ನಿರ್ಣಯಗಳು ಅಪೀಲು ಯೋಗ್ಯವಾಗಿವೆಯೆಂಬುದರ ವಿವರಣೆಗಳನ್ನು ಕೊಡಲಾಗಿದೆ. ಅವು ಹೀಗಿವೆ:

ಆಯಾ ಕಲಮುಗಳಲ್ಲಿ ಹೇಳಿದಂತೆ ಆ ವಿಷಯಗಳ ಸಂಬಂಧವಾಗಿ ಮಾಡಲಾದ ಹುಕುಮು ಇಲ್ಲವೆ ನಿರ್ಣಯದ ವಿರುದ್ಧ ಅಪೀಲು ಇದೆ: ಕಲಮು ೭ ರ ಉಪಕಲಮು (೨); ಕಲಮು ೧೨ ರ ಉಪಕಲಮು (೪); ಕಲಮು ೧೬ ರ ಉಪಕಲಮು (೨); ಕಲಮು ೨೭ರ ಉಪಕಲಮು (೨); ಕಲಮು ೩೦; ಕಲಮು ೬೬; ಕಲಮು ೬೪-೬೫ ರಲ್ಲಿಯ ಕಾರ್ಯದ ಸಲುವಾಗಿ ಕಲಮು ೬೭; ಕಲಮು ೬೮; ಕಲಮು ೬೯; ಕಲಮು ೭೨; ಕಲಮು ೭೪-ಉಪಕಲಮು (೨) ರ (ಫ) ಬಿಟ್ಟು; ಕಲಮು ೧೧೧; ಕಲಮು ೧೧೩, ಕಲಮು ೧೧೫ ರ (ಇ) ಯ ಹುಕುಮನ್ನು ಬಿಟ್ಟು.

ಈ ಎಲ್ಲ ಹುಕುಮುಗಳ ವಿರುದ್ಧ ಅಪೀಲು ಮಾಡುವ ಅವಕಾಶವಿದೆ. ಈ ಅಪೀಲುಗಳು ಆ ಹುಕುಮು ಇಲ್ಲವೆ ನಿರ್ಣಯವಾದ ತಾರೀಖಿನಿಂದ ೬೦ ದಿವಸಗಳ ಒಳಗೆ ಮಾಡಲ್ಪಡತಕ್ಕದ್ದು.

ರಜಿಸ್ಟ್ರಾರನ ಅಧಿಕಾರಗಳನ್ನು ನಡೆಸುವವನು 'ರಜಿಸ್ಟ್ರಾರ'ನಲ್ಲ ಎಂದು ಹೇಳಿದೆ. ಅಂದರೆ ಅಪೀಲು ಮಾಡುವಾಗ ರಜಿಸ್ಟ್ರಾರನ ಅಧಿಕಾರಗಳನ್ನು ನಡೆಸುವ ವ್ಯಕ್ತಿಗೆ ಮಾಡತಕ್ಕದ್ದಲ್ಲವೆಂದು ಅರ್ಥವಾಗಿದೆ, ಆ ವ್ಯಕ್ತಿಯು ಮಾಡಿದ ಹುಕುಮಿನ ವಿರುದ್ಧ ರಜಿಸ್ಟ್ರಾರನಿಗೆ ಅಪೀಲು ಇದೆಯೆಂಬ ಅರ್ಥವೂ ಆಗುವುದು. ರಜಿಸ್ಟ್ರಾರನು ಮಾಡಿದ ಹುಕುಮಿನ ವಿರುದ್ಧ ರಾಜ್ಯ ಸರಕಾರಕ್ಕೆ ಅಪೀಲು ಇದೆಯೆಂದು ಹೇಳಿದ್ದರಲ್ಲಿ ಎರಡು ಸಂಗತಿಗಳು ಅಡಕವಾಗುವುವು. ಆ ಹುಕುಮು ರಜಿಸ್ಟ್ರಾರನು ಬೇರೆ ಬೇರೆ ಕಲಮುಗಳ ಪ್ರಕಾರ ಮಾಡಿದ ಮೂಲ ಹುಕುಮು ಎಂದು ಅರ್ಥವಾಗುವುದಲ್ಲದೆ, ಕಲಮು ೧೦೬ ರ ಉಪಕಲಮು (೨) ವಾಕ್ಯಾವಳಿ (ಅ) ದನ್ವಯವಾಗಿ ಅಪೀಲಿನಲ್ಲಿ ಮಾಡಿದ ಹುಕುಮು ಎಂದು ಅರ್ಥವಾಗುವದಿಲ್ಲ. ಉಪಕಲಮು (೨) ರಲ್ಲಿ, ಉಪಕಲಮು (೧) ರಲ್ಲಿ ಆದ ಹುಕುಮು ಮುಂತಾದವುಗಳ ವಿರುದ್ಧ ಅಪೀಲು ಎಂದು ಸ್ಪಷ್ಟಪಡಿಸಿರುವುದು. ಆದರೆ, ರಜಿಸ್ಟ್ರಾರನಿಗೆ ಮಾಡಲ್ಪಟ್ಟ ಅಪೀಲಿನ ಮೇಲೆ ಮಾಡಿದ ಹುಕುಮಿನ ಬಗ್ಗೆ ಏನೂ ಹೇಳಿಲ್ಲ. ಇದನ್ನು ಲಕ್ಷಕ್ಕೆ ತರಬೇಕು.

## ೧೦೭. ಟ್ರಿಬ್ಯೂನಲದಿಂದ ಪರಾಮರ್ಶೆ

ಯಾವ ವಿಷಯದ ನಿರ್ಣಯದ ವಿರುದ್ಧ ಅದಕ್ಕೆ ಅಪೀಲು ಹಿಡಿಯುವ ಅಧಿಕಾರ ಇದೆಯೋ ಅಂತಹ ಯಾವುದೇ ಪ್ರಕರ್ಣಗಳಲ್ಲಿಯ ದಾಖಲೆಪತ್ರಗಳನ್ನು ಟ್ರಿಬ್ಯೂನಲವು ತಾನೇ ಸ್ವಂತ ಪ್ರೇರಣೆಯಿಂದ ಇಲ್ಲವೆ ಬಾಧಿತನಾದ ಯಾವುದೇ ವ್ಯಕ್ತಿಯ ಅರ್ಜಿಯ ಮೂಲಕವಾಗಿ, ಆ ಹಿಂದಿನ ಯಾವುದೇ ಪಾಸು ಮಾಡಲಾದ ಹುಕುಮಿನ ಇಲ್ಲವೆ ನಿರ್ಣಯದ ಕಾಯಿದೆಬದ್ಧತೆಯ ಬಗ್ಗೆ ಇಲ್ಲವೆ ಔಚಿತ್ಯದ ಬಗ್ಗೆ ಸಮಾಧಾನ ಮಾಡಿಕೊಳ್ಳುವುದರ ಸಲುವಾಗಿ ಕರೆಯಿಸಿಕೊಳ್ಳಬಹುದು ಹಾಗೂ ಪರೀಕ್ಷಣ ಮಾಡಬಹುದು. ಮತ್ತು ಯಾವುದೇ ಪ್ರಕರಣದಲ್ಲಿಯ ಅಂತಹ ಹುಕುಮು ಇಲ್ಲವೆ ನಿರ್ಣಯವು ತಿದ್ದುಪಡಿ ಮಾಡಲ್ಪಡಬೇಕೆಂದು, ರದ್ದು ಮಾಡಲ್ಪಡಬೇಕೆಂದು ಇಲ್ಲವೆ ಪರಾಮರ್ಶೆಮಾಡಲ್ಪಡಬೇಕೆಂದು ಟ್ರಿಬ್ಯೂನಲಕ್ಕೆ ಕಂಡು ಬಂದರೆ, ಅದಕ್ಕೆ ಯೋಗ್ಯವೆನ್ನಿಸಲಾಗುವಂತೆ ಟ್ರಿಬ್ಯೂನಲವು ಹುಕುಮನ್ನು ಮಾಡಬಹುದು.

**ವಿವೇಚನೆ**

ಟ್ರಿಬ್ಯೂನಲಕ್ಕೆ ಅಪೀಲು ಮಾಡಲು ಯೋಗ್ಯವಾದ ವಿಷಯ-ಹುಕುಮು ಇರಬೇಕು. ಅಂದರೆ ೧೦೫ ನೆಯ ಕಲಮಿನಲ್ಲಿ ಹೇಳಿದ ಕಲಮುಗಳನ್ವಯವಾಗಿ ವಿಚಾರಣೆ ನಡೆದಿರಬೇಕು ಆ ಪ್ರಕರಣಗಳಲ್ಲಿ ಯಾವುದೇ ನಿರ್ಣಯ ಇಲ್ಲವೆ ಪಾಸಾದ ಯಾವುದೇ ಹುಕುಮು ಕಾಯಿದೇಶೀರ ಇಲ್ಲವೆ ಯೋಗ್ಯವಾಗಿ ಆಗಿದೆಯೋ ಇಲ್ಲವೊ ಎಂದು ಮನವರಿಕೆಮಾಡಿಕೊಳ್ಳಲು ಟ್ರಿಬ್ಯೂನಲಕ್ಕೆ ಅಧಿಕಾರವಿದೆ. ಈ ಅಧಿಕಾರವು ಈ ಕಲಮಿನ ಮೂಲಕ ಉಂಟಾಗುತ್ತದೆ. ಹೀಗೆ ಮನವರಿಕೆ ಮಾಡಿಕೊಳ್ಳಲು ಟ್ರಿಬ್ಯೂನಲವು ತಾನೇ ಸ್ವಂತ ಪ್ರೇರಣೆಯಿಂದ ಆ ಪ್ರಕರಣಗಳಲ್ಲಿಯ ಕಾಗದಪತ್ರಗಳನ್ನು ತರಿಸಿಕೊಂಡು ದಾಖಲೆಪತ್ರಗಳನ್ನು ಪರೀಕ್ಷಣ ಮಾಡಬಹುದು. ಇಲ್ಲವೆ ಆ ನಿರ್ಣಯ ಇಲ್ಲವೆ ಹುಕುಮು ಯಾವ ವ್ಯಕ್ತಿಯನ್ನು ಬಾಧಿಸಿರುವುದೋ ಆ ವ್ಯಕ್ತಿಯು ಮಾಡಿದ ಅರ್ಜಿಯ ಮೂಲಕ ಆ ಪ್ರಕರಣದಲ್ಲಿಯ ದಾಖಲೆ ಪತ್ರಗಳನ್ನು ತರಿಸಿಕೊಂಡು ಪರೀಕ್ಷಣ ಮಾಡಬಹುದು.

ಹೀಗೆ ಪರೀಕ್ಷಣ ಮಾಡಿದ ನಂತರ ಆ ಹುಕುಮನ್ನು ಇಲ್ಲವೆ ನಿರ್ಣಯವನ್ನು ತಿದ್ದುಪಡಿ ಮಾಡಬೇಕೆಂದು, ರದ್ದು ಮಾಡಬೇಕೆಂದು ಇಲ್ಲವೆ ಪರಾಮರ್ಶೆ ಮಾಡಬೇಕೆಂದು ಟ್ರಿಬ್ಯೂನಲಕ್ಕೆ ಕಂಡುಬಂದರೆ, ಆಯಾ ಸಂದರ್ಭಕ್ಕೆ ಯೋಗ್ಯ ಕಂಡು ಬರುವಂತೆ ಹುಕುಮು ಮಾಡಬಹುದು.

ಕಲಮು ೧೦೫ ರ ಪ್ರಕಾರ ಅಪೀಲಿನ ಅಧಿಕಾರವನ್ನು ಕೊಡಲಾಗಿದೆ. ಈ ಕಲಮು ಪರಾಮರ್ಶೆ ಮಾಡಿಸುವ ಅಧಿಕಾರವನ್ನು ಕೊಡುತ್ತದೆ. ಪರಿಣಾಮವು ಒಂದೇ ಆದರೂ ದಾರಿಗಳು ಎರಡು;ಉಪಾಯಗಳು ಎರಡು. ಅದರೆ ಕಲಮು ೧೦೫ರ

ಪ್ರಕಾರ ಆಯಾ ಕಲಮುಗಳನ್ವಯ ಮಾಡಲಾದ ಹುಕುಮು ನಿರ್ಣಯ ಆವಾರ್ಡುಗಳ ಮೂಲಕ ಬಾಧಿತನಾದ ವ್ಯಕ್ತಿಯು ಅಪೀಲು ಮಾಡಿದರೆ ಮಾತ್ರ ಟ್ರಿಬ್ಯೂನಲವು ವಿಚಾರಣೆ ಮಾಡುತ್ತದೆ. ಆದರೆ ಕಲಮು ೧೦೬ ರನ್ವಯವಾಗಿ ಟ್ರಿಬ್ಯೂನಲವು ತಾನೇ ಸ್ವಂತ ಪ್ರೇರಣೆಯಿಂದ ದಾಖಲೆಪತ್ರಗಳನ್ನು ತರಿಸಿಕೊಂಡು ಪರೀಕ್ಷಣಮಾಡಬಹುದಾಗಿದೆ. ಕಲಮು ೧೦೫ ಅಪೀಲುಗಳ ಬಗ್ಗೆ ಇದೆ. ಕಲಮು ೧೦೭ ಪರಾಮರ್ಶೆ ಮಾಡುವ ಅಧಿಕಾರ ಕೊಡುತ್ತದೆ. ಒಂದು ಬಗೆಯ ಮೇಲ್ವಿಚಾರಣೆಯ ಕಾರ್ಯವಿದ್ದ ಹಾಗೆ. ನಡೆದ ಪ್ರಕರಣಗಳಲ್ಲಿಯ ಹುಕುಮುಗಳ ಕಾಯಿದೆ ಬದ್ಧತೆಯನ್ನು, ಔಚಿತ್ಯವನ್ನು ತಿಳಿದು ಮನವರಿಕೆ ಮಾಡಿಕೊಳ್ಳುವ ಅಧಿಕಾರ ಇದು. ಕಾಯಿದೆ ವಿರುದ್ಧವಾಗಿ ಇಲ್ಲವೆ ಔಚಿತ್ಯ ತಪ್ಪಿ ಹುಕುಮು ಇಲ್ಲವೆ ನಿರ್ಣಯವಾಗಿದ್ದರೆ ಅದನ್ನು ಕೂಡಲೆ ಸರಿ ಪಡಿಸುವ ಅಧಿಕಾರ ಟ್ರಿಬ್ಯೂನಲಕ್ಕೆ ಇದೆ.

## ೧೦೮. ರಾಜ್ಯ ಸರಕಾರವು ಪುನರ್ವಿಮರ್ಶೆ ಮಾಡುವ ಅಧಿಕಾರ

ಟ್ರಿಬ್ಯೂನಲದಿಂದ ಅಪೀಲು ಹಿಡಿಯಲ್ಪಡುವ ಇಲ್ಲವೆ ಪರಾಮರ್ಶೆ ಮಾಡಲ್ಪಡುವ ಇಲ್ಲವೆ ಕಲಮು ೧೦೬ ರನ್ವಯವಾಗಿ ರಾಜ್ಯಸರಕಾರಕ್ಕೆ ಅಪೀಲು ಮಾಡಲ್ಪಟ್ಟಿರುವ ಪ್ರಕರಣಗಳನ್ನು ಹೊರತು ಪಡಿಸಿ, ತನ್ನ ಆಧೀನವಾಗಿದ್ದ ಯಾವುದೇ ಅಧಿಕಾರಿಯ ಎದುರು ನಡೆದ ಯಾವುದೇ ಮೊಕದ್ದಮೆ ಇಲ್ಲವೆ ಪ್ರಕರಣದಲ್ಲಿಯ ಕಾಗದಪತ್ರ, ದಾಖಲೆ ಪತ್ರಗಳನ್ನು ರಾಜ್ಯ ಸರಕಾರವು ತನ್ನ ಸ್ವಂತ ಪ್ರೇರಣೆಯಿಂದ ಯಾವುದೇ ಕಾಲಕ್ಕೆ ಮತ್ತು ಬಾಧಿತನಾದ ಯಾವುದೇ ವ್ಯಕ್ತಿಯ ಅರ್ಜಿಯ ಮೂಲಕ ಯಾವುದೇ ಹುಕುಮಿನ ತಾರೀಖಿನಿಂದ ಆರು ತಿಂಗಳ ಒಳಗೆ, ಕರೆಯಿಸಿಕೊಳ್ಳಬಹುದು ಮತ್ತು ಪರೀಕ್ಷಣ ಮಾಡಬಹುದು; ಮತ್ತು ಅದಕ್ಕೆ ಯೋಗ್ಯವೆನ್ನಿಸಿದಂತೆ ವಿಚಾರಣೆ ನಡೆಸಿದ ನಂತರ ಆ ಅಧಿಕಾರಿಯು ಮಾಡಿದ ಹುಕುಮು ಕಾಯಿದೆಗೆ ವಿರುದ್ಧವಾಗಿದೆಯೆಂದು ಮತ್ತು ಅದು ನ್ಯಾಯದ ವೈಪರೀತ್ಯದಲ್ಲಿ ಪರಿಣಮಿಸಿದೆಯೆಂದು ಮನವರಿಕೆಯಾದರೆ, ರಾಜ್ಯ ಸರಕಾರಕ್ಕೆ ಯೋಗ್ಯ ಕಂಡಂತಹ ಹುಕುಮುಗಳನ್ನು ರಾಜ್ಯ ಸರಕಾರವು ಮಾಡಬೇಕು.

ಆದರೆ, ಯಾವುದೇ ವ್ಯಕ್ತಿಗೆ ತನ್ನ ವಾದವನ್ನು ಮಂಡಿಸಲು ಯೋಗ್ಯ ಅವಕಾಶ ಮಾಡಿಕೊಟ್ಟ ಹೊರತು ಈ ಕಲಮಿನನ್ವಯವಾಗಿ ಯಾವುದೇ ವ್ಯಕ್ತಿಯ ಹಿತಸಂಬಂಧಕ್ಕೆ ವ್ಯತ್ಯಯ ಬರುವಂತಹ ಯಾವುದೇ ಹುಕುಮು ಮಾಡಲ್ಪಡತಕ್ಕದ್ದಲ್ಲ.

### ವಿವೇಚನೆ

ಕಲಮು ೧೦೭ ಪರಾಮರ್ಶೆ ಮಾಡುವ ಟ್ರಿಬ್ಯೂನಲದ ಅಧಿಕಾರದ ಬಗ್ಗೆ ಇದ್ದಿತು. ಈ ಕಲಮು ರಾಜ್ಯ ಸರಕಾರಕ್ಕೆ ಅಂತಹ ಅಧಿಕಾರವನ್ನು ಕೊಡುತ್ತದೆ. ಟ್ರಿಬ್ಯೂನಲವು ಪರಾಮರ್ಶೆ ಮಾಡಬೇಕಾದಾಗ ಯಾವ ವಿಷಯದ ಬಗ್ಗೆ ಇಲ್ಲವೆ



ಯಾವ ಹುಕುಮು ಮಾಡಲ್ಪಟ್ಟ ಪ್ರಕರಣದ ಬಗ್ಗೆ ಪರಾಮರ್ಶೆ ಮಾಡಬೇ ದಿದೆಯೋ ಅದು ಟ್ರಿಬ್ಯೂನಲಕ್ಕೆ ಅಪೀಲು ಮಾಡಲು ಯೋಗ್ಯವಾಗಿರುವಂತಹದು ಆಗಿರಬೇಕಾದುದು ಮುಖ್ಯ ಮಾತು. ಆದರೆ ರಾಜ್ಯ ಸರಕಾರವು ತನ್ನ ಅಧಿಕಾರ ವನ್ನು ಈ ಕಲಮಿನ ಮೂಲಕ ನಡೆಸಬೇಕಾದಾಗ ಹಾಗೆ ಇಲ್ಲ. ಯಾವ ಹುಕುಮು ಗಳ ವಿರುದ್ಧ ಟ್ರಿಬ್ಯೂನಲಕ್ಕೆ ಅಪೀಲು ಮಾಡಿಕೊಳ್ಳಲು ಇಲ್ಲವೆ ಅದರಿಂದ ಪರಾ ಮರ್ಶೆ ಮಾಡಿಸಲು ಅನುಕೂಲವಿದೆಯೋ ಅವುಗಳನ್ನು ಬಿಟ್ಟು ಮತ್ತು ೧೦೩ ನೆಯ ಕಲಮಿನ ಪ್ರಕಾರ ಯಾವ ಹುಕುಮುಗಳ ಮೇಲೆ ರಾಜ್ಯಸರಕಾರಕ್ಕೆ ಅಪೀಲಿನ ಅನುಕೂಲತೆಯಿದೆಯೋ ಅವನ್ನು ಬಿಟ್ಟು ಉಳಿದ ಯಾವುದೇ ಹುಕುಮು ಮಾಡ ಲ್ಪಟ್ಟ ಸಂದರ್ಭ ಇರಬೇಕಾದುದು ಅಗತ್ಯ. ಹೀಗೆ ಪ್ರಸಂಗ ಇದ್ದರೆ ಮಾತ್ರ ಈ ಕಲಮಿನ ಪ್ರಕಾರ ರಾಜ್ಯ ಸರಕಾರಕ್ಕೆ ಪುನರ್ವಿಮರ್ಶೆ ಮಾಡುವ ಅಧಿಕಾರ ಉಂಟಾಗುತ್ತದೆ.

ಆ ಹುಕುಮು ರಾಜ್ಯ ಸರಕಾರದ ಅಧೀನವಾಗಿದ್ದ ಅಧಿಕಾರಿಯು ಮಾಡಿರ ಬೇಕು. ಅಂದಾಗ ರಾಜ್ಯ ಸರಕಾರವು ಪುನರ್ವಿಮರ್ಶೆ ಮಾಡಲು ಅಧಿಕಾರ ಹುಟ್ಟುವುದು. ರಾಜ್ಯ ಸರಕಾರವು ತಾನೇ ತನ್ನ ಸ್ವಂತ ಪ್ರೇರಣೆಯಿಂದ ಆ ಪ್ರಕರಣವನ್ನು ಪುನರ್ವಿಮರ್ಶೆ ಮಾಡಬೇಕೆಂದು ಮಾಡಿದರೆ ಅದಕ್ಕೆ ಕಾಲಮಿತಿ ಯಿಲ್ಲ. ಅದನ್ನು ಬೇಕಾದಾಗ ಅದು ಮಾಡಬಹುದು. ಆದರೆ ರಾಜ್ಯ ಸರಕಾ ರವು ಪ್ರಕರಣದ ಪುನರ್ವಿಮರ್ಶೆ ಮಾಡಬೇಕೆಂದು ಆ ಹುಕುಮಿನಿಂದ ಬಾಧಿತ ನಾದ ವ್ಯಕ್ತಿಯು ಅರ್ಜಿ ಮಾಡಿದರೆ ಆಗ ಆರು ತಿಂಗಳ ಕಾಲಾವಧಿ ಇದೆ. ಈ ಕಾಲಾವಧಿಯು ಅರ್ಜಿ ಮಾಡಲಿಕ್ಕೆ ಇದೆಯೆಂದು ಹೇಳಿಲ್ಲ. ಪುನರ್ವಿಮರ್ಶೆ ಮಾಡಲಿಕ್ಕೆ ಇದ್ದ ಕಾಲಾವಧಿಯ ಹಾಗೆ ಇಲ್ಲಿಯ ವಾಕ್ಯ ರಚನೆ ಇದೆ. ಆದ್ದರಿಂದ ಸರಕಾರವು ತಾನೇ ಪುನರ್ವಿಮರ್ಶೆ ಮಾಡಬೇಕೆಂದು ಮಾಡಿದರೆ ಅದನ್ನು ತನಗೆ ಬೇಕಾದಾಗ ಮಾಡಬಹುದು. ಆದರೆ, ಹುಕುಮಿನಿಂದ ಬಾಧಿತನಾದ ವ್ಯಕ್ತಿಯು ಅರ್ಜಿ ಮಾಡಿದ್ದರೆ, ಆ ಹುಕುಮು ಮಾಡಲ್ಪಟ್ಟ ತಾರೀಖಿನಿಂದ ಆರು ತಿಂಗಳ ಒಳಗೆ ಪುನರ್ವಿಮರ್ಶೆ ಮಾಡಬೇಕಾಗುವುದು. ಅಂದರೆ ಹುಕುಮು ಮಾಡಲ್ಪಟ್ಟ ತಾರೀಖಿನಿಂದ ಆರು ತಿಂಗಳು ಕಳೆದು ಹೋದ ನಂತರ ಅವನ್ನು ಪುನರ್ವಿಮರ್ಶೆ ಮಾಡಲು ಸರಕಾರಕ್ಕೆ ಯಾವುದೇ ಬಾಧಿತ ವ್ಯಕ್ತಿಯ ಅರ್ಜಿಯ ಮೂಲಕ ಮಾಡಲು ಬರುವುದಿಲ್ಲ, ಎಂದ ಹಾಗಾಯಿತು. ಆದ್ದರಿಂದ ಅರ್ಜಿ ಮಾಡುವವನು ಹುಕುಮಿನ ತಾರೀಖಿನಿಂದ ಆರು ತಿಂಗಳ ಒಳಗೆ ಪುನರ್ವಿಮರ್ಶೆ ನಡೆಯುವಂತೆ ಸರಕಾರವು ಕ್ರಮ ಕೈಕೊಳ್ಳುವಂತೆ ಅರ್ಜಿ ಮಾಡಬೇಕು.

ಆಗ ಸರಕಾರವು ಸಂಬಂಧಪಟ್ಟ ಆ ಪ್ರಕರಣದಲ್ಲಿಯ ಕಾಗದ ಪತ್ರ ದಾಖಲೆ ಪತ್ರಗಳನ್ನು ತರಿಸಿಕೊಂಡು ಪರೀಕ್ಷಣ ಮಾಡಬಹುದು. ಅಲ್ಲದೆ ತನಗೆ

ಯೋಗ್ಯ ಕಂಡ ವಿಚಾರಣೆ ನಡೆಸಬಹುದು. ವಿಚಾರಣೆಯ ನಂತರ, ತನ್ನ ಅಧೀನ ಅಧಿಕಾರಿಯು ಮಾಡಿದ ಹುಕುಮು ಕಾಯಿದೆಗೆ ವಿರುದ್ಧವಾಗಿದೆ ಇಲ್ಲವೆ ಅವರಿಂದ ಅನ್ಯಾಯವಾಗಿದೆ ಎಂದು ಕಂಡು ಬಂದರೆ, ಆ ಸಂದರ್ಭಕ್ಕೆ ತಕ್ಕಂತೆ ಯೋಗ್ಯ ಹುಕುಮುಗಳನ್ನು ರಾಜ್ಯ ಸರಕಾರವು ಮಾಡಬೇಕೆಂದು ಹೇಳಲಾಗಿದೆ. ಆದರೆ ಹೀಗೆ ಹುಕುಮು ಮಾಡುವುದಕ್ಕಿಂತ ಮೊದಲು, ಈ ಹುಕುಮಿನಿಂದ ಯಾವ ವ್ಯಕ್ತಿಗೆ ಅವನ ಹಿತಸಂಬಂಧಕ್ಕೆ ವ್ಯತ್ಯಯ ಬರುವುದೋ ಅವನಿಗೆ ತನ್ನ ವಾದವನ್ನು ಮಂಡಿಸಲು ಯೋಗ್ಯ ಅವಕಾಶ ಮಾಡಿಕೊಟ್ಟಿರಬೇಕು. ಹಾಗೆ ಅವಕಾಶ ಮಾಡಿ ಕೊಡದ ಹೊರತು ರಾಜ್ಯ ಸರಕಾರವು ಯಾವುದೇ ಹುಕುಮನ್ನು ಮಾಡತಕ್ಕದ್ದಲ್ಲ.

## ಪ್ರಕರಣ: ೧೪ ಅಪರಾಧಗಳು ಹಾಗೂ ದಂಡನೆಗಳು

### ೧೧೯. ಅಪರಾಧಗಳು

(೧) ಸಹಕಾರಿ ಸಂಘವಲ್ಲದ ಯಾವುದೇ ವ್ಯಕ್ತಿಯು "ಕೋಆಪರೇಟಿವ್ಹ" ಎಂಬ ಇಲ್ಲವೆ ಭಾರತೀಯ ಭಾಷೆಗಳಲ್ಲಿ ಅದಕ್ಕೆ ಸಮಾನವಾದ ಪ್ರತಿಶಬ್ದವುಳ್ಳ ಯಾವುದೇ ಹೆಸರು ಇಲ್ಲವೆ ತಲೆಬರೆಹದ ಹೆಸರಿನಲ್ಲಿ ಅದು ಸಮಾವೇಶವಾಗಿರುವಂತಹ ಹೆಸರಿನನ್ವಯವಾಗಿ ವ್ಯವಹಾರನ್ನು ರಾಜ್ಯ ಸರಕಾರದ ಪರವಾನಗಿ ಇಲ್ಲವೆ ಸಾಗಿ ಸುತ್ತಿದ್ದರೆ, ಅವನು ಎರಡು ನೂರು ರೂಪಾಯಿಗಳ ವರೆಗೆ ಆಗುವ ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

(೨) ಸಹಕಾರಿ ಸಂಘದ ಯಾವುದೇ ಸದಸ್ಯನು ಇಲ್ಲವೆ ಹಿಂದಿನ ಸದಸ್ಯನು ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣ ವ್ಯಕ್ತಿಯು, ವಾರಸದಾರನು ಇಲ್ಲವೆ ಕಾಯಿದೇಶೀರ ಪ್ರತಿನಿಧಿಯು ಆ ಕಲಮಿನನ್ವಯವಾಗಿ ಪ್ರಥಮ ಅಧಿಕಾರ ಭಾರಕ್ಕೆ ಸಂಘವು ಯಾವ ಆಸ್ತಿಗಳ ಸಂಬಂಧವಾಗಿ ಬಾಧ್ಯಸ್ಥವಾಗಿರುವುದೋ ಅಂತಹ ಯಾವುದೇ ಆಸ್ತಿಯನ್ನು ವಿಲೇವಾಟ ಮಾಡಿ ಕಲಮು ೩೨ ಇಲ್ಲವೆ ೩೩ ರ ಶರತುಗಳ ವಿರುದ್ಧವಾಗಿ ವರ್ತಿಸಿದರೆ, ಇಲ್ಲವೆ ಇಂತಹ ಮಾಗಣಿಗೆ ವ್ಯತ್ಯಯ ಬರುವಂತೆ ಬೇರೆ ಯಾವುದೇ ಕೃತಿಯನ್ನು ಮಾಡಿದರೆ, ಅವನು ಎರಡು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

(೩) ಸಹಕಾರಿ ಸಂಘವು ಇಲ್ಲವೆ ಅದರ ಅಧಿಕಾರಿ ಇಲ್ಲವೆ ಸದಸ್ಯನು ಬುದ್ಧಿಪೂರ್ವಕವಾಗಿ ತಪ್ಪು ವಿವರ ಪತ್ರಿಕೆಯನ್ನು ಕೊಟ್ಟರೆ ಇಲ್ಲವೆ ತಪ್ಪು ಮಾಹಿತಿಯನ್ನು ಒದಗಿಸಿದರೆ, ಇಲ್ಲವೆ ಈ ಕಾಯಿದೆಯ ಶರತುಗಳನ್ವಯವಾಗಿರುವ ಸಮನ್ಸು, ಬೇಡಿಕೆ ಇಲ್ಲವೆ ಲೇಖೀಹುಕುಮು ಇದಕ್ಕೆ ಯಾವುದೇ ವ್ಯಕ್ತಿಯು ಬುದ್ಧಿಪೂರ್ವಕವಾಗಿ ಇಲ್ಲವೆ ಯಾವುದೇ ಯೋಗ್ಯಕಾರಣವಿಲ್ಲದೆ ಅವಿಧೇಯವಾಗಿ ವರ್ತಿಸಿದರೆ, ಇಲ್ಲವೆ

ಈ ಕಾಯದೆಯ ಶರತುಗಳನ್ವಯವಾಗಿ ಈ ಸಂಬಂಧದಲ್ಲಿ ಅಧಿಕರಿಸಲ್ಪಟ್ಟ ವ್ಯಕ್ತಿಯಿಂದ ಇಲ್ಲವೆ ವ್ಯಕ್ತಿಗಳ ಸಮೂಹದಿಂದ ಬೇಡಲ್ಪಟ್ಟಾಗ ಬುದ್ಧಿಪೂರ್ವಕವಾಗಿ ಯಾವುದೇ ಮಾಹಿತಿಯನ್ನು ಕೊಡದಿದ್ದರೆ ಇಲ್ಲವೆ ಯಾವುದೇ ಕಾಗದಪತ್ರಗಳನ್ನು ಇಲ್ಲವೆ ಆಸ್ತಿಯನ್ನು ಸ್ವಾಧೀನ ಪಡಿಸದಿದ್ದರೆ, ಅವನು ಎರಡು ಸಾವಿರರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

(೪) ಯಾವುದೇ ಮಾಲಕನು ಯಾವ ಯೋಗ್ಯಕಾರಣವಿಲ್ಲದೆ, ಕಲಮು ೩೪ ರ ಉಪಕಲಮು (೨) ರನ್ವಯವಾಗಿ ಕಡಿತವನ್ನು ಮಾಡಲು ತಪ್ಪಿದರೆ, ಇಲ್ಲವೆ ಕಲಮು ೩೪ರ ಉಪಕಲಮು (೨) ರನ್ವಯವಾಗಿ ಮಾಡಿದ ಕಡಿತದ ಹಣವನ್ನು ಕಡಿತ ಮಾಡಿದ ತಾರೀಖಿನಿಂದ ಹದಿನಾಲ್ಕು ದಿವಸಗಳ ಒಳಗೆ ಸಹಕಾರಿ ಸಂಘಕ್ಕೆ ಸಲ್ಲಿಸಲು ತಪ್ಪಿದರೆ, ಆ ಕಾಲದಲ್ಲಿ ಜಾರಿಯಲ್ಲಿದ್ದ ಬೇರೆ ಯಾವುದೇ ಕಾಯಿದೆಯನ್ವಯವಾಗಿ ಅವನ ವಿರುದ್ಧ ಕೈಕೊಳ್ಳಬಹುದಾದ ಯಾವುದೇ ಕ್ರಮಕ್ಕೆ ವ್ಯತ್ಯಯ ಬರದಂತೆ ಅವನು ಎರಡು ಸಾವಿರ ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

(೫) ಕಲಮು ೧೬ರ ಉಪಕಲಮು (೨) ರ, ಕಲಮು ೨೪ರ ಉಪಕಲಮು (೧) ರ ವಾಕ್ಯಾವಳಿ (ಬ) ದ ಉಪವಾಕ್ಯಾವಳಿ (ii) ದ, ಕಲಮು ೨೮ ರ ಉಪ ಕಲಮು (೧) ರ, ಕಲಮು ೫೬ ರ, ಕಲಮು ೫೮ ರ, ಕಲಮು ೫೯ ರ, ಕಲಮು ೬೦ ರ, ಇಲ್ಲವೆ ಕಲಮು ೬೨ ರ ಶರತುಗಳಿಗೆ ಅನುಸಾರವಾಗಿ ನಡೆಯಲು ತಪ್ಪಿದರೆ, ತಪ್ಪಿತಸ್ಥ ಸಹಕಾರಿ ಸಂಘವು ಮತ್ತು ಸಂಘದ ಪ್ರತಿಯೊಬ್ಬ ಅಧಿಕಾರಿ ಇಲ್ಲವೆ ಕಮಿಟಿಯ ಸದಸ್ಯನು ಎರಡು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

(೬) ಯಾವುದೇ ವ್ಯಕ್ತಿಯು—

(i) ಕಲಮು ೧೭ ರನ್ವಯವಾಗಿ ಸದಸ್ಯನಾಗಲು ಅರ್ಹನಾಗಿರದೆ ಇರುವಾಗ ಸಹಕಾರಿ ಸಂಘಕ್ಕೆ ಸದಸ್ಯತ್ವಕ್ಕೆ ಪ್ರವೇಶ ಪಡೆಯಲು ಅರ್ಜಿಮಾಡಿದರೆ, ಇಲ್ಲವೆ ಸದಸ್ಯನಾದರೆ, ಇಲ್ಲವೆ ಆ ಕಲಮಿನ ಉಪಕಲಮು (೨) ರನ್ವಯವಾಗಿ ಸದಸ್ಯನಾಗಿ ಉಳಿಯದೆ ಇರುವ ಹಾಗೆ ಆದ ನಂತರ ಸದಸ್ಯನೆಂದು ಕಾರ್ಯಮಾಡಿದರೆ,

(ii) ಕಲಮು ೧೯ ರ ಶರತುಗಳ ವಿರುದ್ಧವಾಗಿ ಸದಸ್ಯನ ಅಧಿಕಾರಗಳನ್ನು ನಿರ್ವಹಿಸಿದರೆ,

(iii) ಕಲಮು ೮೭ ರ ಉಪಕಲಮು (೩) ರ ಶರತುಗಳ ವಿರುದ್ಧವಾಗಿ ಬುದ್ಧಿಪೂರ್ವಕವಾಗಿ ಮಾಹಿತಿಯನ್ನು ಇಲ್ಲವೆ ಕಾಗದಪತ್ರವನ್ನು ಕೊಡಲು ತಪ್ಪಿದರೆ,

(iv) ಕಲಮು ೯೫ ರ ಉಪಕಲಮು (೧) ರ ವಿರುದ್ಧವಾಗಿ ಒತ್ತಿ ಆಧಾರದ ಆಸ್ತಿಯನ್ನು ಲಾವಣಿಗೆ ಕೊಟ್ಟರೆ,

ಅವನು ಎರಡು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದಿಂದ ಶಿಕ್ಷಾಯೋಗ್ಯನಾಗತಕ್ಕದ್ದು.

**ವಿವೇಚನೆ**

ಏನು ಮಾಡಿದರೆ ಅಪರಾಧವಾಗುವುದು ಮತ್ತು ಆ ಅಪರಾಧಕ್ಕೆ ಎಷ್ಟು ದಂಡ ಎಂಬುದನ್ನು ಈ ಕಲಮು ಹೇಳುತ್ತದೆ.

ಸಹಕಾರಿ ಸಂಘವಲ್ಲದ ವ್ಯಕ್ತಿ ಇರಬೇಕು. ಅವನು ವ್ಯವಹಾರ ಮಾಡುತ್ತಿರಬೇಕು. ವ್ಯವಹಾರವನ್ನು ಒಂದು ಹೆಸರಿನಲ್ಲಿ ಮಾಡುತ್ತಿರಬೇಕು ಆ ಹೆಸರಿನಲ್ಲಿ 'ಕೋ-ಆಪರೇಟಿವ್' ಎಂದು ಇಲ್ಲವೆ ಅದಕ್ಕೆ ಸಮಾನವಾದ ಭಾರತೀಯ ಭಾಷೆಯಲ್ಲಿಯ ಪ್ರತಿಶಬ್ದವನ್ನು ಬಳಸಿಕೊಂಡಿರಬೇಕು. ಹೀಗೆ ಅಂತಹ ಹೆಸರನ್ನು ಉಪಯೋಗಿಸಲು ರಾಜ್ಯ ಸರಕಾರದ ಪರವಾನಗಿ ಇರದೇ ಇರಬೇಕು ಅಂದರೆ ಆ ವ್ಯಕ್ತಿಯು ಅಪರಾಧ ಮಾಡಿದಂತೆ. ಅದಕ್ಕೆ ದಂಡದ ಶಿಕ್ಷೆ ಇದೆ. ಅದು ಎರಡು ನೂರು ರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದ ಶಿಕ್ಷೆ

ಕಲಮು ೩೨ ಇಲ್ಲವೆ ೩೩ ರ ಪ್ರಕಾರ ಆಸ್ತಿಯ ಮೇಲೆ ಸಹಕಾರಿ ಸಂಘದ ಪ್ರಥಮ ಅಧಿಕಾರ ಭಾರ ಇರಬೇಕು. ಅಂತಹ ಆಸ್ತಿಯನ್ನು ವಿಲೇವಾಟ ಮಾಡಿದ ಪ್ರಸಂಗ ಬಂದಿರಬೇಕು. ಈ ವಿಲೇವಾಟ ಮಾಡುವುವನ್ನು ಆ ಸಂಘದ ಯಾವುದೇ ಸದಸ್ಯ, ಹಿಂದಿನ ಸದಸ್ಯ ಇಲ್ಲವೆ ಮರಣ ಹೊಂದಿದ ಸದಸ್ಯನ ನಾಮಕರಣದ ವ್ಯಕ್ತಿ, ವಾರಸಾದಾರ, ಇಲ್ಲವೆ ಕಾಯಿದೇಶೀರ ಪ್ರತಿನಿಧಿ ಇರಬೇಕು. ವಿಲೇವಾಟ ಮಾಡುವದಾಗಲೀ ಇಲ್ಲವೆ ಸಂಘದ ಮಾಗಣಿಗೆ ವ್ಯತ್ಯಯ ಬರುವಂತಹ ಯಾವೇ ಕೃತಿ ಮಾಡಿರಬೇಕು. ಅಂದರೆ ಅದು ಅಪರಾಧವಾಗುವುದು. ಆ ಅಪರಾಧ ಮಾಡಿದವನಿಗೆ ದಂಡದ ಶಿಕ್ಷೆ. ೨೦೦ ರೂಪಾಯಿಗಳ ವರೆಗೆ ವ್ಯಾಪಿಸುವಷ್ಟು ದಂಡದ ಶಿಕ್ಷೆ ಅದು.

ಈ ಕಾಯಿದೆಯನ್ವಯವಾಗಿ ಸಮನ್ಸ, ಬೇಡಿಕೆ, ಇಲ್ಲವೆ ಲೇಖೀಹುಕುಮು ಹೊರಡಿಸಲ್ಪಟ್ಟ, ಮಾಹಿತಿ-ವಿವರ ಪತ್ರಿಕೆಗಳನ್ನು ಕೇಳಲ್ಪಟ್ಟಿರುವುದು. ಆಗ ಸಹಕಾರಿ ಸಂಘ, ಅದರ ಅಧಿಕಾರಿ, ಇಲ್ಲವೆ ಸದಸ್ಯನು ಬುದ್ಧಿಪೂರ್ವಕವಾಗಿ ತಪ್ಪು ಮಾಹಿತಿಯನ್ನು ಇಲ್ಲವೆ ವಿವರ ಪತ್ರಿಕೆಯನ್ನು ಕೊಟ್ಟರೆ ಅದು ಅಪರಾಧವಾಗುವುದು. ಬುದ್ಧಿಪೂರ್ವಕವಾಗಿ ಅಂದರೆ, ತಪ್ಪು ಎಂದು ಗೊತ್ತಿದ್ದು ತಪ್ಪು ಮಾಹಿತಿಯನ್ನು ಸರಿ ಎಂಬುವ ಹಾಗೆ ಕೊಡುವುದು ಬುದ್ಧಿಪೂರ್ವಕವಾಗಿ ತಪ್ಪು ಮಾಹಿತಿಯನ್ನು ಕೊಟ್ಟಂತೆ. ಅದು ಅಪರಾಧವಾಗುವುದು. ಈ ಕಾಯಿದೆಯನ್ವಯವಾಗಿ ಕಳಿಸಿದ ಸಮನ್ಸ, ಬೇಡಿಕೆ ಇಲ್ಲವೆ ಲೇಖೀಹುಕುಮು ಇವುಗಳ ಬಗ್ಗೆ ಯಾವ ಯೋಗ್ಯ ಕಾರಣವಿಲ್ಲದೆ ಅವಿಧೇಯತನ ತೋರಿದರೆ ಅದು ಅಪರಾಧವಾಗುವುದು. ಕೊಡಬೇಕಾಗಿದ್ದ ಮಾಹಿತಿಯನ್ನು ಬುದ್ಧಿಪೂರ್ವಕವಾಗಿ ಕೊಡದೆ ಇದ್ದರೆ ಅದು

ಅಪರಾಧವಾಗುವುದು. ದಾಖಲೆ ಪತ್ರಗಳನ್ನು, ಆಸ್ತಿಯನ್ನು ಇನ್ಸ್ಪೆಕ್ಟರ ಸ್ವಾಧೀನ ಮಾಡಲು ಹೇಳಿದಾಗ 'ಬುದ್ಧಿಪೂರ್ವಕವಾಗಿ ಅವುಗಳನ್ನು ಸ್ವಾಧೀನ ಮಾಡದೇ ಇದ್ದರೆ ಅದು ಅಪರಾಧವಾಗುವುದು ಇವರಲ್ಲಿ ಹೇಳಿದ ಯಾವ ಅಪರಾಧ ಮಾಡಲ್ಪಟ್ಟರೂ ಅದಕ್ಕೆ ದಂಡ ಇದೆ. ಅದು ಎರಡುಸಾವಿರರೂಪಾಯಿಗಳ ವರೆಗೆ ವ್ಯಾಪಿಸಬಹುದಾದಷ್ಟು ದಂಡದ ಶಿಕ್ಷೆ. ಇದು ಘೋರವಾದ ಅಪರಾಧವೆಂಬುದು ಅದರ ದಂಡದ ಗಾತ್ರದಿಂದಲೇ ತಿಳಿವುದು.

ಕಲಮು ೩೪ ರಲ್ಲಿ ಮಾಲಕರು ತಮ್ಮ ನೌಕರರ ಸಂಬಳದಲ್ಲಿ ಕಡಿತಮಾಡಿ ಅದನ್ನು ಸಹಕಾರಿ ಸಂಘದ ಮಾಗಣಿಯನ್ನು ಕೊಡುವುದಕ್ಕಾಗಿ ಉಪಯೋಗಿಸಿ ಕೊಳ್ಳುವ ವ್ಯವಸ್ಥೆ ಇದೆ. ಈ ವ್ಯವಸ್ಥೆಯು ಒಂದು ಕರಾರುಪತ್ರದ ಮೂಲಕ ಉಂಟಾಗುವುದು ಹೀಗೆ ಕರಾರು ಒಪ್ಪಿಕೊಂಡು ಯಾವುದೇ ಮಾಲಕನು ಹಾಗೆ ಕಡಿತ ಮಾಡಲು ಯೋಗ್ಯ ಕಾರಣವಿಲ್ಲದೆ ತಪ್ಪಿದರೆ, ಅದು ಅಪರಾಧವಾಗುವುದು. ಅದರಂತೆ, ಕಡಿತ ಮಾಡಿ, ಕಡಿತಮಾಡಿದ ನಂತರ ಆ ಕಲಮಿನಲ್ಲಿ ಹೇಳಿದ ಪ್ರಕಾರ ಹದಿನಾಲ್ಕು ದಿವಸಗಳಲ್ಲಿ ಅದನ್ನು ಸಂಘಕ್ಕೆ ಸಲ್ಲಿಸದಿದ್ದರೆ ಅದೂ ಅಪರಾಧವಾಗುವುದು. ಈ ಅಪರಾಧಗಳ ಬಗ್ಗೆ ಆಗ ಜಾರಿಯಲ್ಲಿರುವ ಬೇರೆ ಯಾವುದೇ ಕಾಯಿದೆಯಲ್ಲಿ ಹೇಳಿದ ಇತರ ಉಪಾಯುಗಳಿಗೆ ವ್ಯತ್ಯಯ ಬರದಂತೆ ಈ ಕಲಮಿನನ್ವಯವಾಗಿ ದಂಡದ ಶಿಕ್ಷೆ ವಿಧಿಸಬಹುದು. ಈ ದಂಡದ ಶಿಕ್ಷೆಯು ಎರಡುಸಾವಿರ ರೂಪಾಯಿಗಳ ವರೆಗೆ ವ್ಯಾಪಿಸುವಷ್ಟು ಇದೆ ಎಂಬುದನ್ನು ಅರಿಯಬೇಕು.

ಸಹಕಾರಿ ಸಂಘ, ಸಂಘದ ಪ್ರತಿಯೊಬ್ಬ ಅಧಿಕಾರಿ, ಇಲ್ಲವೆ ಸಂಘದ ಕಮಿಟಿಯ ಸದಸ್ಯನಿಗೆ ಕೆಲವೊಂದು ಹೊಣೆಗಾರಿಕೆಗಳು ಕೆಲವೊಂದು ಕಲಮುಗಳ ಪ್ರಕಾರ ಉಂಟಾಗುವುವು. ಆ ಕಲಮುಗಳ ಪ್ರಕಾರ ಮಾಡಬೇಕಾದ ಕರ್ತವ್ಯಗಳು ಮಾಡಲು ತಪ್ಪಿದರೆ, ಅದು ಅಪರಾಧವಾಗುವುದು. ಆ ಕಲಮುಗಳು ಯಾವು ?

ಕಲಮು ೧೬ ರ ಉಪಕಲಮು (೨) : ಸಹಕಾರಿ ಸಂಘವು ಯಾವುದಾದರೂ ವ್ಯಕ್ತಿಗೆ ಸದಸ್ಯತ್ವಕ್ಕೆ ಪ್ರವೇಶವನ್ನು ನಿರಾಕರಿಸಿದ್ದರೆ, ಆ ಸಂಗತಿಯನ್ನು ಆ ನಿರ್ಣಯದ ತಾರೀಖಿನಿಂದ ಏಳು ದಿವಸಗಳಲ್ಲಿ ಆ ವ್ಯಕ್ತಿಗೆ ತಿಳಿಸಬೇಕು. ಹಾಗೆ ತಿಳಿಸದಿದ್ದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦ ರೂಪಾಯಿಗಳ ವರೆಗೆ ದಂಡ.

ಕಲಮು ೨೪ ರ ಉಪಕಲಮು (೧) ರ ವಾಕ್ಯಾವಳಿ (ಬ) ದ ಉಪ ವಾಕ್ಯಾವಳಿ ii : ಮರಣ ಹೊಂದಿದ ಸದಸ್ಯನ ಶೇರು ಇಲ್ಲವೆ ಹಿತಾಸಕ್ತಿಯು ೫೦೦/= ರೂಪಾಯಿಗಳಿಗಿಂತ ಹೆಚ್ಚು ಆಗಿರುವಾಗ ಅದನ್ನು ಹಸ್ತಾಂತರಿಸಬೇಕಾದರೆ ವಾರಸಾ ಸರ್ಟಿಫಿಕೇಟು ಬೇಕು. ಅದು ಇಲ್ಲದೆ ಹಸ್ತಾಂತರಿಸುವುದು ಅಪರಾಧ. ಅದಕ್ಕೆ ೨೦೦/= ರೂಪಾಯಿ ವರೆಗೆ ದಂಡ.

ಕಲಮು ೨೮ ರ ಉಪಕಲಮು (೧) ; ವಿಶೇಷ ಸಾಧಾರಣ ಸಭೆಯನ್ನು ಕರೆಯಲು ತಪ್ಪಿದರೆ, ಅದು ಅಪರಾಧವಾಗುವುದು. ಅದಕ್ಕೆ ೨೦೦ ರೂಪಾಯಿ ವರೆಗೆ ದಂಡ.

ಕಲಮು ೫೬; ನಿಕ್ಕಿ ಲಾಭದ ಹೊರತು ಉಳಿದ ಹಣವನ್ನು ಸದಸ್ಯರಲ್ಲಿ ಹಂಚತಕ್ಕದ್ದಲ್ಲ. ಇದಕ್ಕೆ ತಪ್ಪಿದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦/= ರೂಪಾಯಿ ವರೆಗೆ ದಂಡ.

ಕಲಮು ೫೮; ನಿಧಿಗಳನ್ನು ಹೇಗೆ ತೊಡಗಿಸಬೇಕು ಎಂದು ಹೇಳಿದ್ದರ ವ್ಯತಿರಿಕ್ತವಾದ ನಡೆದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦/= ರೂಪಾಯಿ ವರೆಗೆ ದಂಡ.

ಕಲಮು ೫೯; ಸಾಲ ಪಡೆಯುವುದರ ಮೇಲೆ ನಿರ್ಬಂಧಗಳು ಹಾಕಲ್ಪಟ್ಟಿವೆ. ಅದಕ್ಕೆ ವಿರುದ್ಧವಾಗಿ ವರ್ತಿಸಿದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦/= ರೂಪಾಯಿಗಳ ವರೆಗೆ ದಂಡ.

ಕಲಮು ೬೦: ಸಾಲವನ್ನು ಕೊಡುವುದರ ಬಗ್ಗೆ ನಿರ್ಬಂಧಗಳು ಇವೆ. ಅವುಗಳ ವಿರುದ್ಧವಾಗಿ ವರ್ತಿಸಿಧರೆ ಅದು ಅಪರಾಧವಾಗುವುದು. ಅದಕ್ಕೆ ೨೦೦/= ರೂಪಾಯಿಗಳ ವರೆಗೆ ದಂಡ.

ಕಲಮು ೬೨; ಪ್ರಾವ್ಹಿಡೆಂಟ ಫಂಡಿನ ಬಗ್ಗೆ ಇದ್ದ ಆ ಬಗ್ಗೆ ಮಾಡಿದ ವ್ಯವಸ್ಥೆಯನ್ನು ಮೀರಿ ನಡೆದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦/= ರೂಪಾಯಿಗಳ ವರೆಗೆ ದಂಡ.

ಒಬ್ಬ ವ್ಯಕ್ತಿಯು ತಾನು ಸದಸ್ಯತ್ವಕ್ಕೆ ಅನರ್ಹನೆಂದು ಆಗಿರುವಾಗ ಕಲಮು ೧೭ ರನ್ವಯವಾಗಿ ಸದಸ್ಯತ್ವಕ್ಕೆ ಅರ್ಜಿ ಮಾಡುವುದು ಅಪರಾಧ ತನ್ನ ಅನರ್ಹತೆ ಗೊತ್ತಿದ್ದು ಸದಸ್ಯನಾಗುವುದು ಅಪರಾಧ. ಸದಸ್ಯತ್ವವು ಉಳಿಯದೆ ಇರುವಾಗ ಸದಸ್ಯನೆಂದು ಕೆಲಸ ಮಾಡುವುದು ಅಪರಾಧ. ಈ ಒಂದೊಂದೂ ಅಪರಾದಕ್ಕೆ ೨೦೦ ರೂಪಾಯಿ ವರೆಗೆ ದಂಡ.

ಕಲಮು ೧೯ ರ ವಿರುದ್ಧವಾಗಿ ಸದಸ್ಯನು ಅಧಿಕಾರ ನಡೆಸುವುದು ಅಪರಾಧ; ತಾನು ಸಲ್ಲಿಸಬೇಕಾಗಿದ್ದ ಹಣವನ್ನು ಸಲ್ಲಿಸುವ ತನಕ ಹಕ್ಕುಗಳನ್ನು ನಡೆಸತಕ್ಕದ್ದಲ್ಲ ಎಂದು ಆ ಕಲಮು ಹೇಳುತ್ತದೆ. ಅದಕ್ಕೆ ವಿರುದ್ಧವಾಗಿ ವರ್ತಿಸುವುದು ಅಪರಾಧ. ಅದಕ್ಕೆ ೨೦೦ ರೂಪಾಯಿಗಳ ವರೆಗೆ ದಂಡ.

ಕಲಮು ೮೭ ರ ಉಪಕಲಮು (೩) ರ ವಿರುದ್ಧ ವರ್ತಿಸುವುದು ಅಪರಾಧ. ಹಿಂದಿನ ಸಾಲದ ಬಗ್ಗೆ ಮಾಹಿತಿಯನ್ನು ಪಡೆಯಲು ಅಧಿಕಾರಿಯು ಬೇಡಿದಾಗ ಆ ಧನಕೋ ಮಾಹಿತಿ ಇಲ್ಲವೆ ದಾಖಲೆ ಪತ್ರಗಳನ್ನು ಸಾದರ ಪಡಿಸಲು ಬುದ್ಧಿಪೂರ್ವಕವಾಗಿ ತಪ್ಪಿದರೆ ಅದು ಅಪರಾಧವಾಗುವುದು. ಅದಕ್ಕೆ ೨೦೦ ರೂಪಾಯಿಗಳ ವರೆಗೆ ದಂಡ

ಕಲಮು ೯೭ ರ ಉಪಕಲಮಿನಲ್ಲಿ ಹೇಳಿದಂತೆ ಮಾಡದಿರುವುದು ಅಪರಾಧ. ಒತ್ತಿ ಹಾಕಿದವನು ಒತ್ತಿ ಹಾಕಿದ ಆಸ್ತಿಯನ್ನು ಐದು ವರುಷದ ಕಾಲಾವಧಿ ಮೀರಿ ಲಾವಣಿ ಕೊಟ್ಟರೆ ಅದು ಅಪರಾಧವಾಗುವುದು. ಅದಕ್ಕೆ ೨೦೦ ರೂಪಾಯಿಗಳ ವರೆಗೆ ದಂಡ.

ಈ ಕಲಮಿನಲ್ಲಿ ಹೇಳಿದ ಅಪರಾಧಗಳು ಶಿಕ್ಷಾಯೋಗ್ಯವಾದವುಗಳು. ಅಂದರೆ ಶಿಕ್ಷೆ ಮಾಡಿಸಬೇಕೋ ಬಾರದೊ ಎಂಬ ಬಗ್ಗೆ ಅಧಿಕಾರಿಗಳಿಗೆ ವಿವೇಕದ ನಿರ್ಣಯ ಕೊಟ್ಟಂತೆ ಇದೆ. ಖಟ್ಲೆ ಹಾಕಲಿಕ್ಕೇ ಬೇಕು ಎಂದು ಅಲ್ಲ; ಹಾಕಬೇಕೆಂದರೆ ಅನುಕೂಲತೆ ಇದೆ; ಅಪರಾಧಕ್ಕೆ ದಂಡನೆ ಇದೆ.

## ೧೧೦ ಕಂಪನಿಗಳಿಂದ ಅಪರಾಧಗಳು

(೧) ಕಲಮು ೧೦೯ ರ ಉಪಕಲಮು (೧) ರ ಇಲ್ಲವೆ ಉಪಕಲಮು (೪)ರ ಅನ್ವಯವಾಗಿ ಇಲ್ಲವೆ ಯಾವುದೇ ನಿಯಮದ ಅನ್ವಯವಾಗಿ ಕಂಪನಿಯಿಂದ ಅಪರಾಧವು ಮಾಡಲ್ಪಟ್ಟಿರುವಾಗ, ಅಪರಾಧ ಮಾಡಲ್ಪಟ್ಟ ಕಾಲದಲ್ಲಿ ಕಂಪನಿಯ ವ್ಯವಹಾರದ ನಡೆವಳಿಕೆಗಾಗಿ ಹೊಣೆಗಾರನಾಗಿದ್ದ ಹಾಗೂ ಅಧಿಕಾರ ವಹಿಸಿಕೊಂಡಿದ್ದ ಪ್ರತಿಯೊಬ್ಬ ವ್ಯಕ್ತಿಯು ಮತ್ತು ಕಂಪನಿಯು ಈ ಅಪರಾಧ ಮಾಡಿದೆಯೆಂದು ಗಣಿಸಲ್ಪಡಲಾಗುವುದು ಮತ್ತು ಅವರ ವಿರುದ್ಧ ಕ್ರಮ ಕೈಕೊಳ್ಳಲು ಅವರು ಪಾತ್ರರಾಗತಕ್ಕದ್ದು ಮತ್ತು ಅದರನುಸಾರವಾಗಿ ಶಿಕ್ಷೆಗೆ ಪಾತ್ರರಾಗತಕ್ಕದ್ದು.

ಆದರೆ, ಮೇಲೆ ಹೇಳಿದ ಉಪಕಲಮಿನಲ್ಲಿ ಇಲ್ಲವೆ ಯಾವುದೇ ನಿಯಮಗಳಲ್ಲಿ ತನ್ನ ತಿಳಿವಳಿಕೆ ಇಲ್ಲದೆ, ಅಪರಾಧವು ಮಾಡಲ್ಪಟ್ಟಿದೆಯೆಂದು ಇಲ್ಲವೆ ತಾನು ಅಂತಹ ಅಪರಾಧ ಮಾಡಲ್ಪಡುವುದನ್ನು ತಡೆಯಲು ಎಲ್ಲ ಯೋಗ್ಯ ದಕ್ಷತೆಯನ್ನು ವಹಿಸಿದನೆಂದು ಸಿದ್ಧಮಾಡಿಕೊಟ್ಟರೆ, ಈ ಉಪಕಲಮಿನಲ್ಲಿ ಹೇಳಿದ ಯಾವುದೊ ಅಂತಹ ವ್ಯಕ್ತಿಯನ್ನು ಯಾವುದೇ ಶಿಕ್ಷೆಗೆ ಪಾತ್ರನನ್ನಾಗಿ ಮಾಡತಕ್ಕದ್ದಲ್ಲ.

(೨) ಉಪಕಲಮು (೧) ರಲ್ಲಿ ಏನೇ ಹೇಳಲಾಗಿದ್ದರೂ ಕಲಮು ೧೦೯ ರ ಉಪಕಲಮು (೧) ಇಲ್ಲವೆ (೪) ರನ್ವಯವಾಗಿ ಇಲ್ಲವೆ ಯಾವುದೇ ನಿಯಮದನ್ವಯವಾಗಿ ಕಂಪನಿಯಿಂದ ಅಪರಾಧ ಮಾಡಲ್ಪಟ್ಟಿರುವಾಗಿ ಮತ್ತು ಕಂಪನಿಯ ಡಾಯರೆಕ್ಟರನ, ಮ್ಯಾನೇಜರನ, ಸೆಕ್ರೆಟರಿಯ ಇಲ್ಲವೆ ಇತರ ಅಧಿಕಾರಿಯ ಸಮ್ಮತಿಯಿಂದ ಇಲ್ಲವೆ ಸಂಗನಮತದಿಂದ ಮಾಡಲ್ಪಟ್ಟಿದೆಯೆಂದು ಇಲ್ಲವೆ ಅವನ ಯಾವುದೇ ಅಲಕ್ಷದ ಮೂಲಕವಾಗಿ ಆಗಿದೆಯೆಂದು ಸಿದ್ಧಮಾಡಿದಾಗ, ಅಂತಹ ಡಾಯರೆಕ್ಟರ, ಮ್ಯಾನೇಜರ, ಸೆಕ್ರೆಟರಿ, ಇಲ್ಲವೆ ಇತರ ಅಧಿಕಾರಿಯು ಕೂಡ ಆ ಅಪರಾಧವನ್ನು ಮಾಡಿದ್ದಾನೆಂದು ಗಣಿಸಲ್ಪಡಲಾಗುವುದು ಮತ್ತು ಅವನ ವಿರುದ್ಧ ಕ್ರಮ ಕೈಕೊಳ್ಳಲು ಪಾತ್ರನಾಗತಕ್ಕದ್ದು ಮತ್ತು ಅದರನುಸಾರವಾಗಿ ಶಿಕ್ಷೆಗೆ ಪಾತ್ರನಾಗತಕ್ಕದ್ದು.

**ವಿವರಣೆ:** ಈ ಕಲಮಿನ ಉದ್ದೇಶಗಳಿಗಾಗಿ—

(ಅ) ಕಂಪನಿ ಎಂದರೆ ಸಂಸ್ಥೀಕೃತ ಸಂಸ್ಥೆ ಮತ್ತು ಅದು ಫರ್ಮ್ ಇಲ್ಲವೆ ವ್ಯಕ್ತಿಗಳ ಇತರ ಸಂಘಗಳನ್ನು ಒಳಗೊಳ್ಳುವುದು.

(ಬ) ಡಾಯರೆಕ್ಟರ, ಎಂಬುದು ಫರ್ಮದ ಸಂಬಂಧವಾಗಿ ಉಪಯೋಗಿಸಲ್ಪಟ್ಟಾಗ ಆ ಫರ್ಮಿನ ಪಾಲುಗಾರ ಎಂದು ಅರ್ಥವಾಗುತ್ತದೆ.

**ವಿವೇಚನೆ**

ಕಂಪನಿಯಿಂದ ಮಾಡಲ್ಪಟ್ಟ ಅಪರಾಧಗಳ ಬಗ್ಗೆ ಈ ಕಲಮು ಇದೆ. ಕಂಪನಿಗಳೆಂದರೆ ಏನು ಎಂಬುದರ ಬಗ್ಗೆ ವಿವರಣೆ ಕೊಡಲಾಗಿದೆ. ಸಂಸ್ಥೀಕೃತ ಸಂಸ್ಥೆಯು ಕಂಪನಿ; ಪಾಲುಗಾರಿಕೆಯ ಫರ್ಮ ಕಂಪನಿ. ವ್ಯಕ್ತಿಗಳ ಸಂಘವು ಕಂಪನಿ. ಅಂದರೆ ಒಬ್ಬನಕ್ಕಿಂತ ಹೆಚ್ಚು ವ್ಯಕ್ತಿಗಳು ಕೂಡಿ ಕೆಲಸ ಮಾಡುವ ವ್ಯವಸ್ಥೆಯಿದ್ದು ಆ ವ್ಯಕ್ತಿಗಳನ್ನು ಬಿಟ್ಟು ಕಾಯಿದೇಶೀರ ಅಸ್ತಿತ್ವನ್ನು ಸಂಘವೆಂದು ಪಡೆದಿರುವ ಸಂಸ್ಥೆ, ಸಂಘ, ಫರ್ಮ್, ಇವೆಲ್ಲವೂ ಕಂಪನಿ. ಈ ಕಂಪನಿಗಳಿಂದ ಮಾಡಲ್ಪಟ್ಟ ಅಪರಾಧಗಳ ಬಗ್ಗೆ ಈ ಕಲಮಿನಲ್ಲಿ ಹೇಳಿದೆ. ಆ ಅಪರಾಧಗಳು ಯಾವು?

ಕಲಮು ೧೦೯ ರ ಉಪಕಲಮು (೧) ಇಲ್ಲವೆ (೪) ರನ್ವಯವಾಗಿ ಮಾಡಲ್ಪಟ್ಟ ಅಪರಾಧಗಳು. ಇಲ್ಲವೆ ಯಾವುದೇ ನಿಯಮದ ಅನ್ವಯವಾಗಿ ಮಾಡಲ್ಪಟ್ಟ ಅಪರಾಧಗಳು. ಕಲಮು ೧೦೯ ರ ಉಪಕಲಮು (೧) ರಲ್ಲಿ "ಕೋಆಪರೇಟಿವ್" ಎಂಬ ಹೆಸರನ್ನು ತಮ್ಮ ವ್ಯವಹಾರದ ಹೆಸರಿನಲ್ಲಿ ಸರಕಾರದ ಪರವಾನಗಿ, ಇಲ್ಲವೆ ಸಮಾವೇಶ ಮಾಡಿಕೊಂಡಿದ್ದರೆ ಆಗುವ ಅಪರಾಧ; ಉಪಕಲಮು (೪)ರಲ್ಲಿ ಮಾಲಕರು ತಮ್ಮ ನೌಕರರ ಸಂಬಳದಲ್ಲಿ ಕಡಿತ ಮಾಡುವ ಬಗ್ಗೆ, ಮಾಡಿದ ಕಡಿತದ ಹಣವನ್ನು ಹದಿನಾಲ್ಕು ದಿವಸಗಳಲ್ಲಿ ಸಹಕಾರಿ ಸಂಘಕ್ಕೆ ಸಲ್ಲಿಸುವ ಬಗ್ಗೆ ಉಂಟಾದ ಅಪರಾಧಗಳ ಬಗ್ಗೆ ಇದೆ. ನಿಯಮದ ಮೂಲಕ ಅಪರಾಧವಾಗವುದನ್ನು ಸದ್ಯಕ್ಕೆ ಹೇಳಲು ಬರುವುದಿಲ್ಲ. ನಿಯಮಗಳು ರೂಪುಗೊಂಡ ನಂತರ ಅವದೆ ಪ್ರಕಾರ ಆದ ಅಪರಾಧವು ಲಕ್ಷಿಸಲ್ಪಡಬೇಕು. ಹೀಗೆ ಕಂಪನಿಯು ಅಪರಾಧ ಮಾಡಿದರೆ, ಕಂಪನಿಯಂತೂ ಅಪರಾಧಿ. ಅಲ್ಲದೆ ಅಪರಾಧ ನಡೆದ ಕಾಲಕ್ಕೆ ಕಂಪನಿಯ ವ್ಯವಹಾವು ಯಾರ ಅಧಿಕಾರದಲ್ಲಿದ್ದಿತೋ ಇಲ್ಲವೆ ಅದರ ವ್ಯವಹಾರದ ನಡೆವಳಿಕೆಗೆ ಯಾರು ಹೊಣೆಗಾರರಾಗಿದ್ದರೋ ಅಂತಹ ಪ್ರತಿಯೊಬ್ಬ ವ್ಯಕ್ತಿಯೂ ಅಪರಾಧಿ. ಎಂದು ಗಣಿಸಲ್ಪಡಲಾಗುವುದು. ಅಂತಹರ ವಿರುದ್ಧ ಕ್ರಮ ನಡೆಸಲು ಅವರು ಪಾತ್ರರಾಗುವರು; ಶಿಕ್ಷೆಗೂ ಪಾತ್ರರಾಗುವರು.

ಆದರೆ, ಇದಕ್ಕೆ ಒಂದು ಅಪವಾದವಿದೆ. ಕಂಪನಿಯಲ್ಲಿ ಅನೇಕರು ಕಾರ್ಯ ಮಾಡುತ್ತಿರುತ್ತಾರೆ ಅಪರಾಧ ನಡೆದ ಕಾಲದಲ್ಲಿ ಅಪರಾದದ ಬಗ್ಗೆ ತನಗೆ ಯಾವ ತಿಳಿವಳಿಕೆಯು ಇದ್ದಿಲ್ಲವೆಂದೂ ಇಲ್ಲವೆ ನಡೆದ ಅಪರಾಧವನ್ನು ತಡೆಯಲು ತಾನು

ಯೋಗ್ಯ ದಕ್ಷತೆ ವಹಿಸಿದನೆಂದೂ ಯಾವ ವ್ಯಕ್ತಿಯು ಸಿದ್ಧಮಾಡುವನೋ ಅವನು ಈ ಉಪಕಲಮು ಇಲ್ಲವೆ ನಿಯಮಗಳಲ್ಲಿ ಹೇಳಿದೆ ಶಿಕ್ಷೆಗೆ ಪಾತ್ರನಾಗತಕ್ಕದ್ದಲ್ಲ. ಅಪರಾಧದ ಬಗ್ಗೆ ತಿಳಿವಳಿಕೆ ಇದ್ದರೆ, ಇಲ್ಲವೆ ಅಪರಾಧ ತಪ್ಪಿಸಲು ದಕ್ಷತೆ ವಹಿಸ ದಿದ್ದರೆ ಆವನು ಅಪರಾಧಿ ಎಂದು ಗಣಿಸಲ್ಪಡಲಾಗುವುದು. ತನಗೆ ತಿಳಿವಳಿಕೆ ಇದ್ದಿಲ್ಲವೆಂಬುದನ್ನು ಇಲ್ಲವೆ ಅಪರಾಧ ತಡೆಗಟ್ಟಲು ತಾನು ದಕ್ಷತೆ ವಹಿಸಿದನೆಂದು ಅವನು ಸಿದ್ಧಮಾಡಿಕೊಡುವುದು ಅವನ ಹೊಣೆ.

ಉಪಕಲಮು ೧ ರಲ್ಲಿ ಏನೇ ಹೇಳಿದ್ದರೂ ಮೇಲೆ ಹೇಳಿದ ಅಪರಾಧವು ಕಂಪನಿಯ ಡಾಯರೆಕ್ಟರ, ಮ್ಯಾನೇಜರ, ಸೆಕ್ರೆಟರಿ ಇಲ್ಲವೆ ಬೇರೆ ಅಧಿಕಾರಿಯ ಸಮ್ಮತಿಯಿಂದ ಇಲ್ಲವೆ ಸಂಗಸಮತದಿಂದ ನಡೆದಿದ್ದರೆ, ಇಲ್ಲವೆ ಅವನ ಅಲಕ್ಷ್ಯ ದಿಂದ ಆಗಿದೆಯೆಂದು ಕಂಡು ಬಂದರೆ, ಆ ಡಾಯರೆಕ್ಟರ, ಮ್ಯಾನೇಜರ, ಸೆಕ್ರೆಟರಿ, ಇಲ್ಲವೆ ಅಧಿಕಾರಿ ಅಪರಾಧಿಯೆಂದು ಗಣಿಸಲ್ಪಡಲಾಗುವುದು. ಅವನು ಶಿಕ್ಷೆಗೆ ಪಾತ್ರನಾಗುವನು.

ಪಾಲುಗಾರಿಕೆಯು ಫರ್ಮು ಇರುವಂತಹ ಸಂಸ್ಥೆ ಇದ್ದಾಗ ಡಾಯರೆಕ್ಟರ ಎಂದರೆ ಪಾಲುಗಾರ ಎಂದು ಅರ್ಥವಾಗುವುದೆಂದು ವಿವರಣೆ ಕೊಡಲಾಗಿದೆ. ಅಪರಾಧ ಮಾಡುವುದು ಕೃತಿಯಿಂದ ಆದುದು. ಅಪರಾಧವನ್ನು ತಪ್ಪಿಸುವುದನ್ನು ಬಿಡುವುದು ಆ ಅಕೃತಿಯಿಂದ ಆದ ಅಪರಾಧ. ಆಗುವುದಕ್ಕೆ ಒಪ್ಪಿಗೆ ಕೊಡುವುದು; ಸುಮ್ಮನೆ ಇದ್ದು ಅಪರಾಧವನ್ನು ಸಹಿಸುವುದು, ಅಲಕ್ಷ್ಯದಿಂದ ಆಗಗೊಡುವುದು ಇವೆಲ್ಲ ಅಪರಾಧ ಮಾಡಿದ ಹಾಗೆಯೇ ಎಂದು ಗಣಿಸಲ್ಪಡಲು ಯೋಗ್ಯ ಪ್ರಸಂಗ ಗಳಾಗುವುವು.

**೧೧೧ ಅಪರಾಧಗಳನ್ನು ಲಕ್ಷಿಸುವುದು.**

(೧) ಈ ಕಾಯಿದೆಯನ್ವಯವಾಗಿರುವ ಯಾವುದೇ ಅಪರಾಧವನ್ನು ಒಂದನೇವರ್ಗದ ಮ್ಯಾಜಿಸ್ಟ್ರೇಟನ ಕೋರ್ಟಿಗಿಂತ ಕಡಿಮೆ ದರ್ಜೆಯ ಯಾವುದೇ ನ್ಯಾಯಾಲಯವು ಚೌಕಶಿಮಾಡತಕ್ಕದ್ದಲ್ಲ.

(೨) ಈ ಕಾಯಿದೆಯನ್ವಯವಾಗಿರುವ ಯಾವುದೇ ಖಟ್ಲೆಯು ರಜಿಸ್ಟ್ರಾರನ ಪೂರ್ವಭಾವಿ ಪರವಾನಗಿ ಇಲ್ಲದೆ ದಾಖಲ ಮಾಡಲ್ಪಡತಕ್ಕದ್ದಲ್ಲ ಮತ್ತು ಆ ಪರವಾನಗಿಯು—

(i) ಸಂಬಧಪಟ್ಟ ವ್ಯಕ್ತಿಗೆ ತನ್ನ ವಾದವನ್ನು ಮಂಡಿಸಲು ಯೋಗ್ಯ ಅವಕಾಶ ಮಾಡಿಕೊಡದೆ ಕೊಡಲ್ಪಡತಕ್ಕದ್ದಲ್ಲ; ಮತ್ತು

(ii) ಸಂಬಂಧಪಟ್ಟ ವ್ಯಕ್ತಿಯು ಸದ್ಭಾವನೆಯಿಂದ ಕಾರ್ಯ ಮಾಡಿದ್ದಾ ನೆಂದು ರಜಿಸ್ಟ್ರಾರನಿಗೆ ಸಮಾಧಾನವಾದರೆ ಕೊಡಲ್ಪಡತಕ್ಕದ್ದಲ್ಲ.

27

**ವಿವೇಚನೆ**

ಯಾವ ನ್ಯಾಯಾಲಯದಲ್ಲಿ ಈ ಕಾಯಿದೆಯನ್ವಯವಾಗಿ ಆದ ಅಪರಾಧಗಳ ವಿಚಾರಣೆ ನಡೆಯಬೇಕೆಂಬ ಬಗ್ಗೆ ಇಲ್ಲಿ ಹೇಳಲಾಗಿದೆ. ಒಂದನೇ ವರ್ಗದ ಮ್ಯಾಜಿಸ್ಟ್ರೇಟರ ಕೋರ್ಟಿನಗಿಂತ ಕೆಳಗಿನ ದರ್ಜೆಯ ಯಾವುದೇ ನ್ಯಾಯಾಲಯದಲ್ಲಿ ಈ ಕಾಯಿದೆಯನ್ವಯವಾಗಿರುವ ಅಪರಾಧಗಳ ಚೌಕಶಿ ನಡೆಯತಕ್ಕದ್ದಲ್ಲ.

ಖಟ್ಲೆ ಹಾಕುವ ಮೊದಲು ರಜಿಸ್ಟ್ರಾರನ ಪರವಾನಗಿ ಅಗತ್ಯವಾಗಿದೆ. ಅವನ ಪೂರ್ವಭಾವಿಯಾದ ಪರವಾನಗಿ ಇಲ್ಲದೆ ಖಟ್ಲೆ ಹಾಕತಕ್ಕದ್ದಲ್ಲ. ಅವನು ಪರವಾನಗಿ ಕೊಡಬೇಕಾದರೆ ವಿಚಾರಿಸಿ ಕೊಡಬೇಕು. ಯಾವ ವ್ಯಕ್ತಿಯ ವಿರುದ್ಧ ಖಟ್ಲೆ ಹಾಕಲು ಪರವಾನಗಿ ಕೊಡುವದದೆಯೋ ಆ ವ್ಯಕ್ತಿಗೆ ತನ್ನ ವಾದವನ್ನು ಮಂಡಿಸಲು ತಾನು ಮಾಡಿದ ಕಾರ್ಯವು ಅಪರಾಧವಲ್ಲ ಎಂದು ಹೇಳಲು ಅವನಿಗೆ ಯೋಗ್ಯ ಅವಕಾಶ ಮಾಡಿಕೊಡಬೇಕು. ಹಾಗೆ ಅವಕಾಶ ಮಾಡಿಕೊಡದೆ ಪರವಾನಗಿ ಕೊಡತಕ್ಕದ್ದಲ್ಲ. ಅದರಂತೆ ಅಪರಾಧವೆಂದು ಕಂಡು ಬಂದ ಕಾರ್ಯವು ಆ ವ್ಯಕ್ತಿಯಿಂದ ಸದ್ಭಾವನೆಯಿಂದ ಮಾಡಲ್ಪಟ್ಟಿದೆಯೆಂದು ರಜಿಸ್ಟ್ರಾರನಿಗೆ ಮನವರಿಕೆಯಾದರೆ ಆಗ ಕೂಡ ರಜಿಸ್ಟ್ರಾರನು ಖಟ್ಲೆ ಹಾಕಲು ಪರವಾನಗಿ ಕೊಡತಕ್ಕದ್ದಲ್ಲ.

## ಪ್ರಕರಣ: ೧೫ ಇತರ

### ೧೧೨. ಸಹಕಾರ ಎಂಬ ಶಬ್ದದ ಪ್ರಯೋಗಕ್ಕೆ ಪ್ರತಿಬಂಧ

ಯಾವ ಹೆಸರಿನಲ್ಲಿ 'ಕೋಆಪರೇಟಿವ್ಹ' ಇಲ್ಲವೆ ಭಾರತೀಯ ಭಾಷೆಗಳಲ್ಲಿಯ ಅದಕ್ಕೆ ಸಮಾನವಾದ ಪ್ರತಿ ಶಬ್ದವು ಭಾಗವಾಗಿರುವುದೋ ಅಂತಹ ಯಾವುದೇ ಹೆಸರಿನಲ್ಲಿ ಇಲ್ಲವೆ ತಲೆಬರೆಹದ ಹೆಸರಿನಲ್ಲಿ ಸಹಕಾರಿ ಸಂಘವನ್ನು ಬಿಟ್ಟು ಬೇರೆ ಯಾವುದೇ ವ್ಯಕ್ತಿಯು ವ್ಯಾಪಾರ ನೆಲ್ಲವೆ ವ್ಯವಹಾರ ಮಾಡತಕ್ಕದ್ದಲ್ಲ.

ಆದರೆ, ೧೯೧೨ (ಕೇಂದ್ರ ಕಾಯಿದೆ ನಂ. ೨-೧೯೧೨) ರ ಸಹಕಾರಿ ಸಂಘಗಳ ಕಾಯಿದೆಯು ಜಾರಿಯಲ್ಲಿ ಬಂದ ತಾರೀಖಿಗೆ ಯಾವ ಹೆಸರಿನಲ್ಲಿ ಇಲ್ಲವೆ ತಲೆಬರೆಹದ ಹೆಸರಿನಲ್ಲಿ ವ್ಯವಹಾರ ಸಾಗಿಸುತ್ತಿದ್ದನೋ ಆ ಹೆಸರನ್ನು ಇಲ್ಲವೆ ತಲೆ ಬರೆಹದ ಹೆಸರನ್ನು ಉಪಯೋಗಿಸುವ ಯಾವುದೇ ವ್ಯಕ್ತಿಗೆ ಇಲ್ಲವೆ ಅವನಿಂದ ಹಿತಾಸಕ್ತಿಯನ್ನು ವಾರಸಾದಿಂದ ಪಡೆದ ವ್ಯಕ್ತಿಗೆ ಈ ಕಲಮಿನಲ್ಲಿ ಹೇಳಿದ ಯಾವುದೂ ಅನ್ವಯಿಸತಕ್ಕದ್ದಲ್ಲ.

**ವಿವೇಚನೆ**

ವ್ಯಾಪಾರ–ವ್ಯವಹಾರ ಮಾಡುವವರು ಒಂದು ಹೆಸರಿನಿಂದ ಮಾಡುತ್ತಾರೆ. ಆ ಹೆಸರಿನಲ್ಲಿ 'ಕೋ–ಆಪರೇಟಿವ್' ಎಂಬ ಶಬ್ದವನ್ನು ಇಲ್ಲವೆ ಭಾರತೀಯ ಭಾಷೆಯಲ್ಲಿ ಅದಕ್ಕೆ ಸಮಾನವಾದ ಪ್ರತಿಶಬ್ದವನ್ನು ಆ ವ್ಯಾಪಾರ ವ್ಯವಹಾರದ ಹೆಸ

ನಲ್ಲಿ ಸಹಕಾರಿ ಸಂಘದ ಹೊರತು ಬೇರೆ ಯಾರೂ ಉಪಯೋಗಿಸತಕ್ಕದ್ದಲ್ಲ. ಏಕೆಂದರೆ 'ಸಹಕಾರಿ' ಎಂಬ ಹೆಸರು ಇರುವುದು ಸಹಕಾರಿ ಸಂಘವೆಂದೂ, ಅದು ಸಹಕಾರಿ ಸಂಘಗಳ ಕಾಯಿದೆಯ ಅನ್ವಯವಾಗಿ ನೋಂದಾಯಿಸಲಾದ ಸಂಸ್ಥೆ ಎಂದೂ ಅರ್ಥ ಕೊಡುತ್ತದೆ. ಇಂತಹ ನೋಂದಾಯಿಸಿದ ಸಹಕಾರಿ ಸಂಘಕ್ಕೆ ಕಾಯಿದೆಯಿಂದ ಕೆಲವೊಂದು ರಕ್ಷಣೆಗಳು, ಆಶ್ವಾಸನಗಳು ಉಂಟಾಗುವುವು. ಸಾರ್ವಜನಿಕರು ಧೈರ್ಯವಾಗಿ ಇಂತಹ ಸಂಘಗಳೊಡನೆ ವ್ಯವಹಾರ ಮಾಡುವರು. ನೋಂದಾಯಿಸದೆ ಇರುವ ಯಾವುದೇ ವ್ಯವಹಾರದ ಹೆಸರಿನಲ್ಲಿ 'ಸಹಕಾರಿ' ಎಂಬ ಅರ್ಥದ ಶಬ್ದವು ಉಪಯೋಗಿಸಲ್ಪಟ್ಟರೆ ಸಾರ್ವಜನಿಕರಿಗೆ ತಪ್ಪು ಅಭಿಪ್ರಾಯನ್ನು ಕೊಟ್ಟಂತೆ ಆಗುವುದು. ಅವರು ಮೋಸಹೋಗುವ ಸಂಭವ ಇರುವುದು. ಆದ್ದರಿಂದ ಸಹಕಾರಿ ಸಂಘಗಳನ್ನು ಬಿಟ್ಟು ಬೇರೆ ಯಾರೂ ತಮ್ಮ ವ್ಯಾಪಾರ-ವ್ಯವಹಾರದ ಹೆಸರಿನಲ್ಲಿ ಸಹಕಾರಿ ಎಂಬ ಅರ್ಥದ ಹೆಸರನ್ನು ಬಳಸಬಾರದು ಎಂದು ಹೇಳಿದೆ. ಇಂಗ್ಲಿಷ ಶಬ್ದ ಕೋಆಪರೇಟಿವ್ ಎಂಬುದಾಗಲೀ ಭಾರತೀಯ ಭಾಷೆಗಳಲ್ಲಿಯ ಅದಕ್ಕೆ ಸಮಾನವಾದ ಪ್ರತಿ-ಶಬ್ದವನ್ನಾಗಲಿ ಬಳಸುವುದಕ್ಕೆ ಪ್ರತಿಬಂಧವಿದೆ. ಆದರೆ ಅಂತಹ ಅರ್ಥವುಳ್ಳಶಬ್ದವುಳ್ಳ ಹೆಸರಿನಲ್ಲಿ ೧೯೧೨ ರ ಸಹಕಾರಿ ಸಂಘಗಳಕಾಯಿದೆ ಜಾರಿಯಲ್ಲಿ ಬಂದ ತಾರೀಖಿಗೆ ಯಾರಾದರೂ ವ್ಯಾಪಾರ ಸಾಗಿಸುತ್ತಿದ್ದರೆ ಆ ವ್ಯಕ್ತಿಗೆ ಇಲ್ಲವೆ ಅವನ ಹಿತಾಸಕ್ತಿಯನ್ನು ವಾರಸಾದಿಂದ ಪಡೆದ ವ್ಯಕ್ತಿಗೆ ಈ ಪ್ರತಿಬಂಧವು ಅನ್ವಯಿಸುವುದಿಲ್ಲ.

**೧೧೩. ಸಹಕಾರಿ ಸಂಘದ ವಿಳಾಸ.**

ಯಾವ ವಿಳಾಸಕ್ಕೆ ಎಲ್ಲ ನೋಟೀಸುಗಳು ಇಲ್ಲವೆ ಪತ್ರಗಳು ಕಳಿಸಬಹುದೋ ಅಂತಹ ವಿಳಾಸವನ್ನು ನಿಯಮಗಳ ಅನುಸಾರವಾಗಿ ಪ್ರತಿಯೊಂದು ಸಹಕಾರಿ ಸಂಘವು ನೋಂದಾಯಿಸಿದ ವಿಳಾಸವನ್ನು ಪಡೆದಿರತಕ್ಕದ್ದು. ಮತ್ತು ಆ ವಿಳಾಸದಲ್ಲಿ ಏನಾದರೂ ಬದಲಾವಣೆ ಆದರೆ, ಬದಲಾವಣೆ ಆದ ತಾರೀಖಿನಿಂದ ಮುವ್ವತ್ತು ದಿವಸಗಳಲ್ಲಿ ಬದಲಾವಣೆಯ ನೋಟೀಸನ್ನು ಕಳಿಸತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘವು ಒಂದು ಸಂಸ್ಥೆ. ಅದರ ವಿಳಾಸವು ನಿಯಮಗಳ ಪ್ರಕಾರ ನೋಂದಾಯಿಸಲ್ಪಡತಕ್ಕದ್ದು. ಅಂದರೆ ಅದು ನಿಶ್ಚಿತಗೊಳಿಸಲ್ಪಟ್ಟ ಹಾಗೆ. ಹೀಗೆ ವಿಳಾಸವು ನಿಶ್ಚಿತಗೊಳಿಸಲ್ಪಟ್ಟರೆ ಆ ವಿಳಾಸಕ್ಕೆ ಎಲ್ಲ ನೋಟೀಸುಗಳು ಹಾಗೂ ಪತ್ರಗಳು ಕಳಿಸಲ್ಪಡುವುವು. ತನಗೆ ಮುಟ್ಟಿಲ್ಲವೆಂದು ಸಂಘವು ಹೇಳಲು ಬಾರದ ಹಾಗೆ ಇದು ವ್ಯವಸ್ಥೆ. ನೋಂದಾಯಿಸಿದ ವಿಳಾಸಕ್ಕೆ ನೋಟೀಸು ಇಲ್ಲವೆ ಪತ್ರಗಳು ಕಳಿಸಲ್ಪಟ್ಟರೆ ಅವು ಮುಟ್ಟಲಿಕ್ಕೇ ಬೇಕು. ನೋಟೀಸು ಮುಂತಾದವುಗಳನ್ನು ಕಳಿಸುವುದಕ್ಕೆ ಅನುಕೂಲವಾಗಬೇಕೆಂದು ಸಂಘಕ್ಕೆ ಒಂದು ನೋಂದಾಯಿಸಿದ

ವಿಳಾಸ ಇರತಕ್ಕದ್ದು. ಇದು ನಿಯಮಗಳ ಅನುಸಾರವಾಗಿ ನೋಂದಾಯಿಸಲ್ಪಡ ತಕ್ಕದ್ದು.

ಹೀಗೆ ನೋಂದಾಯಿಸಿದ ವಿಳಾಸದಲ್ಲಿ ಬದಲಾವಣೆ ಆದರೆ ಅದರ ಬಗ್ಗೆ ರಜಿಸ್ಟ್ರಾರನಿಗೆ ನೋಟೀಸು ಕೊಟ್ಟು ತಿಳಿಸಬೇಕು. ಬದಲಾವಣೆ ಆದ ತಾರೀಖಿನಿಂದ ಮುವತ್ತು ದಿವಸಗಳ ಒಳಗೆ ನೋಟೀಸು ಕೊಟ್ಟು ತಿಳಿಸತಕ್ಕದ್ದು.

**೧೧ಳ ಈ ಕಾಯಿದೆಯ, ನಿಯಮಗಳ ಹಾಗೂ ಪೋಟ ನಿಯಮ ಗಳ ಪ್ರತಿಯು ಪರಿಶೀಲನೆಗೆ ಮುಕ್ತವಾಗಿರಬೇಕು**

ಸಂಘದ ನೋಂದಾಯಿಸಿದ ವಿಳಾಸದ ಸ್ಥಳದಲ್ಲಿ ಎಲ್ಲ ಯೋಗ್ಯ ಸಮಯದಲ್ಲಿ ಯಾವ ಫೀಯಿಲ್ಲದೆ ಪರಿಶೀಲನೆ ಮಾಡಲು ಮುಕ್ತದ್ವಾರ ಇರುವಂತೆ ಪ್ರತಿಯೊಂದು ಸಹಕಾರಿ ಸಂಘವು ಈ ಕಾಯಿದೆಯ, ನಿಯಮಗಳ ಹಾಗೂ ಅದರ ಪೋಟ ನಿಯ ಮಗಳ ಪ್ರತಿಯನ್ನು ಇಡತಕ್ಕದ್ದು.

**ವಿವೇಚನೆ**

ಪ್ರತಿಯೊಂದು ಸಂಘವು ಈ ಕಾಯಿದೆಯ ಒಂದು ಪ್ರತಿಯನ್ನು, ನಿಯಮಗಳ ಒಂದು ಪ್ರತಿಯನ್ನು, ತನ್ನ ಪೋಟ ನಿಯಮಗಳ ಒಂದು ಪ್ರತಿಯನ್ನು ತನ್ನ ನೋಂದಾಯಿಸಿದ ವಿಳಾಸದ ಸ್ಥಳದಲ್ಲಿ ಇಡತಕ್ಕದ್ದು. ಅವುಗಳನ್ನು ಪರಿಶೀಲನೆ ಮಾಡಬೇಕೆಂದವನಿಗೆ ಮುಕ್ತದ್ವಾರ ಇರತಕ್ಕದ್ದು. ಆ ಬಗ್ಗೆ ಯಾವದೇ ಫೀ ಆಕಾರ ಮಾಡತಕ್ಕದ್ದಲ್ಲ. ಪೋಟ ನಿಯಮಗಳು ಆ ಸಂಘದ ವ್ಯವಹಾರದ ವ್ಯಾಪ್ತಿಯನ್ನು ತಿಳಿಸುವವು. ಈ ಕಾಯಿದೆ—ಹಾಗೂ ನಿಯಮಗಳು ಆ ವ್ಯವಹಾರಗಳ ಕಾಯಿದೆ ಬದ್ಧತೆಯ ಬಗ್ಗೆ ಮಾಹಿತಿ ಕೊಡುವವು; ಯಾರು ಆ ಸಂಘ ದೊಡನೆ ವ್ಯವಹಾರ ಮಾಡಬೇಕೆಂದಿರುವವರು ಅವರು ಆ ಸಂಘದ ವ್ಯವಹಾರ ವ್ಯಾಪ್ತಿಯನ್ನು ತಿಳಿಯಲು ಅನುಕೂಲವಾಗುವುದು. ಸಂಘದ ನೋಂ ದಾಯಿಸಿದ ಸ್ಥಳದಲ್ಲಿ ಇವನ್ನು ಇಡತಕ್ಕದ್ದು. ಮತ್ತು ಯಾರಾದರೂ ಪರಶೀಲನೆ ಮಾಡಬೇಕೆಂದವರೆ ಫೀ ಇಲ್ಲದೆ ಪರಿಶೀಲನೆ ಮಾಡಲು ಮುಕ್ತದ್ವಾರ ಇರತಕ್ಕದ್ದು.

**೧೧ಜ. ಈ ಕಾಯಿದೆಯ ಪ್ರಕಾರ ನೋಂದಾಯಿಸಲ್ಪಟ್ಟಿವೆಯೆಂದು ಗಣಿಸಲಾದ ಸಹಕಾರಿ ಸಂಘಗಳ ಸಂಬಂಧವಾಗಿ ಸಂಧಿ ಕಾಲದ ಶರತುಗಳು**

(೧) ಈ ಕಾಯಿದೆಯನ್ವಯವಾಗಿ ನೋಂದಾಯಿಸಲ್ಪಟ್ಟಿವೆ ಎಂದು ಗಣಿಸ ಲಾದ ಸಹಕಾರಿ ಸಂಘದ ಪೋಟನಿಯಮಗಳು ಇಂತಹ ಸಂಘದ ಹಿತದ ದೃಷ್ಟಿ ಯಿಂದ ಈ ವಿಷಯಗಳ (i) ಇಂತಹ ಸಂಘದ ಉದ್ದೇಶಗಳ; (ii) ಇಂತಹ ಸಂಘದ ಪ್ರಾದೇಶಿಕ ಅಧಿಕಾರ ಕ್ಷೇತ್ರದ; (iii) ಇಂತಹ ಸಂಘದಲ್ಲಿ ಯಾರು ಸದ ಸ್ಯರು ಆಗಲು ಶಕ್ಯವಿದೆಯೋ ಅಂತಹ ವ್ಯಕ್ತಿಗಳ ಇಲ್ಲವೆ (iv) ಈ ಕಾಯಿದೆಯ

ಇಲ್ಲವೆ ನಿಯಮಗಳ ಶರತುಗಳಿಗೆ ಹೊಂದಿಕೆಯಾಗುವಂತೆ ಅಂತಹ ಪೋಟನಿಯಮ ಗಳನ್ನು ಸರಿಪಡಿಸುವ ಸಂಬಂಧವಾಗಿ ತಿದ್ದುಪಡಿ ಮಾಡುವುದು ಆವಶ್ಯಕ ಇಲ್ಲವೆ ಇಷ್ಟವಾಗಿದೆಯೆಂದು ರಜಿಸ್ಟ್ರಾರನಿಗೆ ಕಂಡು ಬಂದರೆ, ನಿಯಮಗಳಿಂದ ಗೊತ್ತುಮಾಡಬಹುದಾದಂತಹ ರೀತಿಯಲ್ಲಿ ಸೇರಿಸಲ್ಪಟ್ಟ ಆ ಸಂಘದ ಸಾಮಾನ್ಯ ಸಭೆಯೆದುರು ಸೂಚಿತ ತಿದ್ದುಪಡಿಗಳನ್ನು ರಜಿಸ್ಟ್ರಾರನು ಮಂಡಿಸಬಹುದು

(೨) ಆ ಸಭೆಯಲ್ಲಿ ಹಾಜರ ಇದ್ದ ಹಾಗೂ ಮತದಾನ ಮಾಡಿದ ಸದಸ್ಯರ ಬಹುಮತದಿಂದ ಆ ತಿದ್ದುಪಡಿಗಳು ಮಾರ್ಪಾಟು ಸಹಿತವಾಗಿ ಇಲ್ಲವೆ ರಹಿತವಾಗಿ ಗೊತ್ತುವಳಿಗಳ ಮೂಲಕ ಮನ್ನಣೆ ಕೊಡಲ್ಪಟ್ಟರೆ, ಅದಕ್ಕೆ ರಜಿಸ್ಟ್ರಾರನು ಒಪ್ಪಿದರೆ, ಆ ತಿದ್ದುಪಡಿಗಳನ್ನು ರಜಿಸ್ಟ್ರಾರನು ನೋಂದಾಯಿಸತಕ್ಕದ್ದು.

(೩) ಉಪಕಲಮು (೨) ರನ್ವಯವಾಗಿ ಆ ತಿದ್ದುಪಡಿಗಳು ಒಪ್ಪಲ್ಪಡದಿದ್ದರೆ ಹಾಗೂ ನೋಂದಾಯಿಸಲ್ಪಡದಿದ್ದರೆ, ಆ ವಿಷಯವನ್ನು ರಜಿಸ್ಟ್ರಾರನು ರಾಜ್ಯ ಸರಕಾರಕ್ಕೆ ನಿವೇದಿಸತಕ್ಕದ್ದು.

(೪) ಉಪಕಲಮು (೩) ರನ್ವಯವಾಗಿರುವ ನಿವೇದನೆಯು ಮುಟ್ಟಿದ ನಂತರ ರಾಜ್ಯ ಸರಕಾರವು ಆ ಸಹಕಾರ ಸಂಘಕ್ಕೆ ತನ್ನ ವಾದವನ್ನು ಮಂಡಿಸಲು ಅವಕಾಶವನ್ನು ಮಾಡಿಕೊಟ್ಟನಂತರ ಮತ್ತು ತನಗೆ ಯೋಗ್ಯ ಕಂಡ ವಿಚಾರಣೆಯನ್ನು ನಡೆಸಿದ ಮೇಲೆ, ಪೋಟನಿಯಮಗಳಲ್ಲಿ ತಿದ್ದುಪಡಿಗಳು ಯಾವುದಾದರೂ ಇದ್ದರೆ ಆ ಬಗ್ಗೆ ನಿರ್ಣಯಿಸತಕ್ಕದ್ದು ಮತ್ತು ರಾಜ್ಯ ಸರಕಾರದ ನಿರ್ಣಯದ ಅನುಸಾರವಾಗಿ ರಜಿಸ್ಟ್ರಾರನು ಆ ತಿದ್ದುಪಡಿಗಳನ್ನು ನೋಂದಾಯಿಸತಕ್ಕದ್ದು

(೫) ಉಪಕಲಮು (೨) ಇಲ್ಲವೆ (೪) ರನ್ವಯವಾಗಿ ನೋಂದಾಯಿಸಲ್ಪಟ್ಟ ತಿದ್ದುಪಡಿಗಳ ಒಂದು ಒಂದು ಪ್ರತಿಯನ್ನು ತಾನು ಸಹಿಮಾಡಿದ ಸರ್ಟಿಫಿಕೇಟದೊಂದಿಗೆ ರಜಿಸ್ಟ್ರಾರನು ಆ ಸಂಘಕ್ಕೆ ಕಳಿಸಕತ್ತದ್ದು ಮತ್ತು ಇಂತಹ ಸರ್ಟಿಫಿಕೇಟು ತಿದ್ದುಪಡಿಗಳು ಯೋಗ್ಯವಾಗಿ ನೋಂದಾಯಿಸಲ್ಪಟ್ಟವೆ ಎಂಬ ಬಗ್ಗೆ ನಿರ್ಣಾಯಕ ಪುರಾವೆ ಆಗತಕ್ಕದ್ದು.

**ವಿವೇಚನೆ**

೧೯೫೯ ರ ಮೈಸೂರ ಸಹಕಾರಿ ಸಂಘಗಳ ಕಾಯಿದೆಯು ಖಾಸಾಗಿ ಜಾರಿಯಲ್ಲಿ ಬರುವುದಕಿಂತ ಮೊದಲು ಮೈಸೂರ ರಾಜ್ಯದಲ್ಲಿ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಸಹಕಾರಿ ಕಾಯಿದೆಗಳು ಜಾರಿಯಲ್ಲಿದುವುವು. ಅವು ಯಾವು ಎಂಬುವರ ವಿವರವು ಕಲಮು ೧೩೧ ರಲ್ಲಿ ಹೇಳಲಾಗಿದೆ. ಆ ಕಾಯಿದೆಗಳನ್ವಯ ನೋಂದಾಯಿಸಲ್ಪಟ್ಟ ಸಹಕಾರಿ ಸಂಘಗಳು ಈ ಮೈಸೂರ ಸಹಕಾರಿ ಸಂಘಗಳ ಕಾಯಿದೆ—೧೯೫೯ ರನ್ವಯವಾಗಿ ನೋಂದಾಯಿಸಲ್ಪಟ್ಟವೆ ಎಂದು ಗಣಿಸಲ್ಪಟ್ಟ ಸಂಘಗಳು ಎಂದು ಕಲಮು ೧೩೧ ಹೇಳುತ್ತದೆ. ಆ ಸಂಘಗಳ ಪೋಟ ನಿಯಮ

ಗಳು ಈ ಹೊಸ ಕಾಯಿದೆಗೆ ವಿಸಂಗತವಾಗದೆ ಇದ್ದರೆ ಅವೂ ಕೂಡ ಮನ್ನಿಸಲ್ಪಟ್ಟಂತೆ. ಆದರೆ ಹೊಸ ಕಾಯಿದೆಯು ಜಾರಿಯಲ್ಲಿ ಬರುವುದರಿಂದ ಹಳೆಯ ಕಾಯಿದೆಗಳ ಅನುಸಾರವಾಗಿ ರೂಪಿತವಾದ ಪೋಟ ನಿಯಮಗಳಲ್ಲಿ ವಿಸಂಗತಿಯಾಗುವುದುಂಟು. ಅಲ್ಲದೆ ಹೊಸ ಕಾಯಿದೆಗೆ ಹೊಂದುವಂತೆ ತಿದ್ದುಪಡಿ, ಮಾರ್ಪಾಟು ಆಗುವುದು ಅಗತ್ಯವಿರುವುದು. ಈ ತಿದ್ದುಪಡಿಗಳು ಸಂಘದ ಹಿತದ ದೃಷ್ಟಿಯಿಂದ ಮಾಡಬೇಕಾಗುವುದು. ಅವು ಈ ವಿಷಯಗಳಿಗೆ ಸಂಬಂಧಪಟ್ಟ ತಿದ್ದುಪಡಿಗಳು. ಸಂಘದ ಉದ್ದೇಶಗಳು, ಪ್ರಾದೇಶಿಕ ಅಧಿಕಾರ ಕ್ಷೇತ್ರ, ಸದಸ್ಯತ್ವಕ್ಕೆ ಪ್ರವೇಶ. ಹಾಗೂ ಈ ಕಾಯಿದೆಗೆ ಹೊಂದಿಕೊಳ್ಳಲು ಅನುಕೂಲತೆ ಮಾಡುವುದು. ಈ ವಿಷಯಗಳ ಬಗ್ಗೆ ಪೋಟ ನಿಯಮಗಳಲ್ಲಿ ತಿದ್ದುಪಡಿ ಮಾಡುವುದು ಆವಶ್ಯಕ ಹಾಗೂ ಇಷ್ಟವೆಂದು ರಜಿಸ್ಟ್ರಾರನಿಗೆ ಕಂಡು ಬಂದರೆ, ಅವನು ಆ ಸಂಘದ ಸಾಮಾನ್ಯಸಭೆಯನ್ನು ಕರೆಯಬೇಕು. ಹೇಗೆ ಕರೆಯಬೇಕು ಎಂಬುದನ್ನು ನಿಯಮಗಳು ಹೇಳುವುವು. ಆ ಸಭೆಯ ಮುಂದೆ ಸೂಚಿತ ತಿದ್ದುಪಡಿಗಳನ್ನು ರಜಿಸ್ಟ್ರಾರನು ಮಂಡಿಸಬಹುದು.

ಈ ಸೂಚಿತ ತಿದ್ದುಪಡಿಗಳು ಮಾರ್ಪಾಟುಗಳೊಂದಿಗೆ ಇಲ್ಲವೆ ಇಲ್ಲದೆಯೆ ಮನ್ನಣೆ ಪಡೆಯಬಹುದು. ಹೇಗೆ ಮನ್ನಣೆ ಪಡೆಯುವುವೊ ಆ ಬಗ್ಗೆ ಗೊತ್ತುವಳಿಗಳು ಪಾಸಾಗಬೇಕು. ಗೊತ್ತುವಳಿಗೆ ಆ ಸಭೆಯಲ್ಲಿ ಹಾಜರಿದ್ದು ಮತದಾನ ಮಾಡಿದ ಸದಸ್ಯರ ಬಹುಮತ ಇರಬೇಕು ಸಭೆಯು ಸ್ವೀಕರಿಸಿದ ತಿದ್ದುಪಡಿಗೆ ರಜಿಸ್ಟ್ರಾರನು ಒಪ್ಪಿದರೆ ಅವುಗಳನ್ನು ಅವನು ನೋಂದಾಯಿಸತಕ್ಕದ್ದು. ಆದರೆ ಹೀಗೆ ಸಾಮಾನ್ಯ ಸಭೆಯಲ್ಲಿ ಮಂಡಿಸಲಾದ ತಿದ್ದುಪಡಿಗೆ ಮನ್ನಣೆ ದೊರೆಯದಿದ್ದರೆ ಮತ್ತು ಅವು ನೋಂದಾಯಿಸಲ್ಪಡದಿದ್ದರೆ ಆ ವಿಷಯವನ್ನು ರಜಿಸ್ಟ್ರಾರನು ರಾಜ್ಯ ಸರಕಾರಕ್ಕೆ ನಿವೇದಿಸಬೇಕು. ನೋಂದಾಯಿಸಲ್ಪಡುವುದು ಒಂದು ಆವಶ್ಯಕ ಕ್ರಮವಿದೆ. ಸಭೆಯು ಮನ್ನಿಸಿದ್ದು ರಜಿಸ್ಟ್ರಾರನು ಒಪ್ಪದಿದ್ದರೆ ಆಗ ಅವು ನೋಂದಾಯಿಸಲ್ಪಡುವುದಿಲ್ಲ. ಈ ಪ್ರಸಂಗದಲ್ಲಿ ಅದರ ಬಗ್ಗೆ ರಾಜ್ಯ ಸರಕಾರಕ್ಕೆ ನಿವೇದಿಸಬೇಕು.

ಈ ನಿವೇದನೆಯು ರಾಜ್ಯ ಸರಕಾಕ್ಕೆ ಮುಟ್ಟಿದ ಮೇಲೆ -ರಾಜ್ಯ ಸರಕಾರವು ಆ ಸಂಬಧಪಟ್ಟ ಸಹಕಾರಿ ಸಂಘಕ್ಕೆ ಅದು ಮಂಡಿಸಬಹುದಾದ ವಾದಕ್ಕಾಗಿ ಅವಕಾಶ ಮಾಡಿಕೊಡಬೇಕು. ಇದಲ್ಲದೆ ತನಗೆ ಯೋಗ್ಯ ಕಂಡ ವಿಚಾರಣೆಯನ್ನು ರಾಜ್ಯ ಸರಕಾರವು ನಡೆಸಬೇಕು. ನಂತರ ಪೋಟನಿಯಮಗಳಲ್ಲಿ ಏನಾದರೂ ತಿದ್ದುಪಡಿ ಮಾಡುವುದು ಆವಶ್ಯಕವೆನ್ನಿಸಿದ್ದರೆ ಆ ಬಗ್ಗೆ ನಿರ್ಣಯ ತೆಗೆದುಕೊಳ್ಳಬೇಕು. ರಾಜ್ಯ ಸರಕಾರವು ತೆಗೆದುಕೊಂಡ ನಿರ್ಣಯದ ಅನುಸಾರವಾಗಿರುವ ತಿದ್ದುಪಡಿಗಳನ್ನು ರಜಿಸ್ಟ್ರಾರನು ನೋಂದಾಯಿಸತಕ್ಕದ್ದು.

ಸಾಮಾನ್ಯ ಸಭೆಯು ಮನ್ನಣೆ ಕೊಟ್ಟು ಅದಕ್ಕೆ ರಜಿಸ್ಟ್ರಾರನು ಒಪ್ಪಿದಾಗ ತಿದ್ದುಪಡಿಗಳು ನೋಂದಾಯಿಸಲ್ಪಡುವುವು. ರಾಜ್ಯ ಸರಕಾರಕ್ಕೆ ನಿವೇದನೆ ಮಾಡಿದ ನಂತರ ರಾಜ್ಯ ಸರಕಾರದ ನಿರ್ಣಯದ ಅನುಸಾರವಾಗಿ ತಿದ್ದುಪಡಿಗಳು ನೋಂದಾಯಿಸಲ್ಪಡುವುವು ಹೀಗೆ ಯಾವ ಪ್ರಕಾರದಿಂದ ನೋಂದಾಯಿಸಲ್ಪಟ್ಟರೂ ನೋಂದಾಯಿಸಲ್ಪಟ್ಟ ತಿದ್ದುಪಡಿಗಳ ಪ್ರತಿಯನ್ನು ಹಾಗೂ ಆ ಬಗ್ಗೆ ಒಂದು ಸರ್ಟಿಫಿಕೇಟನ್ನು ತನ್ನ ಸಹಿಯೊಂದಿಗೆ ಇದ್ದದ್ದನ್ನು ಆ ಸಂಘಕ್ಕೆ ರಜಿಸ್ಟ್ರಾರನು ಕಳಿಸಿ ಕೊಡಬೇಕು ಆ ತಿದ್ದುಪಡಿಗಳು ಯೋಗ್ಯವಾಗಿ ನೋಂದಾಯಿಸಲ್ಪಟ್ಟ ಬಗ್ಗೆ ಆ ಸರ್ಟಿಫಿಕೇಟು ನಿರ್ಣಾಯಕ ಪುರಾವೆ ಆಗತಕ್ಕದ್ದು. ಸರ್ಟಿಫಿಕೇಟು ದೊರೆತ ಮೇಲೆ ಅದಕ್ಕೂ ಮೊದಲಿನ ವಿಧಿ ಹಾಗೂ ಕ್ರಮ ಎಲ್ಲವೂ ಸರಿಯಾಗಿಯೇ ಆಗಿದೆಯೆಂಬ ಪುರಾವೆ ಇದ್ದಂತೆ;

## ೧೧೬. ಹುಕುಮುಗಳು ಉಚ್ಚರಿಸಲ್ಪಡಬೇಕು

ಈ ಕಾಯಿದೆಯನ್ವಯವಾಗಿ ರಜಿಸ್ಟ್ರಾರನಿಂದ ಇಲ್ಲವೆ ಯಾವುದೇ ಅಧಿಕಾರಿಯಿಂದ ಇಲ್ಲವೆ ಬೇರೆ ವ್ಯಕ್ತಿಯಿಂದ ಇಲ್ಲವೆ ಲಿಕ್ವಿಡೇಟರನಿಂದ ಮಾಡಲ್ಪಟ್ಟ ಇಲ್ಲವೆ ಕೊಟ್ಟ ಪ್ರತಿಯೊಂದು ಹುಕುಮು, ನಿರ್ಣಯ ಇಲ್ಲವೆ ಅವಾರ್ಡು ಆ ಪ್ರಕರಣವು ಕೊನೆಯ ಚೌಕಸಿಗಾಗಿ ಎಂದು ಗೊತ್ತುಮಾಡಲಾಗಿರುವುಯೋ ಅಂದು ಇಲ್ಲವೆ ಆ ಬಗ್ಗೆ ಪಕ್ಷಕಾರರಿಗೆ ಯೋಗ್ಯ ನೋಟೀಸು ಕೊಡಲ್ಪಟ್ಟ ಆ ಮುಂದಿನ ತಾರೀಖಿಗೆ ಉಚ್ಚರಿಸಲ್ಪಡಬೇಕು.

**ವಿವೇಚನೆ**

ಈ ಕಾಯಿದೆಯನ್ವಯವಾಗಿ ರಜಿಸ್ಟ್ರಾರನು ಇಲ್ಲವೆ ಯಾವುದೇ ಅಧಿಕಾರಿಯು ಇಲ್ಲವೆ ಬೇರೆ ವ್ಯಕ್ತಿಯು ಇಲ್ಲವೆ ಲಿಕ್ವಿಡೇಟರನು ಹುಕುಮು ಮಾಡುವನು, ನಿರ್ಣಯ ಕೊಡುವನು, ಅವಾರ್ಡು ಮಾಡುವನು ಈ ಹುಕುಮು, ನಿರ್ಣಯ ಅವಾರ್ಡು ಎಂದು ಹೇಳಲ್ಪಡಬೇಕು? ಆ ಪ್ರಕರ್ಣವನ್ನು ಕೊನೆಯ ಚೌಕಸಿಗಾಗಿ ಎಂದು ಯಾವ ದಿವಸ ನೇಮಿಸಿರುವುದೋ ಮತ್ತು ಕೊನೆಯ ಚೌಕಸಿಯು ಆಗುವುದೋ ಅವೇ ದಿನ ಹುಕುಮು ಉಚ್ಚರಿಸಲ್ಪಡಬೇಕು, ಅಂದರೆ ಅಂದು ಪಕ್ಷಕಾರರು ಸಮಕ್ಷಮ ಇರುವರು. ಆದರೆ ಅಂದೇ ಹುಕುಮು ಉಚ್ಚರಿಸಲ್ಪಡಲು ಸಾಧ್ಯವಿದ್ದಿಲ್ಲವಾದರೆ ಮುಂದೆ ಮತ್ತೊಂದು ತಾರೀಖಿಗೆ ನೇಮಿಸಬೇಕು. ಹಾಗೆ ನೇಮಿಸಿದ ತಾರೀಖಿನ ನೋಟೀಸು ಪಕ್ಷಕಾರರಿಗೆ ಕೊಡಬೇಕು. ನಂತರ ಹಾಗೆ ಗೊತ್ತು ಮಾಡಿದ ದಿವಸ ಹುಕುಮು ಉಚ್ಚರಿಸಲ್ಪಡಬೇಕು. ಅಂದರೆ ಹುಕುಮನ್ನು ಓದಿ ಹೇಳಬೇಕು ಎಂದು ಅರ್ಥ. ಓದಿ ಹೇಳಬೇಕಾದರೆ ಹುಕುಮು ಪೂರ್ತಿ ಬರೆದು ಸಿದ್ಧವಾಗಿರಬೇಕು. ಅದಕ್ಕೆ ಹೀಗೆ ಹೇಳಲಾಗಿದೆ.

## ೧೧೭. ದಿವಾಣಿ ನ್ಯಾಯಾಲಯದ ಅಧಿಕಾರಗಳು

(೧) ಈ ಕಾಯಿದೆಯಿಂದ ಇಲ್ಲವೆ ಈ ಕಾಯಿದೆಯನ್ವಯವಾಗಿ ದಯಪಾಲಿಸಲ್ಪಟ್ಟ ಕಾರ್ಯಗಳನ್ನು ನಿರ್ವಹಿಸುವಾಗ ಟ್ರಿಬ್ಯೂನಲವು, ರಜಿಸ್ಟ್ರಾರನು, ಮಧ್ಯ

ಸ್ಥಿಕೆಗಾರನು, ಇಲ್ಲವೆ ತಂಟೆಯ ನಿರ್ಣಯವನ್ನು ಮಾಡುವ ಬೇರೆ ಯಾವುದೇ ವ್ಯಕ್ತಿಯು ಮತ್ತು ಸಹಕಾರಿ ಸಂಘದ ಲಿಕ್ವಿಡೇಟರನು, ೧೯೦೮ ( ಕೇಂದ್ರ ಕಾಯಿದೆ ನಂ. ೫ ೧೯೦೮ ) ರ ಸಿವ್ಹಿಲ ಪ್ರೋಸೀಜರ ಕೋಡದನ್ವಯವಾಗಿ ದಾವೆಯನ್ನು ಚೌಕಶಿ ಮಾಡುವಾಗ ದಿವಾಣಿ ನ್ಯಾಯಾಲಯಕ್ಕೆ ಇರುವ ಎಲ್ಲ ಅಧಿಕಾರಗಳನ್ನು ಈ ಕೆಳಗಿನ ವಿಷಯಗಳ ಸಂಬಂಧವಾಗಿ ಪಡೆದಿರತಕ್ಕದ್ದು. ಅವು ಯಾವುವೆಂದರೆ—

(ಅ) ಯಾವುದೇ ವ್ಯಕ್ತಿಯನ್ನು ಸಮನುಮಾಡಿ ಕರೆಸುವುದು ಹಾಗೂ ಅವನು ಹಾಜರಿರುವ ಹಾಗೆ ಮಾಡುವುದು ಮತ್ತು ಪ್ರತಿಜ್ಞೆಮಾಡಿಸಿ ಅವನ ಪರೀಕ್ಷಣ ಮಾಡುವುದು;

(ಬ) ಯಾವುದೇ ದಾಖಲೆ ಪತ್ರವನ್ನು ಶೋಧಿಸಲು ಹಚ್ಚುವುದು ಹಾಗೂ ಹಾಜರು ಪಡಿಸಲು ಹಚ್ಚುವುದು;

(ಕ) ಅಫಿಡವೇಟನಿಂದ ಸಂಗತಿಗಳನ್ನು ಸಾಬೀತು ಮಾಡುವುದು;

(ಡ) ಸಾಕ್ಷಿಗಳ ಪರೀಕ್ಷಣಕ್ಕಾಗಿ ಕಮಿಶನುಗಳನ್ನು ನೇಮಿಸುವುದು.

(೨) ಯಾವುದೇ ಅಫಿಡವೇಟದ ಸಂದರ್ಭದಲ್ಲಿ ಟ್ರಿಬ್ಯೂನಲನಿಂದ ನೇಮಕವಾದ ಯಾವುದೇ ಅಧಿಕಾರಿಯು, ರಜಿಸ್ಟ್ರಾರನು, ಮಧ್ಯಸ್ಥಿಕೆಗಾರನು, ಇಲ್ಲವೆ ತಂಟೆಯನ್ನು ನಿರ್ಣಯಿಸುವ ಬೇರೆ ಯಾವುದೇ ವ್ಯಕ್ತಿಯು ಇಲ್ಲವೆ ಲಿಕ್ವಿಡೇಟರನು ಸಂದರ್ಭಾನುಸಾರವಾಗಿ ಈ ಸಂಬಂಧದಲ್ಲಿ ಹೇಳಿಕೆ ಕೊಡುವವನಿಗೆ ಪ್ರತಿಜ್ಞೆಯನ್ನು ಮಾಡಿಸಬಹುದು.

**ವಿವೇಚನೆ**

ಈ ಕಾಯಿದೆಯು ಕೆಲವೊಂದು ಕಾರ್ಯಗಳನ್ನು ಮಾಡಲು ಬೇರೆ ಬೇರೆ ಅಧಿಕಾರಿಗಳಿಗೆ ಇಲ್ಲವೆ ವ್ಯಕ್ತಿಗಳಿಗೆ ಅಧಿಕಾರ ಕೊಟ್ಟಿರುವುದು. ಆ ಅಧಿಕಾರಿ ಇಲ್ಲವೆ ವ್ಯಕ್ತಿಗಳು ಯಾರೆಂದರೆ ಟ್ರಿಬ್ಯೂನಲವು, ರಜಿಸ್ಟ್ರಾರನು, ಮಧ್ಯಸ್ಥಿಕೆಗಾರನು, ಲಿಕ್ವಿಡೇಟರನು, ತಂಟೆ ನಿರ್ಣಯ ಮಾಡುವ ವ್ಯಕ್ತಿಯು. ಇವರು ತಮ್ಮ ಮುಂದೆ ಬಂದ ಪ್ರಕರಣಗಳನ್ನು ಯಾವ ವಿಧಾನದಿಂದ ನಿರ್ಣಯ ಮಾಡಬೇಕು? ಸಿವ್ಹಿಲ ಪ್ರೋಸೀಜರ ಕೋಡದ ಅನ್ವಯವಾಗಿ ದಾವೆಯನ್ನು ಚೌಕಶಿ ಮಾಡುವಾಗ ದಿವಾಣಿ ನ್ಯಾಯಾಲಯವು ಯಾವ ವಿಧಾನವನ್ನು ಅನುಸರಿಸುವುದೋ ಆ ವಿಧಾನವನ್ನು ಅನುಸರಿಸಬೇಕು. ಈ ಕೆಳಗೆ ಕಾಣಿಸಿದ ವಿಷಯಗಳ ಬಗ್ಗೆ ರಜಿಸ್ಟ್ರಾರ, ಟ್ರಿಬ್ಯೂನಲ, ಮಧ್ಯಸ್ಥಿಕೆಗಾರ, ಲಿಕ್ವಿಡೇಟರ ಇವರಿಗೆ ದಿವಾಣಿ ನ್ಯಾಯಾಲಯದ ಎಲ್ಲ ಅಧಿಕಾರಗಳು ಇರತಕ್ಕದ್ದು.

ಯಾವ ವಿಷಯಗಳ ಬಗ್ಗೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಸಮನ್ಸ ಕಳಿಸಿ ಕರೆಸುವುದು; ಹಾಜರ ಇರಲು ಹಚ್ಚುವುದು; ಪ್ರತಿಜ್ಞೆ ಮಾಡಿಸಿ ಪರೀಕ್ಷಣ ಮಾಡುವುದು; ಕಾಗದ-ಪತ್ರಗಳನ್ನು ಹಾಜರ ಮಾಡಲು ಹಚ್ಚುವುದು;

ಅಫೀಡವೇಟುಗಳ ಮೂಲಕ ಸಂಗತಿಗಳನ್ನು ಸಿದ್ಧಮಾಡಿಸುವುದು; ಸಾಕ್ಷಿಗಳನ್ನು ಕಮಿಶನದ ಮೇಲೆ ಪರೀಕ್ಷಣ ಮಾಡಿಸುವುದು. ಈ ಎಲ್ಲ ಅಧಿಕಾರಗಳು ಸಾಮಾನ್ಯವಾಗಿ ದಿವಾಣಿ ನ್ಯಾಯಾಲಯಕ್ಕೆ ಇರುವುವು. ಈ ಕಾಯಿದೆಯನ್ವಯವಾಗಿ ಚೌಕಶಿ ಮಾಡುವ ಅಧಿಕಾರಿಗೂ ಈ ಅಧಿಕಾರಗಳನ್ನು ಕೊಡಲಾಗಿದೆಯೆಂದು ಈ ಕಲಮು ಹೇಳುವುದು.

ಅಫೀಡವೇಟು ಮಾಡುವುದೆಂದರೆ ಪ್ರತಿಜ್ಞೆಮಾಡಿ ಹೇಳುವುದು. ಪ್ರತಿಜ್ಞೆ ಮಾಡಿಸುವುದು ಒಂದು ವಿಶಿಷ್ಟ ಅಧಿಕಾರ. ಈ ಅಧಿಕಾರವನ್ನು ರಜಿಸ್ಟ್ರಾರನಿಗೆ ಟ್ರಿಬ್ಯೂನಲದಿಂದ ನೇಮಕವಾದ ವ್ಯಕ್ತಿಗೆ, ಮಧ್ಯಸ್ಥಿಕೆಗಾರನಿಗೆ, ಲಿಕ್ವಿಡೇಟರನಿಗೆ ಇಲ್ಲವೆ ತಂಟೆ ನಿರ್ಣಯ ಮಾಡುವ ವ್ಯಕ್ತಿಗೆ, ಈ ಕಲಮಿನ ಮೂಲಕ ಕೊಡಲಾಗಿದೆ.

## ೧೧೮. ದಿವಾಣಿ ನ್ಯಾಯಾಲಯಗಳ ಅಧಿಕಾರ ಕ್ಷೇತ್ರಕ್ಕೆ ಬಾಧೆ

(೧) ಈ ಕಾಯಿದೆಯಲ್ಲಿ ಅನುಕೂಲಿಸಲಾದುದನ್ನು ಬಿಟ್ಟು ಯಾವುದೇ ದಿವಾಣಿ ಇಲ್ಲವೆ ಭೂಕಂದಾಯದ ನ್ಯಾಯಾಲಯಕ್ಕೆ ಈ ಕೆಳಗಿನ ವಿಷಯಗಳ ಸಂಬಂಧವಾಗಿ ಯಾವುದೇ ಕ್ಷೇತ್ರಾಧಿಕಾರ ಇರತಕ್ಕದ್ದಲ್ಲ—

(ಅ) ಸಹಕಾರಿ ಸಂಘದ ನೋಂದಣಿ ಇಲ್ಲವೆ ಪೋಟನಿಯಮಗಳ ಇಲ್ಲವೆ ಪೋಟನಿಯಮಗಳ ತಿದ್ದುಪಡಿಯ ನೋಂದಣಿಯ ಬಗ್ಗೆ;

(ಬ) ಕಮಿಟಿಯನ್ನು ತೆಗೆದುಹಾಕಿದ ಬಗ್ಗೆ;

(ಕ) ಕಲಮು ೭೦ ರನ್ವಯವಾಗಿ ರಜಿಸ್ಟ್ರಾರನಿಗೆ ನಿರ್ಣಯಕ್ಕಾಗಿ ಕಳಿಸಲ್ಪಡಬೇಕಾದ ಯಾವುದೇ ತಂಟೆಯ ಬಗ್ಗೆ ಇಲ್ಲವೆ ಕಲಮು ೧೦೦ ರನ್ವಯವಾಗಿ ಹಣಗಳ ವಸೂಲಿಯ ಬಗ್ಗೆ;

(ಡ) ಸಹಕಾರಿ ಸಂಘದ ದುಂಡು ಸುತ್ತುವಿಕೆಯ ಹಾಗೂ ಮುರಗಡೆಯ ಸಂಬಂಧವಾಗಿರುವ ಯಾವುದೇ ವಿಷಯದ ಬಗ್ಗೆ.

(೨) ಸಹಕಾರಿ ಸಂಘವು ದುಂಡು ಸುತ್ತಲ್ಪಡುತ್ತಿರುವಾಗ, ರಜಿಸ್ಟ್ರಾರನ ಅನುಮತಿ ಇಲ್ಲದೆ ಹಾಗೂ ಅವನು ಹಾಕಬಹುದಾದಂತಹ ಕರಾರುಗಳ ಅಂಕಿತವಾಗಿಯಲ್ಲದೆ, ಅಂತಹ ಸಂಘದ ವ್ಯವಹಾರಕ್ಕೆ ಸಂಬಂಧವಾಗಿ ಲಿಕ್ವಿಡೇಟರನೆಂದು ಅವನ ವಿರುದ್ಧ ಇಲ್ಲವೆ ಸಂಘದ ವಿರುದ್ಧ ಇಲ್ಲವೆ ಅದರ ಸದಸ್ಯನ ವಿರುದ್ಧ ಯಾವುದೇ ದಾವೆಯು ಇಲ್ಲವೆ ಇತರ ಕಾಯಿದೇಶೀರ ಪ್ರಕರಣಗಳು ಮುಂದುವರೆಸಲ್ಪಡತಕ್ಕದ್ದಲ್ಲ ಇಲ್ಲವೆ ಪ್ರಾರಂಭಿಸಲ್ಪಡತಕ್ಕದ್ದಲ್ಲ.

(೩) ಈ ಕಾಯಿದೆಯಲ್ಲಿ ಅನುಕೂಲಿಸಲಾದುದನ್ನು ಬಿಟ್ಟು, ಈ ಕಾಯಿದೆಯನ್ವಯವಾಗಿ ಮಾಡಲಾದ ಯಾವುದೇ ಹುಕುಮು, ನಿರ್ಣಯ ಇಲ್ಲವೆ ಅವಾರ್ಡು ಯಾವುದೇ ಕಾರಣದಿಂದ ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘಗಳ ಕಾಯಿದೆಯ ಪ್ರಕಾರ ಉಂಟಾಗುವ ತಂಟೆಗಳು ಸಾಮಾನ್ಯವಾಗಿ ಮಧ್ಯಸ್ಥಿಕೆಗಾರನ ಮೂಲಕ, ರಜಿಸ್ಟ್ರಾರನ ಮೂಲಕ ನಿರ್ಣಯ ವಾಗುವಂತಹವು. ಆದ್ದರಿಂದ ಆ ತಂಟೆಗಳು ದಿವಾಣಿ ನ್ಯಾಯಾಲಯಕ್ಕೆ ಬರಲು ಆತಂಕವಿದೆ. ಈ ಆತಂಕವು ಕಾಯಿದೇಶೀರ ಆತಂಕವೆಂಬುದು ಈ ಕಲಮಿನಿಂದ ಸ್ಪಷ್ಟವಾಗುವುದು. ಆದರೆ ಈ ಕಾಯಿದೆಯಲ್ಲಿಯೆ ಕೆಲವೊಂದು ಸಂದರ್ಭದಲ್ಲಿ ದಿವಾಣಿ ನ್ಯಾಯಾಲಯಕ್ಕೆ ಅಧಿಕಾರ ಕೊಡುವ ಅನುಕೂಲತೆಯನ್ನು ಮಾಡಲಾಗಿದೆ. ಉದಾಹರಣಾರ್ಥ:

ಕಲಮು ೭೧ ರ ಉಪಕಲಮು (೪) ರಲ್ಲಿ ಹೀಗೆ ಅನುಕೂಲಮಾಡಿಕೊಡ ಲಾಗಿದೆ. ಸಹಕಾರಿ ಸಂಘಕ್ಕೆ ಸಂಬಂಧ ಇಲ್ಲದವರನ್ನು ಈ ಕಾಯಿದೆಯ ಪ್ರಕಾರ ಉಂಟಾದ ತಂಟೆಯಲ್ಲಿ ಪಕ್ಷಕಾರರನ್ನಾಗಿ ಮಾಡಲು ಬರುವುದಿಲ್ಲ. ಅವರನ್ನು ಪಕ್ಷಕಾರರನ್ನಾಗಿ ಮಾಡದೆ ತಂಟೆಯು ಪರಿಣಾಮಕಾರಿಯಾಗಿ ನಿರ್ಣಯಿಸಲು ಬರುವುದಿಲ್ಲ. ಆಗ ದಿವಾಣಿ ನ್ಯಾಯಾಲಯಕ್ಕೆ ಪರಿಹಾರಕ್ಕಾಗಿ ಬರಬೇಕಾಗುವುದು. ಹೀಗೆ ಬರಲು ರಜಿಸ್ಟ್ರಾರನ ಪರವಾನಗಿ ಬೇಕು.

ಹೀಗೆ ಈ ಕಾಯಿದೆಯಲ್ಲಿ ಅನುಕೂಲಿಸಲಾದುದನ್ನು ಬಿಟ್ಟು ಯಾವುದೇ ದಿವಾಣಿ ಇಲ್ಲವೆ ಭೂಕಂದಾಯದ ನ್ಯಾಯಾಲಯವು ಈ ಕೆಳಗಿನ ವಿಷಯಗಳ ಬಗ್ಗೆ ಕ್ಷೇತ್ರಾಧಿಕಾರವನ್ನು ಪಡೆಯತಕ್ಕದ್ದಲ್ಲ. ಇಲ್ಲಿ ದಿವಾಣಿ ನ್ಯಾಯಾಲಯದ ಜತೆಗೆ ಭೂಕಂದಾಯದ ನ್ಯಾಯಾಲಯವನ್ನು ಸೇರಿಸಲಾಗಿದೆ. ಭೂಮಿಗೆ ಸಂಬಂಧಪಟ್ಟ ತಂಟೆಗಳೂ ಇರುವ ಸಂಭವವಿದೆ. ಆದ್ದರಿಂದ ಆ ನ್ಯಾಯಾಲಯದ ಅಧಿಕಾರವನ್ನೂ ಅಲ್ಲಗಳೆಯಲಾಗಿದೆ. ಯಾವ ವಿಷಯಗಳ ಸಂಬಂಧವಾಗಿ ಈ ನ್ಯಾಯಾಲಯಗಳು ಅಧಿಕಾರ ಬಾಹಿರವಾಗುವುವು ?

ಸಹಕಾರಿ ಸಂಘದ ನೋಂದಣಿಯ ಬಗ್ಗೆ ಇಲ್ಲವೆ ಪೋಟನಿಯಮಗಳ ಇಲ್ಲವೆ ಪೋಟನಿಯಮದ ತಿದ್ದುಪಡಿಯ ನೋಂದಣಿಯ ಬಗ್ಗೆ ತಂಟೆ ಉಂಟಾದರೆ ಅದು ದಿವಾಣಿ ಇಲ್ಲವೆ ಭೂಕಂದಾಯ ನ್ಯಾಯಾಲಯದ ಅಧಿಕಾರಬಾಹಿರವಾಗಿರತಕ್ಕದ್ದು. ಕಮಿಟಿಯನ್ನು ಅಧಿಕಾರದಿಂದ ತೆಗೆದುಹಾಕಿದ ಬಗ್ಗೆ ಉಂಟಾದ ತಂಟೆಯು; ಕಲಮು ೭೦ ರ ಪ್ರಕಾರ ಯಾವ ತಂಟೆಗಳನ್ನು ರಜಿಸ್ಟ್ರಾರನ ನಿರ್ಣಯಕ್ಕೆ ಕಳಿಸ ಲ್ಪಡಬೇಕೋ ಆ ತಂಟೆಗಳು; ಕಲಮು ೧೦೦ ರ ಪ್ರಕಾರ ಹಣಗಳ ವಸೂಲಿಯ ಬಗ್ಗೆ ಉಂಟಾದ ತಂಟೆಗಳು; ಸಹಕಾರಿ ಸಂಘದ ಪುನರಗಡೆ ಇಲ್ಲವೆ ದುಂಡುಸುತ್ತು ವಿಕೆಯ ಬಗ್ಗೆ ಉಂಟಾದ ತಂಟೆಗಳು; ಇವೆಲ್ಲವೂ ದಿವಾಣಿ ಇಲ್ಲವೆ ಭೂಕಂದಾಯ ನ್ಯಾಯಾಲಯಗಳ ಅಧಿಕಾರದ ಹೊರಗೆ ಇರತಕ್ಕದ್ದು.

ಸಹಕಾರಿ ಸಂಘವು ದುಂಡುಸುತ್ತಲ್ಪಡಬೇಕೆಂದು ನಿರ್ಣಯಿತವಾಗಿ ಲಿಕ್ವಿಡೇಟರನು ನೇಮಕವಾದ ಸಂಘದ ಆಡಳಿತ ಇಲ್ಲವೆ ವ್ಯವಹಾರವನ್ನು

ಲಿಕ್ವಿಡೇಟರನೇ ಮುಂದುವರೆಸುವನು. ಆಗ ಸಂಘದ ವಿರುದ್ಧ ಅದರ ಯಾವುದೇ ಸದಸ್ಯನ ವಿರುದ್ಧ ಇಲ್ಲವೆ ಲಿಕ್ವಿಡೇಟರನ ವಿರುದ್ಧ ಸಂಘದ ವ್ಯವಹಾರಗಳ ಸಂಬಂಧ ವಾಗಿ ಯಾರಿಗಾದರೂ ಕ್ರಮ ಕೈಕೊಳ್ಳುವುದಿದ್ದರೆ, ದಾವೆ ಇಲ್ಲವೆ ಕಾಯಿದೇಶೀರ ಪ್ರಕರಣಗಳನ್ನು ನಡೆಸಬೇಕಾದರೆ, ರಜಿಸ್ಟ್ರಾರನ ಅನುಮತಿ ಬೇಕು; ರಜಿಸ್ಟ್ರಾರನು ಅನುಮತಿ ಕೊಡುವಾಗ ಕರಾರುಗಳನ್ನು ಹಾಕಿ ಕೊಡುವನು. ಆ ಕರಾರುಗಳ ಅಂಕಿತವಾಗಿ ದಾವಾ ಮುಂತಾದ್ದು ಕ್ರಮ ಕೈಕೊಳ್ಳಬಹುದು.

ಈ ಕಾಯಿದೆಯನ್ವಯವಾಗಿ ಮಾಡಲಾದ ಯಾವುದೇ ಹುಕುಮು ನಿರ್ಣಯ ಇಲ್ಲವೆ ಆವಾರ್ಡು ಯಾವುದೇ ಕಾರಣಗಳ ಮೂಲಕ ಯಾವುದೇ ನ್ಯಾಯಾಲಯ ದಲ್ಲಿ ಪ್ರಶ್ನಿಸತಕ್ಕದ್ದಲ್ಲ. ಈ ಕಾಯಿದೆಯಲ್ಲಿ ಅನುಕೂಲಿಸಲಾದುದನ್ನು ಬಿಟ್ಟು, ಎಂದು ಹೇಳಿದೆ. ಅಂದರೆ ಆ ಹುಕುಮು, ನಿರ್ಣಯ ಇಲ್ಲವೆ ಆವಾರ್ಡದ ಕಾಯಿದೆಬದ್ಧತೆಯ ಬಗ್ಗೆ, ಕ್ರಮವಿಧಾನದ ಬಗ್ಗೆ ಪ್ರಶ್ನಿಸತಕ್ಕದ್ದಲ್ಲ ಎಂದು ಹೇಳಲಾಗಿದೆ.

## ೧೧೯. ಕಾಲಮಿತಿ ಕಾಯಿದೆಯು ಅನ್ವಯಿಸುವುದು

ಈ ಕಾಯಿದೆಯನ್ವಯವಾಗಿ ಯಾವುದೇ ಅಪೀಲು ಇಲ್ಲವೆ ಪುನರ್ವಿಮರ್ಶೆ ಗಾಗಿ ಅರ್ಜಿ ದಾಖಲು ಮಾಡಲು ೧೯೦೮ ರ ಇಂಡಿಯನ್ ಲಿಮಿಟೇಶನ ಆ್ಯಕ್ಟ (ಕಾಲಮಿತಿ ಕಾಯಿದೆ) ದ ಕಲಮು ೪, ೫, ೧೨, ಹಾಗೂ ೧೪ ರ ಶರತುಗಳು ಅನ್ವಯಿಸತಕ್ಕದ್ದು.

ವಿವೇಚನೆ

ಅಪೀಲು, ಪರಾಮರ್ಶೆ-ಪುನರ್ವಿಮರ್ಶೆಗಳು ನಡೆಯುವುದು ಈ ಕಾಯಿದೆಯ ಕಲಮು ೧೧೫, ೧೧೬, ೧೧೭ ಹಾಗೂ ೧೧೮ ರ ಪ್ರಕಾರ.

ಕಲಮು ೧೧೫ ರಲ್ಲಿ ೬೦ ದಿವಸಗಳಲ್ಲಿ ಅಪೀಲು ದಾಖಲ ಮಾಡುವ ಬಗ್ಗೆ ಹೇಳಿದೆ. ಕಲಮು ೧೧೬ ರಲ್ಲಿ ೬೦ ದಿವಸಗಳಲ್ಲಿ ಅಪೀಲ ದಾಖಲು ಮಾಡುವ ಬಗ್ಗೆ ಹೇಳಿದೆ. ಕಲಮು ೧೧೭ ರಲ್ಲಿ ಕಾಲಮಿತಿ ಹೇಳಿಲ್ಲ. ಕಲಮು ೧೧೮ ರಲ್ಲಿ ಅರ್ಜಿಯ ಬಗ್ಗೆ ಕಾಲಮಿತಿ ಹೇಳಿರಪ ಸರಕಾರವು ಪುನರ್ವಿಮರ್ಶೆಯನ್ನು ಆ ಹುಕುಮಿನ ತಾರೀಖಿನಿಂದ ಆರು ತಿಂಗಳ ಒಳಗೆ ಮಾಡಬೇಕೆಂದು ಹೇಳಿದೆ.

ಈ ಕಾಯಿದೆಯನ್ವಯವಾಗಿ ಅಪೀಲು ಇಲ್ಲವೆ ಪುನರ್ವಿಮರ್ಶೆಯ ಅರ್ಜಿ ಮಾಡಬೇಕಾದಾಗ ಭಾರತದ ಕಾಲಮಿತಿ ಕಾಯಿದೆಯ ಕಲಮು ೪, ೫, ೧೨ ಹಾಗೂ ೧೪ ಅನ್ವಯಿಸತಕ್ಕದ್ದು ಎಂದು ಹೇಳಿದೆ. ಆ ಕಲಮುಗಳಲ್ಲಿ ಏನು ಹೇಳಿದೆ? ಕಾಲಮಿತಿಯನ್ನು ಲೆಕ್ಕ ಮಾಡುವುದು ಹೇಗೆ? ಎಂಬ ಬಗ್ಗೆ ವಿವರ ಇದೆ.

ಕಲಮು ೪: "ಯಾವುದೇ ದಾವೆ, ಅಪೀಲು ಇಲ್ಲವೆ ಅರ್ಜಿಯ ಸಲುವಾಗಿ ಗೊತ್ತು ಮಾಡಲಾದ ಕಾಲಮಿತಿಯ ಕಾಲಾವಧಿಯು ನ್ಯಾಯಾಲಯವು ರಜೆಯಲ್ಲಿ

ರುವಾಗ ಮುಕ್ತಾಯವಾಗುತ್ತಿದ್ದರೆ, ಆ ದಾವೆಯು, ಅಪೀಲು, ಇಲ್ಲವೆ ಅರ್ಜಿಯು ಆ ನ್ಯಾಯಾಲಯವು ರಜೆ ಮುಗಿದು ಪ್ರಾರಂಭವಾಗುವ ದಿನದಂದು ದಾಖಲ ಮಾಡಲ್ಪಡಬಹುದು."

ಕಲಮು ೫ : "ಯಾವುದೇ ಅಪೀಲು ಇಲ್ಲವೆ ನಿರ್ಣಯದ ಪರಾಮರ್ಶೆಗಾಗಿ ಅರ್ಜಿ ಇಲ್ಲವೆ ಅಪೀಲ ಮಾಡಲು ಬೇಡುವ ಪರವಾನಗಿಗಾಗಿ ಅರ್ಜಿ ಇಲ್ಲವೆ ಈ ಕಲಮು ಅನ್ವಯಿಸಬಹುದಾದ ಬೇರೆ ಯಾವುದೇ ಅರ್ಜಿಯು .ಅಪೆಲಂಟನು ಇಲ್ಲವೆ ಅರ್ಜದಾರನು ತನ್ನ ಅಪೀಲನ್ನು ಇಲ್ಲವೆ ಅರ್ಜಿಯನ್ನು ಕಾಲಮಿತಿಯ ಕಾಲಾವಧಿಯ ಒಳಗೆ ದಾಖಲು ಮಾಡದೆ ಇರಲಿಕ್ಕೆ ಸಾಕಷ್ಟು ಕಾರಣಗಳಿದ್ದವೆಂದು ನ್ಯಾಯಾಲಯಕ್ಕೆ ಮನವರಿಕೆ ಮಾಡಿಕೊಟ್ಟರೆ, ಕಾಲಮಿತಿಯ ಕಾಲಾವಧಿ ಮುಗಿದ ನಂತರವೂ ಅಂತಹ ಅಪೀಲನ್ನು ಇಲ್ಲವೆ ಅರ್ಜಿಯನ್ನು ಮನ್ನಿಸಬಹುದು"

ಕಲಮು ೧೨ : "ಯಾವುದೇ ದಾವೆ, ಅಪೀಲು ಇಲ್ಲವೆ ಅರ್ಜಿಗಾಗಿ ಕಾಲಮಿತಿಯ ಕಾಲಾವಧಿಯನ್ನುಲೆಕ್ಕ ಮಾಡುವಾಗ ಯಾವ ದಿನದಿಂದ ಆ ಕಾಲಾವಧಿಯನ್ನು ಎಣಿಸಬೇಕೆಂದಿದೆಯೋ ಅದನ್ನು ಬಿಟ್ಟು ಎಣಿಸತಕ್ಕದ್ದು. ಯಾವ ಹುಕುಮು ಮುಂತಾದ್ದರ ವಿರುದ್ಧ ಅಪೀಲು ಇಲ್ಲವೆ ಅರ್ಜಿ ಮಾಡಬೇಕಾಗಿದೆಯೋ ಅದರ ನಕಲು ಪಡೆಯಲಿಕ್ಕೆ ಹತ್ತಿದ ಕಾಲಾವಧಿಯನ್ನು ಬಿಟ್ಟು ಎಣಿಸತಕ್ಕದ್ದು."

ಕಲಮು ೧೪ : "ದಾವೆ ಇಲ್ಲವೆ ಅಪೀಲನ್ನು ಸದ್ಭಾವನೆಯಿಂದ ಯಾವುದೇ ನ್ಯಾಯಾಲಯದಲ್ಲಿ ದಕ್ಷತೆಯಿಂದ ನಡೆಸಿರುವಾಗ ಆ ನ್ಯಾಯಾಲಯಕ್ಕೆ ಅಧಿಕಾರ ವಿಲ್ಲವೆಂಬ ಕಾರಣದಿಂದ ಅದರ ಚೌಕಶಿ-ನಿರ್ಣಯ ಆಗದೆಂದು ಕಂಡು ಬಂದಾಗ ಆ ನ್ಯಾಯಾಲಯದಲ್ಲಿ ದಾವೆ ಇಲ್ಲವೆ ಅಪೀಲು ಹಾಗೆ ಇರುವಷ್ಟು ಕಾಲಾವಧಿಯನ್ನು ಬಿಟ್ಟು ಎಣಿಸತಕ್ಕದ್ದು. ಇಂತಹ ಪ್ರಸಂಗದಲ್ಲಿ ದಾವೆ ಪ್ರಾರಂಭವಾದ ತಾರೀಖು ಹಾಗೂ ಆ ದಾವೆಯಲ್ಲಿ ಕಂಡು ಬಂದ ದೋಷದ ಮೂಲಕ ಮುಕ್ತಾಯವಾದ ತಾರೀಖು ಲೆಕ್ಕಕ್ಕೆ ಹಿಡಿಯಲ್ಪಡತಕ್ಕದ್ದು."

ಹೀಗೆ ಕಾಲಮಿತಿ ಕಾಯಿದೆಯಲ್ಲಿ ಹೇಳಿದುದನ್ನು ಲಕ್ಷಕ್ಕೆ ತರಬೇಕೆಂದು ಈ ಸಹಕಾರಿ ಸಂಘ ಕಾಯಿದೆಯು ಕಲಮು ೧೧೯ ಹೇಳುತ್ತದೆ.

## ೧೨೦. ನೋಂದಣಿ ಕರಾರಿನಿಂದ ಸಂಘಗಳಿಗೆ ವಿನಾಯತಿ ಕೊಡುವ ಅಧಿಕಾರ

ಈ ಕಾಯಿದೆಯಲ್ಲಿ ಏನೇ ಹೇಳಲಾಗಿದ್ದರೂ ಪ್ರತಿಯೊಂದು ಸಂದರ್ಭದಲ್ಲಿ ರಾಜ್ಯ ಸರಕಾರವು ಅಧಿಕೃತ ಗ್ಯಾಜೆಟನಲ್ಲಿ ಪ್ರಸಿದ್ಧಿಸಿದ ವಿಶೇಷ ಹುಕುಮಿನಿಂದ ಮತ್ತು ಅದು ಹಾಕಬಹುದಾದಂತಹ ಕರಾರುಗಳು ಯಾವುದಾದರೂ ಇದ್ದರೆ ಅವುಗಳ ಅಂಕಿತವಾಗಿ, ಯಾವುದೇ ಸಹಕಾರಿ ಸಂಘವನ್ನು ನೋಂದಣಿಯ ಸಂಬಂಧವಾಗಿ ಈ ಕಾಯಿದೆಯ ಯಾವುದೇ ಅಗತ್ಯತೆಯಿಂದ ವಿನಾಯತಿಯನ್ನು ಕೊಡಬಹುದು

**ವಿವೇಚನೆ**

ಸಹಕಾರಿ ಸಂಘವು ಸಂಘವಾಗಿ ಅಸ್ತಿತ್ವದಲ್ಲಿ ಬರಬೇಕಾದರೆ ನೋಂದಣಿಯಾಗುವುದು ಅಗತ್ಯವಿದೆ. ಕಲಮು ೭ ರ ಪ್ರಕಾರ ನೋಂದಣಿಯಾಗುವುದು. ಕಲಮು ೮ ರ ಪ್ರಕಾರ ನೋಂದಣಿ ಸರ್ಟಿಫಿಕೇಟು ದೊರೆಯುವದು. .

ಆದರೆ ನೋಂದಣಿ ಮಾಡಿಸಬೇಕಾದರೆ ಪೂರ್ವಭಾವಿಯಾಗಿ ಕೆಲವೊಂದು ಅವಶ್ಯಕತೆಗಳನ್ನು ಪೂರೈಸಬೇಕಾಗುತ್ತದೆ. ಈ ವಿವರಗಳನ್ನು ಕಲಮು ೭ ರಲ್ಲಿ ಹೇಳಲಾಗಿದೆ: ಅಲ್ಲಿ ಹೇಳಿದ ಯಾವುದೇ ಅಗತ್ಯತೆಯಿಂದ ವಿನಾಯತಿ ಪಡೆಯಬಹುದಾಗಿದೆ. ಸರಕಾರವು ಈ ವಿನಾಯತಿಯನ್ನು ದಯಪಾಲಿಸುತ್ತಿದೆ. ಹಾಗೆ ದಯಪಾಲಿಸಿದರೆ, ನೋಂದಣಿಯ ಪೂರ್ವದಲ್ಲಿ ಆಗಬೇಕಾದ ಎಲ್ಲ ಅವಶ್ಯಕತೆಗಳನ್ನು ಪೂರೈಸದೆ ಇದ್ದರೂ ನೋಂದಣಿಯಾಗುವುದು. ಸರಕಾರವು ವಿನಾಯತಿ ಕೊಡಬೇಕೆಂದರೆ ಈ ಕಲಮು ಅಧಿಕಾರ ಕೊಡುತ್ತದೆ. ಆದರೆ, ಮೊದಲು ಅದು ಒಂದು ವಿಶೇಷ ಹುಕುಮನ್ನು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಬೇಕು. ಈ ರೀತಿಯ ಹುಕುಮು ಪ್ರತಿಸಲ ವಿನಾಯತಿ ಕೊಡುವ ಸಂದರ್ಭದಲ್ಲಿ ಪ್ರಸಿದ್ಧಿಸಲ್ಪಡಬೇಕು. ವಿನಾಯತಿಯನ್ನು ಯಾವ ಕರಾರುಗಳಿಗಂಕಿತವಾಗಿಯೂ ಕೊಡಬಹುದು. ಯಾವ ಕರಾರುಗಳಿಗಂಕಿವಾಗಿ ವಿನಾಯತಿಯನ್ನು ಕೊಡಬೇಕೆಂದಿದೆಯೋ ಆ ಕರಾರುಗಳನ್ನು ರಾಜ್ಯ ಸರಕಾರವು ಹಾಕಬಹುದು.

## ೧೨೧ ಸಂಘಗಳಿಗೆ ವಿನಾಯತಿ ಕೊಡುವ ಅಧಿಕಾರ

ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಲ್ಪಟ್ಟ ಸಾಮಾನ್ಯ ಇಲ್ಲವೆ ವಿಶೇಷ ಹುಕುಮಿನಿಂದ ರಾಜ್ಯ ಸರಕಾರವು ಯಾವುದೇ ಸಹಕಾರಿ ಸಂಘವನ್ನು ಇಲ್ಲವೆ ಸಂಘಗಳ ಯಾವುದೇ ವರ್ಗಕ್ಕೆ ಈ ಕಾಯಿದೆಯ ಯಾವುದೇ ಶರತುಗಳಿಂದ ವಿನಾಯತಿ ಕೊಡಬಹುದು ಇಲ್ಲವೆ ಇಂತಹ ಸಂಘಕ್ಕೆ ಇಲ್ಲವೆ ಸಂಘಗಳ ವರ್ಗಕ್ಕೆ ಅಂತಹ ಶರತುಗಳು ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಬಹುದಾದಂತಹ ಮಾರ್ಪಾಟುಗಳೊಂದಿಗೆ ಅನ್ವಯಿಸತಕ್ಕದ್ದೆಂದು ನಿರ್ದೇಶಿಸಬಹುದು.

**ವಿವೇಚನೆ**

ಈ ಕಾಯದೆಯು ಎಲ್ಲ ಮಾದರಿಯ ಸಹಕಾರಿ ಸಂಘಗಳಿಗೆ ಅನ್ವಯಿತಕ್ಕದ್ದೆಂಬುದು ಸ್ಪಷ್ಟವಾಗಿದೆ. ಆದರೆ ಕೆಲವೊಂದು ಸಂಘಕ್ಕೆ ಇಲ್ಲವೆ ಸಂಘಗಳ ಯಾವುದೇ ವರ್ಗಕ್ಕೆ ಈ ಕಾಯಿದೆಯ ಯಾವುದೇ ಶರತುಗಳು ಅನ್ವಯಿಸಬಾರದೆಂದು ಅವುಗಳಿಗೆ ಆ ಶರತುಗಳ ಅನ್ವಯಿಸುವಿಕೆಯಿಂದ ವಿನಾಯತಿ ಕೊಡಬೇಕೆಂದರೆ ಈ ಕಲಮು ಆ ಅಧಿಕಾರವನ್ನು ರಾಜ್ಯ ಸರಕಾರಕ್ಕೆ ಕೊಡುತ್ತದೆ. ಆದರೆ ರಾಜ್ಯ ಸರಕಾರವು ವಿನಾಯತಿ ಕೊಡುವಾಗ ಸಾಮಾನ್ಯ ಇಲ್ಲವೆ ವಿಶೇಷ ಹುಕುಮನ್ನು ಹೊರಡಿಸಬೇಕು. ಆ ಹುಕುಮು ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧವಾಗಬೇಕು.

ಅದರಲ್ಲಿ ಯಾವ ಸಂಘಕ್ಕೆ ಇಲ್ಲವೆ ಸಂಘಗಳ ವರ್ಗಕ್ಕೆ ಕಾಯಿದೆಯ ಯಾವ ಶರತ್ತುಗಳು ಅನ್ವಯಿಸಬಾರದೆಂಬ ಹಾಗೆ ವಿನಾಯತಿ ಕೊಡಬೇಕೆಂಬ ಬಗ್ಗೆ ವಿವರ ಇರಬೇಕು. ಇನ್ನೊಂದು ಬಗೆಯಿಂದಲೂ ಸರಕಾರವು ವಿನಾಯತಿ ಕೊಡಬಹುದಾಗಿದೆ. ಕೆಲವೊಂದು ಸಂಘಕ್ಕೆ ಇಲ್ಲವೆ ಸಂಘಗಳ ವರ್ಗಕ್ಕೆ ಈ ಕಾಯಿದೆಯ ಶರತುಗಳು ಇಂತಹ ಮಾರ್ಪಾಟುಗಳೊಂದಿಗೆ ಅನ್ವಯಿಸಬೇಕೆಂದು ಹೇಳಬಹುದು. ಯಾವ ಮಾರ್ಪಾಟುಗಳೊಂದಿಗೆ ಯಾವ ಶರತುಗಳು ಅನ್ವಯಿಸಬೇಕೆಂಬ ಬಗ್ಗೆ ಆ ಹುಕುಮಿನಲ್ಲಿ ನಿರ್ದಿಷ್ಟಪಡಿಸಬೇಕು. ಹೀಗೆ ವಿನಾಯತಿ ದೊರೆಯದಿದ್ದರೆ ಎಲ್ಲ ಮಾದರಿಯ ಸಂಘಗಳಿಗೆ ಈ ಕಾಯಿದೆಯ ಎಲ್ಲ ಶರತುಗಳು ಅನ್ವಯಿಸುವುವು ಎಂದು ಅರ್ಥ.

## ೧೨೨. ಸದಸ್ಯರ ರಜಿಸ್ಟರು

ಯಾವುದೇ ಸಹಕಾರಿ ಸಂಘದಿಂದ ಇಡಲ್ಪಟ್ಟ ಸದಸ್ಯರ ಇಲ್ಲವೆ ಶೇರುಗಳ ಯಾವುದೇ ರಜಿಸ್ಟರು ಇಲ್ಲವೆ ಯಾದಿಯು ಅದರಲ್ಲಿ ನಮೂದಾದ ಈ ಕೆಳಗಿನ ವಿವರಗಳ ಬಗ್ಗೆ ಪ್ರಥಮ ದರ್ಶನೀ ಪುರಾವೆಯಾಗತಕ್ಕದ್ದು.—

(ಅ) ಸದಸ್ಯನೆಂದು ಅಂತಹ ರಜಿಸ್ಟರದಲ್ಲಿ ಇಲ್ಲವೆ ಯಾದಿಯಲ್ಲಿ ಯಾವ ತಾರೀಖಿಗೆ ಯಾವುದೇ ವ್ಯಕ್ತಿಯ ಹೆಸರು ನಮೂದಿಸಲ್ಪಟ್ಟಿತೋ ಆ ತಾರೀಖು;

(ಬ) ಇಂತಹ ವ್ಯಕ್ತಿಯು ಸದಸ್ಯನಾಗಿ ಯಾವ ತಾರೀಖಿಗೆ ಉಳಿಯಲಿಲ್ಲವೋ ಆ ತಾರೀಖು.

### ವಿವೇಚನೆ

ಸಹಕಾರಿ ಸಂಘದಲ್ಲಿ ಸದಸ್ಯರ ಇಲ್ಲವೆ ಶೇರುಗಳ ರಜಿಸ್ಟರು ಇಲ್ಲವೆ ಯಾದಿಯು ಇಡಲ್ಪಟ್ಟಿರುತ್ತದೆ. ಅದರಲ್ಲಿ ಕಾಣಿಸಿದ ಸಂಗತಿಗಳು ಪ್ರಥಮ ದರ್ಶನೀ ಪುರಾವೆಗಳು ಆಗುತ್ತವೆ. ಯಾವ ಸಂಗತಿಗಳು ಹೀಗೆ ಪುರಾವೆ ಆಗುವುವು ಎಂಬುದನ್ನು ಹೇಳಲಾಗಿದೆ. ಯಾವುದೇ ಸದಸ್ಯನು ಎಂದು ಸದಸ್ಯನಾಗಿರುವನೆಂಬ ಬಗ್ಗೆ ರಜಿಸ್ಟರದಲ್ಲಿ ಇಲ್ಲವೆ ಯಾದಿಯಲ್ಲಿ ಕಾಣಿಸಿದ ತಾರೀಖು. ಅದರಂತೆ ಯಾವುದೇ ಸದಸ್ಯ ಸದಸ್ಯನಾಗಿ ಉಳಿಯದೇ ಇರುವ ತಾರೀಖು.

ಈ ತಾರೀಖುಗಳು ಸದಸ್ಯನ ಹೊಣೆಗಾರಿಕೆಯನ್ನು ನಿಶ್ಚಿತ ಮಾಡಲು ಉಪಯೋಗವಾಗುವುವು. ಎಂದು ಸದಸ್ಯನಾಗಿರುವನೆಂದು ಅಲ್ಲಿ ರಜಿಸ್ಟರದಲ್ಲಿಯ ತಾರೀಖು ತೋರುವದೋ ಆ ತಾರೀಖಿನಿಂದ ಅವನ ಹೊಣೆಗಾರಿಕೆಯು ಪ್ರಾರಂಭವಾದಂತೆ. ಅದರಂತೆ ಎಂದು ಸದಸ್ಯನು ಸದಸ್ಯನಾಗಿ ಉಳಿಯಲಿಲ್ಲವೋ ಆ ತಾರೀಖಿನಿಂದ ಮುಂದೆ ಎರಡು ವರುಷಗಳ ವರೆಗೆ ಅವನ ಹೊಣೆಗಾರಿಕೆ ಕಲಮು ೨೫ ರ ಪ್ರಕಾರ ಇರುವುದು. ಈ ಹೊಣೆಗಾರಿಕೆಯನ್ನು ನಿಶ್ಚಿತಗೊಳಿಸಲು ತಾರೀಖು ಮುಖ್ಯವಾದ ಪುರಾವೆಯಾಗುವುದು. ಆ ಬಗ್ಗೆ ಸಂಘದಲ್ಲಿ ಇಡಲ್ಪಟ್ಟ ಸದಸ್ಯರ ಇಲ್ಲವೆ ಶೇರುಗಳ ರಜಿಸ್ಟರು ಇಲ್ಲವೆ ಯಾದಿಯು ಪ್ರಥಮ ದರ್ಶನೀ ಪುರಾವೆಯಾಗುವುದು.

## ೧೨೩ ಸಹಕಾರಿ ಸಂಘಗಳ ಪುಸ್ತಕಗಳಲ್ಲಿ ನಮೂದಾದ ಸಂಗತಿಯ ಸಾಬೀತು

(೧) ವ್ಯವಹಾರದ ಪದ್ಧತಿಯಲ್ಲಿ ಕ್ರಮವಾಗಿ ಇಡಲ್ಪಟ್ಟ ಸಹಕಾರಿ ಸಂಘದ ಪುಸ್ತಕದಲ್ಲಿಯ ಯಾವುದೇ ನಮೂದಾದ ಸಂಗತಿಯ ನಕಲು ಗೊತ್ತುಮಾಡಬಹು ರೀತಿಯಲ್ಲಿ ಸರ್ಟಿಫಾಯಿಡ ನಕಲು ಆದರೆ, ಇಂತಹ ನಮೂದಾದ ಸಂಗತಿಯ ಬಗ್ಗೆ ಯಾವುದೇ ದಾವಾ ಇಲ್ಲವೆ ಕಾಯಿದೇಶೀರ ಪ್ರಕರಣದಲ್ಲಿ ಪ್ರಥಮವರ್ಶನೀಪುರಾವೆ ಯೆಂದು ಸ್ವೀಕರಿಸಲ್ಪಡತಕ್ಕದ್ದು. ಮತ್ತು ಮೂಲದಲ್ಲಿ ನಮೂದಾದ ಸಂಗತಿಯು ಯಾವ ರೀತಿಯಲ್ಲಿ ಹಾಗೂ ಎಷ್ಟು ಮಟ್ಟಿಗೆ ಮನ್ನಿಸಲ್ಪಡುವುದೋ ಆ ರೀತಿಯಲ್ಲಿ ಹಾಗೂ ಅಷ್ಟುಮಟ್ಟಿಗೆ ಆ ನಕಲಿನಲ್ಲಿ ನಮೂದಾದ ವಿಷಯಗಳ, ವ್ಯವಹಾರಗಳ, ಹಾಗೂ ಲೆಕ್ಕಗಳ ಬಗ್ಗೆ ಪುರಾವೆಯೆಂದು ಮನ್ನಿಸಲ್ಪಡತಕ್ಕದ್ದು.

(೨) ವ್ಯವಹಾರದ ಪದ್ಧತಿಯಲ್ಲಿ ಸಹಕಾರಿಸಂಘವು ಪಡೆದ ಹಾಗೂ ಇಟ್ಟ ಯಾವುದೇ ದಾಖಲೆ ಪತ್ರವ ಇಲ್ಲವೆ ಇಂತಹ ದಾಖಲೆ ಪತ್ರದಲ್ಲಿ ನಮೂದಾದ ಯಾವುದೇ ಸಂಗತಿಯ ನಕಲನ್ನು ದಯಪಾಲಿಸಬಹುದು; ಮತ್ತು ಹೀಗೆ ದಯಪಾ ಲಿಸಲಾದ ಯಾವುದೇ ನಕಲು ಗೊತ್ತುಮಾಡಬಹುದಾದ ರೀತಿಯಲ್ಲಿ ಸರ್ಟಿಫಾ ಯಿಡ ನಕಲು ಆದಾಗ ಯಾವುದೇ ಉದ್ದೇಶದ ಸಲುವಾಗಿ, ಮೂಲ ದಾಖಲೆ ಪತ್ರವು ಇಲ್ಲವೆ ಸಂದರ್ಭಾನುಸಾರವಾಗಿ, ಅದರಲ್ಲಿ ನಮೂದಾದ ಸಂಗತಿಯು ಯಾವ ರೀತಿ ಯಿಂದ ಹಾಗೂ ಎಷ್ಟು ಮಟ್ಟಿಗೆ ಮನ್ನಿಸಲ್ಪಡುವುವೊ ಅಷ್ಟುಮಟ್ಟಿಗೆ ನಕಲು ಪುರಾವೆಯೆಂದು ಮನ್ನಿಸಲ್ಪಡತಕ್ಕದ್ದು.

(೩) ಸಹಕಾರಿ ಸಂಘದ ಯಾವುದೇ ಅಧಿಕಾರಿಯು ಮತ್ತು ಋಣವಿಮೋ ಚನೆ ಕಾರ್ಯ ಮುಗಿದ ನಂತರ ಯಾರ ಕಚೇರಿಯಲ್ಲಿ ಸಹಕಾರಿ ಸಂಘದ ಪುಸ್ತಕ ಗಳು ಭದ್ರವಾಗಿ ಠೇವಾಗಿ ಇಡಲ್ಪಟ್ಟಿರುವುವೊ ಅಂತಹ ಯಾವುದೇ ಅಧಿಕಾರಿಯು ಯಾವ ಪ್ರಕರಣದಲ್ಲಿ ಸಂಘವಾಗಲೀ ಇಲ್ಲವೆ ಲಿಕ್ವಿಡೇಟರನಾಗಲೀ ಪಕ್ಷಕಾರ ನಾಗಿಲ್ಲವೋ ಅಂತಹ ಪ್ರಕರಣದಲ್ಲಿ ಈ ಕಲಮಿನ ಪ್ರಕಾರ ಯಾವುದರಲ್ಲಿಯ ನಮೂದಾದ ಸಂಗತಿಗಳು ಸಾಬೀತು ಮಾಡಲು ಶಕ್ಯವಾಗಿರುವುದೋ ಅಂತಹ ಸಂಘದ ಪುಸ್ತಕಗಳನ್ನು ಇಲ್ಲವೆ ದಾಖಲೆ ಪತ್ರಗಳನ್ನು ಹಾಜರ ಮಾಡಲು ಇಲ್ಲವೆ ಅದರಲ್ಲಿ ದಾಖಲೆಯಾಗಿರುವ ವಿಷಯಗಳನ್ನು, ವ್ಯವಹಾರಗಳನ್ನು ಹಾಗೂ ಲೆಕ್ಕಪತ್ರಗಳನ್ನು ಸಾಬೀತುಮಾಡಲು ಸಾಕ್ಷಿಯಾಗಿ ಬಂದು ಹಾಜರಾಗಲು, ಈ ವಿಶಿಷ್ಟ ಕಾರಣಕ್ಕಾಗಿ ನ್ಯಾಯಾಲಯದ, ಟ್ರಿಬ್ಯೂನಲದ ಇಲ್ಲವೆ ಮಧ್ಯಸ್ಥಿಕೆ ಗಾರನ ಹುಕುಮು ಇದ್ದ ಹೊರತು ಒತ್ತಾಯ ಪಡಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘದಲ್ಲಿಯ ಪುಸ್ತಕಗಳಲ್ಲಿಯ ಹಾಗೂ ದಾಖಲೆ ಪತ್ರಗಳಲ್ಲಿಯ ನಮೂದಾದ ಸಂಗತಿಗಳ ನಕಲು ಕೊಡುವ ಬಗ್ಗೆ ಅವುಗಳನ್ನು ಸಾಬೀತು ಮಾಡುವ ಬಗ್ಗೆ ಈ ಕಲಮು ಇದೆ.

ಸಹಕಾರಿ ಸಂಘಗಳ ಪುಸ್ತಕಗಳಲ್ಲಿಯ ಹಾಗೂ ದಾಖಲೆ ಪತ್ರಗಳ ನಕಲು ಗಳನ್ನು ಕೊಡಲು ಬರುತ್ತದೆ. ಆ ನಕಲುಗಳದು ಪುರಾವೆ ಆಗುತ್ತವೆ. ಎಂತ ಹವು ಪುರಾವೆ ಆಗುತ್ತವೆ? ಸಹಕಾರಿ ಸಂಘದ ಪುಸ್ತಕಗಳು ವ್ಯವಹಾರ ಪದ್ಧತಿಯಲ್ಲಿ ಕ್ರಮವಾಗಿ ಇಡಲ್ಪಟ್ಟಿರಬೇಕು. ಇದು ಮುಖ್ಯಮಾತು. ಹೀಗೆ ಇಡಲ್ಪಟ್ಟ ಪುಸ್ತಕಗಳಲ್ಲಿ ನಮೂದಾದ ಸಂಗತಿಯ ನಕಲು ಇರಬೇಕು. ಅದು ಗೊತ್ತು ಮಾಡಬಹುದಾದ ರೀತಿಯಲ್ಲಿ ಸರ್ಟಿಫಾಯಿಡ ನಕಲು ಆಗಿರಬೇಕು. ಆಗ ಅದನ್ನು ಯಾವುದೇ ದಾವಾ ಇಲ್ಲವೆ ಕಾಯಿದೇಶೀರ ಪ್ರಕರಣ ದಲ್ಲಿ ಪ್ರಥಮ ದರ್ಶನೀ ಪುರಾವೆಯೆಂದು ಸ್ವೀಕರಿಸಲ್ಪಡತಕ್ಕದ್ದು. ಅಂದರೆ ಅದರಲ್ಲಿ ಏನು ಬರೆದದೆ ಅದರ ಬಗ್ಗೆ ಅದು ಪುರಾವೆಯೆಂದು ಸ್ವೀಕರಿಸಲ್ಪಡತಕ್ಕದ್ದು. ಮೂಲ ಪುಸ್ತಕದಲ್ಲಿ ಇರುವ ನಮೂದಾದ ಸಂಗತಿಯು ಯಾವ ರೀತಿಯಿಂದ ಮತ್ತು ಎಷ್ಟು ಮಟ್ಟಿಗೆ ಪುರಾವೆಯೆಂದು ಮನ್ನಿಸಲ್ಪಡುವುದೋ ಅಷ್ಟು ಮಟ್ಟಿಗೆ ಸರ್ಟಿಫಾಯಿಡ ನಕಲು ಆ ವಿಷಯ, ವ್ಯವಹಾರ, ಹಾಗೂ ಲೆಕ್ಕದ ಬಗ್ಗೆ ಪುರಾವೆ ಯೆಂದ ಮನ್ನಿಸಲ್ಪಡತಕ್ಕದ್ದು. ಏಕೆಂದರೆ ಇದು ಎಷ್ಟಾದರೂ ನಕಲು ಮೂಲ ದಲ್ಲಿ ಇರುವ ಗುಣದಕಿಂತ ಹೆಚ್ಚು ನಕಲಿಗೆ ಗುಣ ಬರುವುದಿಲ್ಲ.

ಸಹಕಾರಿ ಸಂಘವು ಸಾರ್ವಜನಿಕ ಸಂಸ್ಥೆಯು. ಅದು ತನ್ನ ವ್ಯವಹಾರ ಕ್ರಮದಲ್ಲಿ ಪಡೆದ ಹಾಗೂ ಇಟ್ಟ ಯಾವುದೇ ದಾಖಲೆ ಪತ್ರವು ಸಾರ್ವಜನಿಕ ಬೆಲೆ ಯುಳ್ಳ ದಾಖಲೆಪತ್ರವು ಆಗುವುದು. ಅದಕ್ಕಾಗಿ ಅದರ ನಕಲನ್ನು ಅದು ದಯ ಪಾಲಿಸಬಹುದು. ಆ ನಕಲು ಗೊತ್ತುಮಾಡಿದ ರೀತಿಯಲ್ಲಿ ಸರ್ಟಿಫಾಯಿಡ ನಕಲು ಎಂದು ಆಗಿದ್ದರೆ, ಅದನ್ನು ಪುರಾವೆಯೆಂದು ಮನ್ನಿಸತಕ್ಕದ್ದು. ಮತ್ತು ಮೂಲದಲ್ಲಿ ಇರುವ ದಾಖಲೆ ಪತ್ರ ಇಲ್ಲವೆ ಅದರಲ್ಲಿ ನಮೂದಾದ ಸಂಗತಿಯು ಯಾವ ರೀತಿ ಯಿಂದ, ಎಷ್ಟುಮಟ್ಟಿಗೆ ಪುರಾವೆ ಆಗುವುದೋ ಅಷ್ಟುಮಟ್ಟಿಗೆ ಈ ಸರ್ಟಿಫಾಯಿಡ ನಕಲು ಪುರಾವೆ ಆಗತಕ್ಕದ್ದು. ಮೂಲದಲ್ಲಿ ಇರುವುದರ ಗುಣವೇ ಇದಕ್ಕೆ ಬರತಕ್ಕದ್ದು.

ಸಹಕಾರಿ ಸಂಘದ ಪುಸ್ತಕಗಳು ಯಾವುದೇ ಪ್ರಕರಣದಲ್ಲಿ ಹಾಜರ ಮಾಡ ಲ್ಪಡುವ ಪ್ರಸಂಗ ಬರಬಹುದು. ಆಗ ಸಂಘದ ಅಧಿಕಾರಿಯು ಇಲ್ಲವೆ ಋಣ ವಿಮೋಚನ ಕಾರ್ಯ ಮುಗಿದ ನಂತರ ಯಾರ ಕಚೇರಿಯಲ್ಲಿ ಆ ಪುಸ್ತಗಳು ಕಲ ಮು ೭೪ ರ ಉಪಕಲಮು (೩) ರನ್ವಯವಾಗಿ ಭದ್ರತೆಯ ಸಲುವಾ ಕೇವಾಗಿ ಇಡ ಲ್ಪಟ್ಟಿರುವವೋ ಆ ಕಚೇರಿಯ ಅಧಿಕಾರಿಯು ಅವುಗಳನ್ನು ಹಾಜರ ಮಾಡಬೇಕಾ ಗುವುದು; ಇಲ್ಲವೆ ಅದರಲ್ಲಿಯ ಸಂಗತಿಗಳನ್ನು ಸಾಬೀತ ಮಾಡಲು ಸಾಕ್ಷಿಯೆಂದು ಬರಬೇಕಾಗುವುದು. ಹೀಗೆ ಹಾಜರು ಪಡಿಸಿಕೊಳ್ಳಬೇಕಾದರೆ ಎರಡು ಮಾತುಗ ಳನ್ನು ಲಕ್ಷಿಸಬೇಕಾಗುವುದು. ಯಾವ ಪ್ರಕರಣದಲ್ಲಿ ಅವು ಹಾಜರಾಗಬೇಕಾಗಿರ

ವುದೋ ಆ ಪ್ರಕರಣದಲ್ಲಿ ಸಂಘವು ಇಲ್ಲವೆ ಲಿಕ್ವಿಡೇಟರನು ಪಕ್ಷಕಾರ ಆಗಿಗ್ದರೆ ಬರು ವುದು. ಇಲ್ಲದಿದ್ದರೆ, ಹಾಜರ ಪಡಿಸಲು ಇಲ್ಲವೆ ಆ ಬಗ್ಗೆ ಸಾಕ್ಷಿ ನುಡಿಯಲು ಆ ಅಧಿಕಾರಿಯನ್ನು ಒತ್ತಾಯಪಡಿಸಲಿಕ್ಕೆ ಬರುವುದಿಲ್ಲ. ಅಂತಹ ಪ್ರಸಂಗದಲ್ಲಿ ಅವುಗ ಳನ್ನು ಹಾಜರ ಪಡಿಸಿಕೊಳ್ಳಬೇಕಾಗಿದ್ದರೆ ಇಲ್ಲವೆ ಆ ಅಧಿಕಾರಿಯು ಸಾಕ್ಷಿ ನುಡಿಯ ಬೇಕಾಗಿದ್ದರೆ, ನ್ಯಾಯಾಲಯದ ಟ್ರಿಬ್ಯೂನಲದ ಇಲ್ಲವೆ ಮಧ್ಯಸ್ಥಿಕೆಗಾರನ ಹುಕುಮು ಈ ವಿಶಿಷ್ಟ ಕಾರಣಕ್ಕಾಗಿ ಇರಲೇಬೇಕು. ಇಂತಹ ಹುಕುಮು ಇರದೇ ಇದ್ದರೆ ಆ ಅಧಿಕಾರಿಯು ಪುಸ್ತಕಗಳನ್ನು ಹಾಜರ ಪಡಿಸಲು ಇಲ್ಲವೆ ಅದರಲ್ಲಿಯ ಸಂಗತಿಗಳ ಬಗ್ಗೆ ಸಾಕ್ಷಿ ನುಡಿಯಲು ಒತ್ತಾ ಯಪಡಿಸಲ್ಪಡತಕ್ಕದಲ್ಲ. ಅಂದರೆ ಸಹಕಾರಿ ಸಂಘದ ವ್ಯವಹಾರದ ಪುಸ್ತಕ ಗಳನ್ನು ಕಂಡಲ್ಲಿ ಕಂಡವರು ಅಧಿಕಾರ ಇಲ್ಲದವರು ಹಾಜರು ಪಡಿಸಿಕೊಳ್ಳಲು ಬರುವುದಿಲ್ಲ; ಆ ಬಗ್ಗೆ ಸಾಕ್ಷಿ ಮಾಡಿಸಿಕೊಳ್ಳಲು ಬರುವುದಿಲ್ಲ. ನ್ಯಾಯಾಲಯದ ಟ್ರಿಬ್ಯೂನಲದ ಇಲ್ಲವೆ ಮಧ್ಯಸ್ಥಿಕೆಗಾರನ ಹುಕುಮು ಅಗತ್ಯವಾಗಿ ಬೇಕು. ಈ ಹುಕುಮು ಇಲ್ಲದಿದ್ದರೆ ಸಂಬಂಧಪಟ್ಟ ಅಧಿಕಾರಿಯು ಆ ಪುಸ್ತಕಗಳನ್ನು ಹಾಜರ ಮಾಡುವುದಿಲ್ಲ; ಸಾಕ್ಷಿಗೆ ಬರುವುದಿಲ್ಲವೆಂದು ಹೇಳಿದರೆ ಅವನದು ತಪ್ಪು ಆಗುವುದಿಲ್ಲ.

### ೧೨೪ ಈ ಕಾಯಿದೆಯನ್ವಯವಾಗಿ ನೋಟೀಸು ಜಾರಿಮಾಡುವಿಕೆ

ಈ ಕಾಯಿದೆಯನ್ವಯವಾಗಿ ಹೊರಡಿಸಿದ ಪ್ರತಿಯೊಂದು ನೋಟೀಸು ಇಲ್ಲವೆ ಮಾಡಿದ ಪ್ರತಿಯೊಂದು ಹುಕುಮು ಯಾವ ವ್ಯಕ್ತಿಗೆ ಕಳಿಸಲ್ಪಡಬೇಕಾಗಿದೆಯೋ ಆ ವ್ಯಕ್ತಿಯು ತ ಹಿಂದೆ ವಾಸವಾಗಿದ್ದನೆಂದು ತಿಳಿದ ಇಲ್ಲವೆ-ವ್ಯವಹಾರ ಸಾಗಿಸುತ್ತಿ ದ್ದನೆಂದು ತಿಳಿದ ವಿಳಾಸಕ್ಕೆ ಸರಿಯಾಗಿ ಪತ್ತೆ ಬರೆದು ನೋಟೀಸು ಇಲ್ಲವೆ ಹುಕುಮು ಇರುವಂತಹ ಪತ್ರವನ್ನು ಅದರಲ್ಲಿಟ್ಟು ಅಂಚೆಯ ವೆಚ್ಚವನ್ನು ಕೊಟ್ಟು ರಜಿಸ್ಟರ ಮಾಡಿ ಟಪಾಲು ಹಾಕುವದರಿಂದ ಯಾವುದೇ ವ್ಯಕ್ತಿಗೆ ಜಾರಿ ಮಾಡ ಬಹುದು ಮತ್ತು ಅದರ ವಿರುದ್ಧವಾಗಿ ಸಾಬೀತು ಮಾಡಲ್ಪಡದಿದ್ದರೆ ಇಂತಹ ಪತ್ರವು ಸಾಧಾರಣ ಕ್ರಮದಲ್ಲಿ ಬಟವಡೆ ಆಗುವ ಸಮಯಕ್ಕೆ ಜಾರಿಮಾಡಲ್ಪಟ್ಟಿದೆ ಯೆಂದು ಗಣಿಸಲ್ಪಡತಕ್ಕದ್ದು.

**ವಿವೇಚನೆ**

ನೋಟೀಸು ಇಲ್ಲವೆ ಹುಕುಮು ಹೇಗೆ ಜಾರಿ ಮಾಡಬೇಕು ? ಈ ಕಲಮಿನಲ್ಲಿ ಅದರ ವಿಧಾನ ಹೇಳಲಾಗಿದೆ. ಇದರಲ್ಲಿ ಕಾಣಿಸಿದ ಕ್ರಮವನ್ನು ಚಾಚೂ ತಪ್ಪದೆ ಪಾಲಿಸಬೇಕು..

ಯಾವ ನೋಟೀಸು ಇಲ್ಲವೆ ಹುಕುಮು ಜಾರಿ ಮಾಡುವುದದೆಯೋ ಅದು ಒಂದ ಪತ್ರದಲ್ಲಿ ಕಾಣಿಸಲ್ಪಟ್ಟಿರಬೇಕು. ಅದರ ಮೇಲೆ ಯಾವ ವ್ಯಕ್ತಿಗೆ ಅದು ಜಾರಿ ಮಾಡಲ್ಪಡಬೇಕಾಗಿದೆಯೋ ಅವನ ಹೆಸರು ಬರೆಯಲ್ಪಡಬೇಕು. ಯಾವ

ತಾರೀಖಿಗೆ ಅದು ಕಳಿಸಲ್ಪಡಬೇಕಾಗಿದೆಯೋ ಅಂದು ಆ ವ್ಯಕ್ತಿಯು ವಾಸವಾಗಿದ್ದನೆಂದು ಇಲ್ಲವೆ ವ್ಯವಹಾರ ಸಾಗಿಸುತ್ತಿದ್ದನೆಂದು ತಿಳಿದ ವಿಳಾಸಕ್ಕೆ ಕಳಿಸಬೇಕು. ಅಂದರೆ, ಅವನು ಅಲ್ಲಿ ಇದ್ದನೆಂದು ತಿಳಿದರೆ ಸಾಕು; ಅನಂತರ ಬದಲು ಮಾಡಿದ್ದರೂ ಆ ಹಿಂದಿನ ವಿಳಾಸಕ್ಕೆ ಕಳಿಸಬೇಕೇ; ಹೊಸವಿಳಾಸ ಗೊತ್ತಿರುವುದಿಲ್ಲ ಎಂಬುವಕ್ಕೆ ಈ ವಿಳಾಸವನ್ನು ಕಳಿಸಬೇಕೆಂದಿರುವ ನೋಟೀಸು ಇಲ್ಲವೆ ಹುಕುಮು ಇರುವ ಪತ್ರದ ಮೇಲೆ ಬರೆಯಬೇಕು. ವಿಳಾಸವನ್ನು ಸರಿಯಾಗಿ ಬರೆಯಬೇಕು, ತಪ್ಪು ವಿಳಾಸ ಬರೆದರೆ ಅದು ಜಾರಿಯಾಗಲಿಲ್ಲವೆಂಬದಕ್ಕೆ ಕಳಿಸಿದವನೇ ತಪ್ಪುಗಾರನಾಗುವನು. ನಂತರ ಅದನ್ನು ರಜಿಷ್ಟರ ಪೋಷ್ಟದಿಂದ ಕಳಿಸಬೇಕು. ಈ ಟಪಾಲ ವೆಚ್ಚವನ್ನು ಕಳಿಸುವವನೇ ಕೊಡಬೇಕು ಇಷ್ಟೆಲ್ಲ ಮಾಡಿದ ಮೇಲೆ ಸಾಧಾರಣವಾಗಿ ಟಪಾಲು ಯಾವ ಸಮಯಕ್ಕೆ ಬಟವಡೆ ಆಗುವುದೋ ಆ ಕಾಲಕ್ಕೆ ಆ ನೋಟೀಸು ಇಲ್ಲವೆ ಹುಕುಮು ಆ ವ್ಯಕ್ತಿಗೆ ಜಾರಿ ಮಾಡಲ್ಪಟ್ಟಿದೆಯೆಂದು ಗಣಿಸಲ್ಪಡಲಾಗುವುದು. ಅದು ಆಗ ಜಾರಿ ಆಗಿಲ್ಲವೆಂದು ಸಿದ್ಧವಾಗುವತನಕ ಈ ಗ್ರಹಿಕೆಯು ಉಳಿಯತಕ್ಕದ್ದು. ಜಾರಿ ಆಗಿಲ್ಲವೆಂದು ಹೇಳುವವನು ಈ ಬಗ್ಗೆ ಸಾಬೀತು ಮಾಡತಕ್ಕದ್ದು. ಅಂದರೆ ಪದ್ಧತಿ ಪ್ರಕಾರ, ಎಲ್ಲ ಕ್ರಮ ವಿಧಾನವನ್ನು ಅನುಸರಿಸಿ ಕಳಿಸಿದ ನೋಟೀಸು ಇಲ್ಲವೆ ಹುಕುಮು ಸಕಾಲದಲ್ಲಿ ಜಾರಿ ಆಗಿರಲಿಕ್ಕೆ ಬೇಕು ಎಂಬುದು ಕಾಯಿದೇಶೀರ ಗ್ರಹಿಕೆ ಎಂಬ ಹಾಗೆ ಇಲ್ಲಿ ಹೇಳಲಾಗಿದೆ.

## ೧೨೫. ದಾವೆ ಮಾಡುವಾಗ ನೋಟೀಸು ಆವಶ್ಯಕ

ಸಹಕಾರಿ ಸಂಘದ ವಿರುದ್ಧ ಇಲ್ಲವೆ ಅದರ ಯಾವುದೇ ಅಧಿಕಾರಿಗಳ ವಿರುದ್ಧ ಸಂಘದ ರಚನೆಗೆ, ಸಂಚಾಲನೆಗೆ, ಇಲ್ಲವೆ ವ್ಯವಹಾರಕ್ಕೆ ಹೊಂದಿಕೊಂಡ ಯಾವುದೇ ಕೃತಿಯ ಸಂಬಂಧವಾಗಿ, ದಾವೇದ ಕಾರಣ, ವಾದಿಯ ಹೆಸರು, ವರ್ಣನೆ, ವಾಸವಾಗಿರುವ ಸ್ಥಳ ಹಾಗೂ ಅವನು ಬೇಡಿದ ಪರಿಹಾರ ಇವುಗಳನ್ನು ವಿಶದಮಾಡಿದ ಲೇಖೀ ನೋಟೀಸು ರಜಿಸ್ಟ್ರಾರನಿಗೆ ಕೊಟ್ಟು, ಇಲ್ಲವೆ ಅವನ ಕಚೇರಿಯಲ್ಲಿ ಇಟ್ಟು ನಂತರ ಎರಡು ತಿಂಗಳು ಮುಗಿಯುವ ತನಕ ಯಾವುವೇ ದಾವೆಯು ಮಾಡಲ್ಪಡತಕ್ಕದ್ದಲ್ಲ; ಮತ್ತು ಇಂತಹ ನೋಟೀಸು ಕೊಟ್ಟ ಇಲ್ಲವೆ ಇಟ್ಟ ಬಗ್ಗೆ ಅಸಲ ಅರ್ಜಿಯಲ್ಲಿ ನಮೂದ ಮಾಡಲ್ಪಡತಕ್ಕದ್ದು.

**ವಿವೇಚನೆ**

ಸಹಕಾರಿ ಸಂಘದ ವಿರುದ್ಧ ಇಲ್ಲವೆ ಅದರ ಅಧಿಕಾರಿಗಳ ವಿರುದ್ಧ ದಾವೆ ಮಾಡಬೇಕಾದರೆ ನೋಟೀಸು ಕೊಡುವುದು ಅವಶ್ಯವದೆ. ಈ ದಾವೆಯು ಸಹಕಾರಿ ಸಂಘದ ವಿರುದ್ಧ ಇಲ್ಲವೆ ಅದರ ಅಧಿಕಾರಿಗಳ ವಿರುದ್ಧ ಇರಬೇಕಲ್ಲದೆ, ಸಂಘದ ರಚನೆ, ಸಂಚಾಲನ ಇಲ್ಲವೆ ವ್ಯವಹಾರಕ್ಕೆ ಹೊಂದಿಕೊಂಡ ಕೃತಿಯ ಬಗ್ಗೆ ಇರಬೇಕು. ಅಂದರೆ ಸಂಘದ ವ್ಯವಹಾರಕ್ಕೆ, ಸಂಚಾಲನಕ್ಕೆ ಇಲ್ಲದೆ ರಚನೆಗೆ ಸಂಬಂಧ ಇರದೆ

ಇರುವ ಕೃತಿಯ ಬಗ್ಗೆ ನೋಟೀಸು ಕಾರಣವಿಲ್ಲ. ಅದರಂತೆ ಸಂಘದ ಅಧಿಕಾರಿಗಳು ಸಂಘದ ವ್ಯವಹಾರಕ್ಕೆ ಸಂಬಂಧ ಪಡದೆ ಇದ್ದ ವೈಯುಕ್ತಿಕವಾಗಿ ಹೊಣೆಗಾರರಾಗಿದ್ದ ವಿಷಯಗಳ ಬಗ್ಗೆ ದಾವೆಯಾಗುವುದಿದ್ದರೆ ಅದಕ್ಕೆ ನೋಟೀಸು ಅವಶ್ಯವಿಲ್ಲ. ನೋಟೀಸು ಅವಶ್ಯವಾಗಿರುವುದು ಸಂಘದ ಸಂಬಂಧವಾಗಿರುವ ವಿಷಯುವೂ ಇರಬೇಕು. ಆ ಕೃತಿಯು ಸಂಘದಿಂದ ಇಲ್ಲವೆ ಯಾವುದೇ ಅಧಿಕಾರಿಯಿಂದ ಮಾಡಲ್ಪಟ್ಟಿರಬೇಕು. ಅಂಥ ಎಂಥದ್ದೇ ದಾವೆ ಮಾಡಬೇಕಾದಾಗ ನೋಟೀಸು ಅವಶ್ಯ.

ಈ ನೋಟೀಸು ಈ ಕೆಳಗಿನ ವಿಷಯಗಳನ್ನು ಒಳಗೊಂಡಿರಬೇಕು. ವಾದಿಯ ಹೆಸರು, ವರ್ಣನೆ, ವಾಸಸ್ಥಳ, ಬೇಡಿದ ಪರಿಹಾರ; ದಾವಾದ ಕಾರಣ, ವಾದಿಯ ಹೆಸರಿನಿಂದ ವಾದಿಯು ಯಾರು ಎಂಬುದು ತಿಳಿವುದು. ವರ್ಣನೆಯೆಂದರೆ ಅವನ ವಿಳಾಸವು ಅಹುದು; ಅವನು ದಾವೆ ಮಾಡಲು ಸಮರ್ಥನಾಗಿರುವನೋ ಇಲ್ಲವೊ ಎಂಬುದು ತಿಳಿಯಲು ಅಲ್ಪವಯಿ ಇರುವನೋ ಹುಚ್ಚನಿರುವನೋ, ಯಾವ ಸ್ಥಾನಮಾನದಿಂದ ದಾವಾ ಮಾಡಿರುವನು ಎಂಬುದು ತಿಳಿಯಲಿಕ್ಕೆ ಅನುಕೂಲವಾಗುವುದು. ದಾವಾದ ಕಾರಣ ಹಾಗೂ ಪರಿಹಾರದ ಬೇಡಿಕೆ ತಿಳಿಸುವುದರಿಂದ ದಾವೆ ಮಾಡಗೊಡದೆ ತಂಟೆಯ ನಿರ್ಣಯ ಮಾಡಲು ಬರುವುದೋ ಹೇಗೆ ಎಂಬುದನ್ನು ನೋಡಲು ಅನುಕೂಲವಾಗುವುದು, ಅಲ್ಲದೆ ದಾವೆಯ ಸ್ವರೂಪ ತಿಳಿವುದು. ಈ ಎಲ್ಲ ಮಾಹಿತಿಗಳುಳ್ಳ ನೋಟೀಸು ಕೊಡಲ್ಪಡಬೇಕು.

ನೋಟೀಸನ್ನು ರಜಿಸ್ಟ್ರಾರನಿಗೆ ಕೊಡಬೇಕು. ಯಾವುದೇ ಸಹಕಾರಿ ಸಂಘದ ವಿರುದ್ಧವಾಗಿದ್ದರೂ ಯಾವುದೇ ಸಂಘದ ಯಾವುದೇ ಅಧಿಕಾರಿಯ ವಿರುದ್ಧವಾಗಿದ್ದರೂ ಆ ನೋಟೀಸು ರಜಿಸ್ಟ್ರಾರನಿಗೆ ಕೊಡಬೇಕು. ನೋಟೀಸು ಅವನಿಗೆ ಕೊಡಬೇಕು ಇಲ್ಲವೆ ಅವನ ಕಚೇರಿಯಲ್ಲಿ ಇಡಬೇಕು. ಕೊಟ್ಟರೆ ಅವನ ಸಹಿ ಸಿಕ್ಕುವುದು; ಇಟ್ಟರೆ, ಯಾರಾದರೂ ಹೊಣೆಗಾರ ಅಧಿಕಾರಿಯ ಹತ್ತಿರ ಅವನಿಂದ ಅದು ಮುಟ್ಟಿದ ಬಗ್ಗೆ ಸಹಿ ಪಡೆಯಬೇಕು ಎಂದು ಅರ್ಥ. ಯಾರಿಗೂ ಹೇಳದೆ ಕೇಳದೆ ಕಚೇರಿಯಲ್ಲಿ ಎಲ್ಲಿಯಾದರೂ ಇಡಬೇಕೆಂದು ಅರ್ಥವಲ್ಲ. ರಜಿಸ್ಟ್ರಾರನು ಇರದೇ ಇದ್ದರೆ ಅವನ ಕಚೇರಿಯಲ್ಲಿ ಅಧಿಕೃತ ವ್ಯಕ್ತಿಗೆ ಕೊಡಬಹುದೆಂಬ ಅರ್ಥ ಇದೆ- ನೋಟೀಸನ್ನು ಟಪಾಲಿನಿಂದ ರಜಿಸ್ಟರ್ ಮಾಡಿ ಕಳಿಸಬಹುದು.

ಹೀಗೆ ನೋಟೀಸು ರಜಿಸ್ಟ್ರಾರನಿಗೆ ಮುಟ್ಟಿದ ಇಲ್ಲವೆ ಕಚೇರಿಯಲ್ಲಿ ಇಟ್ಟ ತಾರೀಖಿನಿಂದ ಮುಂದೆ ಎರಡು ತಿಂಗಳ ಕಾಲಾವಧಿ ಮುಗಿದ ನಂತರ ದಾವೆ ಮಾಡಬಹುದು. ಆ ಎರಡು ತಿಂಗಳ ಅವಧಿ ಮುಗಿಯುವ ಮುಂಚೆ ದಾವಾ ಮಾಡಲು ಬರುವುದಿಲ್ಲ. ಈ ಎರಡು ತಿಂಗಳಲ್ಲಿ ದಾವೆಯನ್ನು ತಪ್ಪಿಸಲು ಸಂಘಕ್ಕೆ ಅವಕಾಶ ಕೊಟ್ಟಂತೆ. ಆದ್ದರಿಂದ ಎರಡು ತಿಂಗಳು ಮುಗಿದ ಮುಂಚೆ ದಾವಾ ಮಾಡಲಿಕ್ಕೆ ಬರುವುದಿಲ್ಲ, ಎಂಬುದನ್ನು ಗಮನಿಸಬೇಕು.

## ೧೨೬. ಕೆಲವು ದೋಷಗಳ ಮೂಲಕ ಸಹಕಾರಿ ಸಂಘಗಳು ಕಾಯಿದೆಬದ್ಧವಲ್ಲವೆಂದು ಹೇಳಲಾಗದು

ಸಂಘವ ರಚನೆಯಲ್ಲಿಯ ಯಾವುದೇ ದೋಷದ ಅಸ್ತಿತ್ವವಿದೆಯೆಂಬ ಕಾರಣಕ್ಕಾಗಿ, ಇಲ್ಲವೆ ಕಮಿಟಿಯ ರಚನೆಯಲ್ಲಿ ಯಾವುದೇ ದೋಷವು ಇದೆಯೆಂಬ ಕಾರಣಕ್ಕಾಗಿ, ಇಲ್ಲವೆ ಯಾವುದೇ ಅಧಿಕಾರಿಯ ನೇಮಕ ಇಲ್ಲವೆ ಚುನಾವಣೆಯಲ್ಲಿ ಯಾವುದೇ ದೋಷ ಇವೆಯೆಂಬ ಕಾರಣಕ್ಕಾಗಿ, ಇಲ್ಲವೆ ಇಂತಹ ಅಧಿಕಾರಿಯು ನೇಮಕಕ್ಕೆ ಅನರ್ಹನಾಗಿದ್ದನೆಂಬ ಕಾರಣಕ್ಕಾಗಿ ಮಾತ್ರ ಸಹಕಾರಿ ಸಂಘದ ಇಲ್ಲವೆ ಯಾವುದೇ ಕಮಿಟಿಯ ಇಲ್ಲವೆ ಯಾವುದೇ ಅಧಿಕಾರಿಯ ಯಾವುದೇ ಕೃತಿಯು ಕಾಯಿದೇಬದ್ಧನಾಗಿಲ್ಲವೆಂದು ಗಣಿಸಲ್ಪಡತಕ್ಕದ್ದಲ್ಲ.

**ವಿವೇಚನೆ**

ಸಂಘದ ರಚನೆಯಲ್ಲಿ ಒಮ್ಮೊಮ್ಮೆ ದೋಷವುಂಟಾಗುವ ಸಂಭವ ಇರುತ್ತದೆ; ಕಮೀಟಿಯ ರಚನೆಯಲ್ಲಿ ದೋಷವುಂಟಾಗುವ ಸಂಭವವಿರುತ್ತದೆ; ಯಾವುದೇ ಅಧಿಕಾರಿಯ ನೇಮಕ ಇಲ್ಲವೆ ಚುನಾವಣೆಯಲ್ಲಿ ದೋಷವುಂಟಾಗುವ ಸಂಭವ ಇರುತ್ತದೆ; ನೇಮಕವಾದ ಅಧಿಕಾರಿಯು ಅನರ್ಹತೆಯುಳ್ಳವನಾಗಿರುವ ಸಂಭವವೂ ಇರುತ್ತದೆ. ಈ ದೋಷಗಳು ಕಂಡು ಬಾರದೆ ಕಾರ್ಯವು ನಡೆದು ಹೋಗಿರುತ್ತದೆ. ಮುಂದೆ ದೋಷವು ಲಕ್ಷಕ್ಕೆ ಬರುತ್ತದೆ. ಹೀಗೆ ಇರುವ ದೋಷದ ಕಾರಣಕ್ಕಾಗಿ ಮಾತ್ರ ಸಹಕಾರಿ ಸಂಘವು ಇಲ್ಲವೆ ಕಮಿಟಿಯು ಇಲ್ಲವೆ ಯಾವುದೇ ಅಧಿಕಾರಿಯು ಮಾಡಿದ ಕೃತಿಯು ಕಾಯಿದೆಬದ್ಧವಾಗಿಲ್ಲ, ಎಂದು ಅನ್ನತಕ್ಕದ್ದಲ್ಲ. ದೋಷವು ಕಂಡು ಬಂದ ನಂತರ ದೋಷವನ್ನು ಸರಿಪಡಿಸಬೇಕೆ ಹೊರತು ದೋಷ ಇದ್ದ ಕಾರಣದಿಂದ ಆ ಸಮಯದಲ್ಲಿ ಮಾಡಲಾದ ಕೃತಿಯು ಕಾಯಿದೆಬದ್ಧವಾಗಿಲ್ಲದೆಂದು ಆದ ಕೃತಿಯನ್ನು ಅಲ್ಲಗಳೆಯಲು ಬರುವದಿಲ್ಲ ಎಂದು ಈ ಕಲಮು ಹೇಳುತ್ತದೆ. ಈ ಬಗೆಯ ದೋಷವಿದೆಯೆಂಬ ಕಾರಣಕ್ಕಾಗಿ ಮಾತ್ರ ಎಂಬುದನ್ನು ಗಮನಿಸಬೇಕು. ಈ ಬಗೆಯ ದೋಷವಿದ್ದರೆ ಆ ಕೃತಿಯು ಕಾಯಿದೆಬದ್ಧವಾಗಿಲ್ಲವೆಂದು ಹೇಳಲು ಬಾರದು. ಈ ಬಗೆಯ ದೋಷವಲ್ಲದೆ ಬೇರೆ ಯಾವುದೆ ಕೊರತೆ ಇಲ್ಲವೆ ಕುಂದು ಇದ್ದರೆ ಈ ರೀತಿಯ ರಕ್ಷಣೆಯನ್ನು ಈ ಕಲಮು ಕೊಡುವುದಿಲ್ಲ, ಎಂಬುದು 'ಮಾತ್ರ' ಎಂಬ ಶಬ್ದದಲ್ಲಿ ಅಡಕವಾಗಿದೆ.

## ೧೨೭ ಅಭಯ

ಈ ಕಾಯಿದೆಯನ್ವಯವಾಗಿ ಸದ್ಭಾವನೆಯಿಂದ ಮಾಡಿದ ಇಲ್ಲವೆ ಮಾಡಲಾಗಿದೆಯೆಂದು ಗಣಿಸಲಾದ ಯಾವುದೇ ವಿಷಯದ ಸಂಬಂಧವಾಗಿ ರಜಿಸ್ಟ್ರಾರನ ವಿರುದ್ಧವಾಗಿ ಇಲ್ಲವೆ ಅವನ ಕೈಕೆಳಗೆ ಕೆಲಸಮಾಡುವ ಯಾವುದೇ ವ್ಯಕ್ತಿಯ ವಿರುದ್ಧ

ಇಲ್ಲವೆ ಅವನ ಅಧಿಕಾರದ ಮೂಲಕ ಕಾರ್ಯಮಾಡುತ್ತಿರುವ ಯಾವುದೇ ವ್ಯಕ್ತಿಯ ವಿರುದ್ಧ ಯಾವುದೇ ದಾವೆ, ಖಟ್ಲೆ ಇಲ್ಲವೆ ಇತರ ಕಾಯಿದೇಶೀರ ಪ್ರಕರಣಗಳು ಉಂಟಾಗತಕ್ಕದ್ದಲ್ಲ.

**ವಿವೇಚನೆ**

ಈ ಕಾಯಿದೆಯನ್ವಯವಾಗಿ ಕಾರ್ಯ ಮಾಡಲ್ಪಟ್ಟಿರಬೇಕು. ಅದು ಸದ್ಭಾವನೆಯಿಂದ ಮಾಡಲ್ಪಟ್ಟಿರಬೇಕು; ಇಲ್ಲವೆ ಸದ್ಭಾವನೆಯಿಂದ ಮಾಡಲಾಗಿದೆಯೆಂದು ಗಣಿಸಲ್ಪಟ್ಟಿರಬೇಕು. ಅಂದಾಗ ಯಾವುದೇ ಅಪರಾಧ ಇಲ್ಲವೆ ಹೊಣೆಗಾರಿಕೆ ಉಂಟಾಗುವುದಿಲ್ಲ. ಅಪರಾಧ ಇಲ್ಲವೆ ಹೊಣೆಗಾರಿಕೆ ಉಂಟಾಗಬೇಕಾದರೆ ಬುದ್ಧಿಪೂರ್ವಕವಾಗಿ ತಪ್ಪು ಇಲ್ಲವೆ ಅಪರಾಧ ಮಾಡಲ್ಪಟ್ಟಿರಬೇಕು. ಆದ್ದರಿಂದ ಸದ್ಭಾವನೆಯಿಂದ ಮಾಡಿದ ಕೃತಿಗೆ ಆ ಕೃತಿಯನ್ನು ಮಾಡಿದ ವ್ಯಕ್ತಿಗೆ ಈ ಕಲಮು ದಾವೆ, ಖಟ್ಲೆ ಇಲ್ಲವೆ ಇತರ ಕಾಯಿದೇಶೀರ ಪ್ರಕರಣಗಳಿಂದ ಅಭಯವನ್ನು ಕೊಡುತ್ತದೆ. ಈ ಅಭಯವು ರಜಿಸ್ಟ್ರಾರನಿಗೆ ಇಲ್ಲವೆ ಅವನ ಕೈಕೆಳಗೆ ಕೆಲಸಮಾಡುವ ವ್ಯಕ್ತಿಗೆ ಇಲ್ಲವೆ ರಜಿಸ್ಟ್ರಾರನಿಂದ ಅಧಿಕಾರ ಪಡೆದ ವ್ಯಕ್ತಿಗೆ ಈ ಕಲಮಿನಿಂದ ದೊರಕುತ್ತದೆ. ಅಂತಹರ ವಿರುದ್ಧ ಯಾವುದೇ ದಾವೆ-ಖಟ್ಲೆ-ಇಲ್ಲವೆ ಕಾಯಿದೇಶೀರ ಪ್ರಕರಣಗಳು ಉಂಟಾಗತಕ್ಕದ್ದಲ್ಲ. ಸದ್ಭಾವನೆಯಿಂದ ಮಾಡಿದ ಕಾರ್ಯಕ್ಕೆ ಹಾಗೂ ವ್ಯಕ್ತಿಗೆ ಅಭಯ ಎಂಬುದನ್ನು ಗಮನಿಸಬೇಕು. ಸದ್ಭಾವನೆ ಇರದಿದ್ದರೆ, ಹೊಣೆಗಾರಿಕೆ ಉಂಟಾಗುವುದು ಎಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.

ಸದ್ಭಾವನೆ, ( ಗುಡ್‌ಫೇಥ ) ಎಂಬುದು ಪೀನಲಕೋಡದಲ್ಲಿ ವ್ಯಾಖ್ಯೆ ಮಾಡಲಾಗಿದೆ. ಯಾವುದು ಯೋಗ್ಯ ಕಾಳಜಿ ಹಾಗೂ ಲಕ್ಷದಿಂದ ಮಾಡಲ್ಪಟ್ಟಿಲ್ಲವೋ ಅದು ಸದ್ಭಾವನೆಯಿಂದ ಮಾಡಲ್ಪಟ್ಟಿಲ್ಲ, ಎಂದು ಹೇಳಲಾಗುತ್ತದೆ. ಕಾರ್ಯಕ್ಕೆ ತಕ್ಕ ಕಾಳಜಿ ಹಾಗೂ ಲಕ್ಷ್ಯ ಇರಬೇಕಾದುದು ಹೊಣೆಯರಿತ ಲಕ್ಷಣ. ಹೊಣೆ ಅರಿತು, ಕಾಳಜಿಯಿಂದ ಲಕ್ಷಪೂರ್ವಕವಾಗಿ ಮಾಡಿದ ಕೃತಿಗಳು ಸದ್ಭಾವನೆಯಿಂದ ಮಾಡಲಾದುವು ಎಂದು ಅರ್ಥ. ಅಂತಹ ಸಂದರ್ಭಗಳಲ್ಲಿ ಈ ಕಲಮಿನಿಂದ ಅಭಯ ದೊರೆಯುತ್ತದೆ.

**೧೨೮. ೧೯೫೬ ರ ಕಂಪನಿ ಕಾಯಿದೆಯು ಅನ್ವಯಿಸಲಾಗದು**

೧೯೫೬ (ಕೇಂದ್ರ ಕಾಯಿದೆ ೧— ೧೯೫೬) ರ ಕಂಪನೀಜ ಆ್ಯಕ್ಟದ ಶರತ್ತುಗಳು ಸಹಕಾರಿ ಸಂಘಗಳಿಗೆ ಅನ್ವಯಿಸತಕ್ಕದ್ದಲ್ಲ.

**ವಿವೇಚನೆ**

ಸಹಕಾರಿ ಸಂಘವು ಸಂಸ್ಥೀಕೃತ ಸಂಸ್ಥೆಯಾಗಿದ್ದು ನೋಂದಾಯಿಸಲ್ಪಟ್ಟ ಸಂಘವು. ಕಂಪನಿಗಳು ಕೂಡ ಸಂಸ್ಥೆಗಳು, ನೋಂದಾಯಿಸಲ್ಪಟ್ಟವು. ಆದರೆ ಸಹಕಾರಿ ಸಂಘಗಳು ಈ ಸಹಕಾರಿ ಸಂಘಗಳ ಕಾಯಿದೆಯನ್ವಯವಾಗಿ ನೋಂದಾ

ಯಿಸಲ್ಪಟ್ಟವು. ರೂಪ-ರಚನೆಯಲ್ಲಿ ಕಂಪನಿಗಳು ಹಾಗೂ ಸಹಕಾರಿ ಸಂಘಗಳು ಒಂದೇ ಆಗಿದ್ದರೂ ಅವುಗಳ ಕಾರ್ಯ-ಉದ್ದೇಶ ಭಿನ್ನವಾಗಿರುವುದರಿಂದ ಅವುಗಳನ್ನು ಪ್ರತ್ಯೇಕವಾಗಿಯೇ ನೋಡತಕ್ಕದ್ದು. ಆದ್ದರಿಂದ ಕಂಪನಿ ಕಾಯಿದೆಯ ಶರತುಗಳು ಸಹಕಾರಿ ಸಂಘಗಳಿಗೆ ಅನ್ವಯಿಸತಕ್ಕದ್ದಲ್ಲ ಎಂದು ಸ್ಪಷ್ಟಪಡಿಸಲಾಗಿದೆ.

**೧೨೯. ನಿಯಮಗಳನ್ನು ಮಾಡಲು ಅಧಿಕಾರ**

(೧) ಈ ಕಾಯಿದೆಯ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದರ ಸಲುವಾಗಿ ರಾಜ್ಯ ಸರಕಾರವು ಇಡೀ ರಾಜ್ಯಕ್ಕಾಗಿ ಇಲ್ಲವೆ ಅದರ ಯಾವುದೇ ಭಾಗಕ್ಕಾಗಿ ಮತ್ತು ಸಹಕಾರಿ ಸಂಘಗಳ ಯಾವುದೇ ವರ್ಗಕ್ಕಾಗಿ, ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟಣೆಯಿಂದ ಅದನ್ನು ಮೊದಲೇ ಪ್ರಸಿದ್ಧಮಾಡಿ ನಿಯಮಗಳನ್ನು ಮಾಡಬಹುದು.

(೨) ನಿರ್ದಿಷ್ಟವಾಗಿ ಹಾಗೂ ಮೇಲ್ಕಾಣಿಸಿದ ಅಧಿಕಾರದ ಸಾಮಾನ್ಯತೆಗೆ ವ್ಯತ್ಯಯ ಬರದಂತೆ, ಅಂತಹ ನಿಯಮಗಳು ಈ ಕೆಳಗಿನ ಎಲ್ಲ ಇಲ್ಲವೆ ಯಾವುದೇ ವಿಷಯಗಳ ಬಗ್ಗೆ ಅನುಕೂಲಿಸಬಹುದು; ಅವು ಯಾವುವೆಂದರೆ—

(ಅ) ಸಹಕಾರಿ ಸಂಘದ ನೋಂದಣಿಯನ್ನು ನಿರಾಕರಿಸಿದ ಹುಕುಮನ್ನು ಅರ್ಜದಾರನಿಗೆ ರಜಿಸ್ಟ್ರಾರನಿಂದ ಕಳಿಸಲ್ಪಡಬಹುದಾದ ವಿಷಯದ ಸಂಬಂಧವಾಗಿ;

(ಬ) ಸಹಕಾರಿ ಸಂಘದ ಸ್ವರೂಪ ಹಾಗೂ ಹೊಣೆಗಾರಿಕೆಯ ವ್ಯಾಪ್ತಿಯ ಬದಲಾವಣೆಯ ಸಲುವಾಗಿ ಕರಾರುಗಳ ಹಾಗೂ ವಿಧಾನದ ಸಂಬಂಧವಾಗಿ;

(ಕ) ಯಾವ ವಿಷಯಗಳ ಬಗ್ಗೆ ಸಹಕಾರಿ ಸಂಘವು ಪೋಟನಿಯಮಗಳನ್ನು ಮಾಡಬಹುದು ಇಲ್ಲವೆ ಮಾಡತಕ್ಕದ್ದು ಎಂಬ ವಿಷಯಗಳ ಸಂಬಂಧವಾಗಿ;

(ಡ) ಸಹಕಾರಿ ಸಂಘದಿಂದ ಪೋಟನಿಯಮಗಳ ತಿದ್ದುಪಡಿಯ ಸಲುವಾಗಿ ವಿಧಾನವನ್ನು ಅನುಸರಿಸಲ್ಪಡುವ ವಿಷಯದ ಸಂಬಂಧವಾಗಿ;

(ಇ) ಸಹಕಾರಿ ಸಂಘಗಳ ಸದಸ್ಯರೆಂದು ಪ್ರವೇಶ ಕೊಡಲ್ಪಡಬಹುದಾದ ವ್ಯಕ್ತಿಗಳ ಅರ್ಹತೆಯ ಗುಣಗಳ ಸಂಬಂಧವಾಗಿ;

(ಫ) ಸಹಕಾರಿ ಸಂಘದ ಸಭೆಯು ಚೇರಮನ್ನನಿಗೆ ಎರಡನೆಯ ಇಲ್ಲವೆ ಹೆಚ್ಚಿನ ಮತದ ಸಲುವಾಗಿ ಅನುಕೂಲತೆ ಮಾಡಿಕೊಡುವುದರ ಸಂಬಂಧವಾಗಿ;

(ಗ) ಯಾವ ಇನ್ನೊಂದು ಸಹಕಾರಿ ಸಂಘದ ಸದಸ್ಯವು ತಾನು ಆಗಿರುವುದೋ ಆ ಸಂಘದ ಸಭೆಯಲ್ಲಿ ತನ್ನನ್ನು ಪ್ರತಿನಿಧಿಸುವುದಕ್ಕೆ ಹಾಗೂ ಅಲ್ಲಿ ಮತದಾನ ಮಾಡಲಿಕ್ಕೆ ಸಹಕಾರಿ ಸಂಘವು ತನ್ನ ಸದಸ್ಯರಲ್ಲಿಯ ಒಬ್ಬ ಸದಸ್ಯನನ್ನು ನೇಮಕಮಾಡುವುದರ ಸಂಬಂಧವಾಗಿ;

(ಹ) ಸಹಕಾರಿ ಸಂಘದ ಶೇರುಬಂಡವಳದ ಮೇಲ್ಮಿತಿಯ ಭಾಗವನ್ನು ಇಲ್ಲವೆ ಮೇಲ್ಮಿತಿಯ ಸಂಖ್ಯೆಯ ಶೇರುಗಳನ್ನು ಒಬ್ಬ ವ್ಯಕ್ತಿಸದಸ್ಯನು ಪಡೆಯಬಹುದಾದುದರ ಸಂಬಂಧವಾಗಿ;

(ಈ) ಮರಣದ ಮೂಲಕ ಸದಸ್ಯನ ಶೇರು ಇಲ್ಲವೆ ಅವನ ಹಿತಾಸಕ್ತಿಯನ್ನು ಹಸ್ತಾಂತರ ಮಾಡುವುದಕ್ಕೆ ವ್ಯಕ್ತಿಯನ್ನು ನಾಮಕರಣ ಮಾಡುವ ವಿಧಾನದ ಇಲ್ಲವೆ ಆ ಬಗ್ಗೆ ಬೆಲೆಯನ್ನು ಕೊಡುವ ವಿಧಾನದ ಸಂಬಂಧವಾಗಿ;

(ಜ) ಮರಣ ಹೊಂದಿದ ಸದಸ್ಯನ ಶೇರದ ಬೆಲೆಯನ್ನು ನಿಶ್ಚಿತಗೊಳಿಸತಕ್ಕ ಪದ್ಧತಿಯ ಸಂಬಂಧವಾಗಿ;

(ಕಾ) ಸಹಕಾರಿ ಸಂಘದ ಸಾಮಾನ್ಯ ಸಭೆಯಿಂದ, ಕಮಿಟಿಯ ಸದಸ್ಯರನ್ನು ಚುನಾಯಿಸುವುದರ ಸಂಬಂಧವಾಗಿ

(ಲ) ಸಹಕಾರಿ ಸಂಘದ ಸಾಮಾನ್ಯಸಭೆಯನ್ನು ಬೇಡಿಕೆಯ ಮೂಲಕ ಸೇರಿಸುವುದರ ಸಂಬಂಧವಾಗಿ;

(ಮ) ರಜಿಸ್ಟ್ರಾರನಿಂದ ತೆಗೆದುಹಾಕಲ್ಪಟ್ಟ ಕಮಿಟಿಯ ಸ್ಥಳದಲ್ಲಿ ನೇಮಕವಾದ ಹೊಸ ಕಮಿಟಿ ಇಲ್ಲವೆ ಆಡಳಿತಗಾರನಿಗೆ ಕೊಡಬಹುದಾದ ವೇತನದ ಸಂಬಂಧವಾಗಿ;

(ನ) ಸಹಕಾರಿ ಸಂಘದ ಕಮಿಟಿಯ ಸದಸ್ಯತ್ವಕ್ಕಾಗಿ ಅರ್ಹತೆಗಳನ್ನು ಹಾಗೂ ಅನರ್ಹತೆಗಳನ್ನು ನಿರ್ಧರಿಸುವ ಸಂಬಂಧವಾಗಿ;

(ಓ) ಸಹಕಾರಿ ಸಂಘಗಳ ನೌಕರದಾರರ ಅರ್ಹತೆಗಳ ಹಾಗೂ ನೌಕರಿಯ ಕರಾರುಗಳ ಸಂಬಂಧವಾಗಿ;

(ಪ) ಸಂಘದ ಸಂಗಡ ಆದ ಕರಾರು ಒಪ್ಪಂದಗಳಲ್ಲಿ ಸಹಕಾರಿ ಸಂಘದ ಅಧಿಕಾರಿಗಳು ಹಿತಾಸಕ್ತಿಯನ್ನು ವಹಿಸುವುದನ್ನು ಪ್ರತಿಬಂಧಿಸುವ ಸಂಬಂಧವಾಗಿ;

(ಕೂ) ಸಹಕಾರಿ ಸಂಘಗಳೊಡನೆ ರಾಜ್ಯ ಸರಕಾರವು ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷ ಪಾಲುಗಾರಿಕೆಗೆ ಸಂಬಂಧ ಪಟ್ಟ ವಿಷಯಗಳ ಸಂಬಂಧವಾಗಿ;

(ರ) ಸಹಕಾರಿ ಸಂಘಗಳಿಂದ ಕೊಡಲ್ಪಡಬಹುದಾದ ಲಾಭಾಂಶದ ದರದ ಸಂಬಂಧವಾಗಿ.

(ಸ) ಸಹಕಾರಿ ಸಂಘದ ರಿಜರ್ವ ಫಂಡದ ಉದ್ದೇಶಗಳ ಹಾಗೂ ಅದನ್ನು ತೊಡಗಿಸುವ ವಿಧಾನದ ಸಂಬಂಧವಾಗಿ.

(ಟ) ಸಹಕಾರಿ ಸಂಘವು ದುಂಡು ಸುತ್ತಲ್ಪಟ್ಟಾಗ ರಿಜರ್ವ ಫಂಡಿನ ವಿಲೇವಾಟವನ್ನು ಮಾಡುವ ವಿಧಾನದ ಸಂಬಂಧವಾಗಿ.

(ಉ) ಸಹಕಾರಿ ಸಂಘವು ಠೇವುಗಳನ್ನು ಹಾಗೂ ಸಾಲಗಳನ್ನು ಯಾವ ಕರಾರಗಳ ಅಂಕಿತವಾಗಿ ಹಾಗೂ ಎಷ್ಟು ವ್ಯಾಪ್ತಿಯ ವರೆಗೆ ಎಂಬುದರ ಸಂಬಂಧವಾಗಿ.

(ವಿ) ಸದಸ್ಯರಲ್ಲದವರ ಸಂಗಡ ಸಹಕಾರಿ ಸಂಘದಿಂದ ಮಾಡಲ್ಪಡುವ ವ್ಯವಹಾರಗಳ ನಿರ್ಬಂಧಗಳ ಸಂಬಂಧವಾಗಿ.

(ಊ) ಸಹಕಾರಿ ಸಂಘದಿಂದ ತನ್ನ ಶೇರುಗಳ ಆಧಾರದ ಮೇಲೆ ಸಾಲಗಳನ್ನು ದಯಪಾಲಿಸುವುದರ ಬಗ್ಗೆ ಇರುವ ನಿರ್ಬಂಧಗಳ ಸಂಬಂಧವಾಗಿ.

(ಕ್ಷ) ಠೇವುಗಳನ್ನು ಸ್ವೀಕರಿಸುವ ಹಾಗೂ ನಗದು ಪತ್ರನ್ನು ದಯಪಾಲಿಸುವ ಸಹಕಾರಿ ಸಂಘಗಳಿಂದ ಪಾಲನ ಮಾಡಬೇಕಾದ ಚಾಲ್ತಿ ಸಂಪತ್ತಿನ ರೂಪ ಹಾಗೂ ಪ್ರಮಾಣಗಳ ಸಂಬಂಧವಾಗಿ.

(ಯ) ಸಹಕಾರಿ ಸಂಘಗಳ ಮೇಲೆ ಲೆಕ್ಕ ತಪಾಸಣೆಯ ಸಲುವಾಗಿ ಹಾಕುವ ಫೀಗಳ ಸಂಬಂಧವಾಗಿ.

(ಝ) ತಂಟೆಗಳನ್ನು ನಿರ್ಣಯಿಸುವ ರಜಿಸ್ಟ್ರಾರನ ಮಧ್ಯಸ್ಥಿಕೆಗಾರನ, ಇಲ್ಲವೆ ಬೇರೆ ವ್ಯಕ್ತಿಯ ಎದುರು ನಡೆದ ಪ್ರಕರಣಗಳಲ್ಲಿ ಅನುಸರಿಸಬೇಕಾದ ವಿಧಾನದ ಸಂಬಂಧವಾಗಿ.

(ಅಅ) ಸಹಕಾರಿ ಸಂಘದ ಸೊತ್ತುಗಳು ಲಿಕ್ವಿಡೇಟರನಲ್ಲಿ ಯಾವ ಕರಾರುಗಳ ಅಂಕಿತವಾಗಿ ಅಂತರ್ಗತವಾಗಿರತಕ್ಕದ್ದು. ಹಾಗೂ ಸಹಕಾರಿ ಸಂಘದ ಡುಂಡು ಸುತ್ತುವಿಕೆಯು ನಡೆವಾಗ ಯಾವ ವಿಧಾನ ಅನುಸರಿಸತಕ್ಕದ್ದು ಎಂಬುದರ ಸಂಬಂಧವಾಗಿ,

(ಬಬ) ಸಹಕಾರಿ ಸಂಘಕ್ಕೆ ಸಲ್ಲಬೇಕಾಗಿದ್ದ ಇಲ್ಲವೆ ಕೊಡಲ್ಪಡಬೇಕಾಗಿದ್ದ ರಕಮುಗಳ ವಸೂಲಿಯ ಸಲುವಾಗಿರುವ ವಿಧಾನದ ಸಂಬಂಧವಾಗಿ.

(ಕಕ) ತಂಟೆಯು ನಿರ್ಣಯವಾಗುವ ಮೊದಲು ಮಾಡಬೇಕಾದ ಜಪ್ತಿಯ ವಿಧಾನದ ಸಂಬಂಧವಾಗಿ,

(ಡಡ) ಲ್ಯಾಂಡ ಮಾರ್ಗೇಜ ಬ್ಯಾಂಕಿಗೆ ಒತ್ತಿ ಹಾಕಲಾದ ಆಸ್ತಿಯ ಜಪ್ತಿಯ ಹಾಗೂ ಮಾರಾಟದ ಸಲುವಾಗಿರುವ ವಿಧಾನದ ಸಂಬಂಧವಾಗಿ,

(ಇಇ) ಸಹಕಾರಿ ಸಂಘದ ವಿಳಾಸವನ್ನು ನೋಂದಾಯಿಸುವುದರ ರೀತಿಯ ಸಂಬಂಧವಾಗಿ,

(ಫಫ) ಸಹಕಾರಿ ಸಂಘದಿಂದ ಇಡಲ್ಪಡಬೇಕಾದ ಲೆಕ್ಕದ ಪುಸ್ತಕಗಳ ಹಾಗೂ ರಜಿಸ್ಟರುಗಳ ಸಂಬಂಧವಾಗಿ ಮತ್ತು ಲೆಕ್ಕಗಳು ಮತ್ತು ಇತರ ಪುಸ್ತಕಗಳನ್ನು ಬರೆಯಲ್ಪಡಬೇಕೆಂದು ನಿರ್ದೇಶಿಸಲು ರಜಿಸ್ಟ್ರಾರನ ಅಧಿಕಾರದ ಸಂಬಂಧವಾಗಿ.

(ಗಗ) ಸಹಕಾರಿ ಸಂಘದ ಪುಸ್ತಕಗಳಲ್ಲಿ ನಮೂದಾದ ಸಂಗತಿಗಳನ್ನು ಸರ್ಟಿಫಿಕೇಶನದ ರೀತಿಯ ಸಂಬಂಧವಾಗಿ ಹಾಗೂ ವ್ಯವಹಾರದ ಪದ್ಧತಿಯ ಪ್ರಕಾರ ಅದು ಇಟ್ಟ ದಾಖಲೆ ಪತ್ರಗಳ ನಕಲುಗಳ ಸರ್ಟಿಫಿಕೇಶನದ ರೀತಿಯ ಸಂಬಂಧವಾಗಿ,

(ಹಹ) ರಜಿಸ್ಟ್ರಾರನಿಗೆ ಸಹಕಾರಿ ಸಂಘಗಳಿಂದ ಸಾದರಪಡಿಸಲ್ಪಬೇಕಾದ ಹೇಳಿಕೆಗಳ ಹಾಗೂ ವಿವರ ಪತ್ರಿಕೆಗಳ ಸಂಬಂಧವಾಗಿ,

(ಈಈ) ವಕೀಲಿ ವ್ಯವಸಾಯ ಮಾಡುವವರೆಂದು ಹಾಜರಾಗುವ ವ್ಯಕ್ತಿಗಳ ಮೇಲಿನ ನಿರ್ಬಂಧಗಳ ಸಂಬಂಧವಾಗಿ,

(ಜಜ) ದಾಖಲೆ ಪತ್ರಗಳ ಪರಿಶೀಲನೆಯ ಸಂಬಂಧವಾಗಿ ಹಾಗೂ ಅವುಗಳ ಸರ್ಟಿಫಾಯಿಡ ನಕಲುಗಳನ್ನು ದಯಪಾಲಿಸಲು ಹಾಕಬೇಕಾದ ಫೀಗಳ ಸಂಬಂಧವಾಗಿ, ಮತ್ತು

(ಕಾಕಾ) ಈ ಕಾಯಿದೆಯಿಂದ ಗೊತ್ತು ಮಾಡಲ್ಪಡತಕ್ಕದೆಂದು ನಿರ್ದಿಷ್ಟವಾಗಿ ಹೇಳಿದ ಇಲ್ಲವೆ ಅನುಮತಿಸಿದ ವಿಷಯುಗಳ ಸಂಬಂಧವಾಗಿ.

(೩) ಈ ಕಲಮಿನನ್ವಯವಾಗಿ ನಿಯಮವನ್ನು ಮಾಡುವಾಗ ಆ ನಿಯಮವನ್ನು ಮುರಿದು ಅಪರಾಧ ಮಾಡಿದ ವ್ಯಕ್ತಿಯು ಎರಡು ನೂರು ರೂಪಾಯಿಗಳವರೆಗೆ ವ್ಯಾಪಿಸಬಹುದಾದಷ್ಟ ದಂಡದ ಶಿಕ್ಷೆಗೆ ಪಾತ್ರನಾಗತಕ್ಕದ್ದೆಂಬ ಹಾಗೆ ರಾಜ್ಯ ಸರಕಾರವು ವ್ಯವಸ್ಥೆ ಮಾಡಬಹುದು.

**ವಿವೇಚನೆ**

ರಾಜ್ಯ ಸರಕಾರವು ಈ ಕಾಯಿದೆಯ ಉದ್ದೇಶಗಳನ್ನು ಕಾರ್ಯಕಾರಿ ಮಾಡುವುದಕ್ಕಾಗಿ ನಿಯಮಗಳನ್ನು ಮಾಡಬಹುದು. ನಿಯಮಗಳು ಇಡೀ ರಾಜ್ಯಕ್ಕೆ ಅನ್ವಯಿಸುವಂತೆ ಇಲ್ಲವೆ ರಾಜ್ಯದ ಯಾವುದೇ ಪ್ರದೇಶಿಕ ಭಾಗಕ್ಕೆ ಅನ್ವಯಿಸುವ ಹಾಗೆ ಮಾಡಬಹುದು. ಸಹಕಾರಿ ಸಂಘಗಳ ಯಾವುದೇ ವರ್ಗದ ಸಲುವಾಗಿ ಮಾಡಬಹುದು. ನಿಯಮಗಳನ್ನು ಮಾಡುವುದಕ್ಕಿಂತ ಮೊದಲು ಅಧಿಕೃತ ಗ್ಯಾಜೆಟದಲ್ಲಿ ಪ್ರಕಟನೆಯಿಂದ ಪ್ರಸಿದ್ಧಿಸಲ್ಪಡಬೇಕು. ನಂತರ ನಿಯಮ ಗಳನ್ನು ಮಾಡಬಹುದು.

ಈ ಸಾಮಾನ್ಯ ಅಧಿಕಾರಕ್ಕೆ ವ್ಯತ್ಯಯ ಬರದಂತೆ ನಿರ್ದಿಷ್ಟವಾಗಿ ಈ ಕೆಳಗಿನ ವಿಷಯುಗಳ ಸಂಬಂಧವಾಗಿ ನಿಯಮಗಳನ್ನು ಮಾಡಬಹುದು, ಅಂದರೆ ಇಲ್ಲಿ ಹೇಳಿದ ವಿಷಯುಗಲ್ಲದೆ ಬೇರೆ ವಿಷಯುಗಳ ಬಗ್ಗೆ ನಿಯಮಗಳನ್ನು ಮಾವುದಕ್ಕೆ ಈ ಕಲಮಿನ ಉಪಕಲಮು (೧)ರಲ್ಲಿ ಹೇಳಿದ ಸಾಮಾನ್ಯ ಅಧಿಕಾರವು ರಾಜ್ಯ ಸರಕಾರಕ್ಕೆ ಅಧಿಕಾರ ಕೊಡುತ್ತದೆ. ಆ ಅಧಿಕಾರವು "ಈ ಕಾಯಿದೆಯ ಉದ್ದೇಶವನ್ನು ಕಾರ್ಯಕಾರಿ ಮಾಡುವುದಕ್ಕಾಗಿ" ಎಂಬ ವಾಕ್ಯದಲ್ಲಿದೆ. ನಿರ್ದಿಷ್ಟವಾದ ವಿಷಯುಗಳ ಪಟ್ಟಿಯನ್ನು ಉಪಕಲಮು (೨) ರಲ್ಲಿ ಕೊಡಲಾಗಿದೆ. ಪಟ್ಟಿಯು ಸಾಕಷ್ಟು ವಿವರವಾಗಿದ್ದು ಸಾಮಾನ್ಯವಾಗಿ ಎಲ್ಲ ವಿಷಯುಗಳನ್ನು ಒಳಗೊಂಡಿರುವ ಹಾಗೆ ಇದೆ.

ಇಲ್ಲಿ ಕಾಣಿಸಿದ ವಿಷಯುಗಳು ಬೇರೆ ಬೇರೆ ಕಲಮುಗಳಲ್ಲಿ ಅಡಕವಾಗಿವೆ. ರಜಿಸ್ಟ್ರಾರನಿಂದ ಸಹಕಾರಿ ಸಂಘದ ನೋಂದಣಿಯು ನಿರಾಕರಿಸಲ್ಪಟ್ಟ ಬಗ್ಗೆ ಅರ್ಜದಾರನಿಗೆ ತಿಳಿಸಬೇಕಾದುದು ಕಲಮು ೭ ರ ಉಪಕಲಮು (೩) ರಲ್ಲಿ ಹೇಳಲಾಗಿದೆ. ಆ ಬಗ್ಗೆ ನಿಯಮಗಳನ್ನು ಮಾಡಬೇಕಾಗುವುದು. ನೋಂದಣಿಯಾಗುವ ಕಾಲಕ್ಕೆ ಸಂಘವು ತನ್ನ ಪೋಟ ನಿಯಮಗಳನ್ನು ಸಾದರಪಡಿಸಬೇಕಾಗುವುದು. ಯಾವುದರ ಬಗ್ಗೆ ಪೋಟ ನಿಯಮಗಳು ಮಾಡಲ್ಪಡಬೇಕೆಂಬ ಬಗ್ಗೆ ಕಲಮು ೭ ರ ಉಪಕಲಮು (೧) ರ ವಾಕ್ಯಾವಳಿ (ಡ) ದಲ್ಲಿದೆ. ಆ ಬಗ್ಗೆ ನಿಯಮಗಳು ಆಗಬೇಕು. ಒಮ್ಮೆ ಮಾಡಿದ ಪೋಟ ನಿಯಮಗಳಲ್ಲಿ ತಿದ್ದುಪಡಿ ಮಾಡಬೇಕಾದರೆ ಹೇಗೆ ಮಾಡಬೇಕೆಂಬ ಬಗ್ಗೆ ಕಲಮು ೧೨ ಹಾಗೂ ೧೩ ರಲ್ಲಿ ಹೇಳಿದೆ. ಆ ವಿಧಾನದ ಬಗ್ಗೆ ನಿಯಮಗಳು ಆಗಬೇಕು. ಸಂಘವು ತನ್ನ ಸ್ವರೂಪವನ್ನು, ಹೊಣೆಗಾರಿಕೆಯನ್ನು ಬದಲಿಸಬೇಕಾದರೆ ಕಲಮು ೧೧ ರ ಉಪಕಲಮು (೧) ಅಧಿ

ಕಾರ ಕೊಡುವುದು. ಆ ಸಂಬಂಧವಾಗಿ ನಿಯಮಗಳು ಆಗಬೇಕು. ಸಹಕಾರಿ ಸಂಘಕ್ಕೆ ಸದಸ್ಯನಾಗಲು ಅರ್ಹತೆಯ ವಿಷಯವು ಕಲಮು ೧೬ ರಲ್ಲಿ ಬಂದಿದೆ. ಅದರ ವಿಷಯವಾಗಿ ವಿವರಗಳು ನಿಯಮದಲ್ಲಿ ಬರುವುವು

ಮತಗಳನ್ನು ಹೇಗೆ ಹಾಕಬೇಕು? ಮತಾಧಿಕಾರವು ಹೇಗೆ ಇರುವುದು ಎಂಬುದು ಕಲಮು ೨೦-ಹಾಗೂ ೨೧ ರಲ್ಲಿ ಇರುವುದು. ಶೇರಮನ್ನಸಿಗೆ ಹೆಚ್ಚು ಮತವು ಇರಬೇಕಾಗುವುದು. ಅದರ ಸಂಬಂಧವಾಗಿ ನಿಯಮಗಳು ಮಾರ್ಗ ದರ್ಶನ ಮಾಡಬೇಕಾಗುವುದು. ಸಹಕಾರಿ ಸಂಘವು ಮತ್ತೊಂದು ಸಂಘದ ಸದಸ್ಯವಾಗಿರುವಾಗ ತನ್ನ ಪ್ರತಿನಿಧಿಯಲ್ಲಿ ಆ ಇನ್ನೊಂದು ಸಂಘದ ಸಭೆಗಳಲ್ಲಿ ಹಾಜರಿರಲು, ಮತದಾನ ಮಾಡಲು ಕಳಿಸುವುದಕ್ಕೆ ಕಲಮು ೨೧ ರ ಉಪಕಲಮು (೨) ಅಧಿಕಾರ ಕೊಡುತ್ತದೆ. ಈ ಬಗ್ಗೆ ನಿಯಮಗಳು ಆಗಬೇಕು.

ಸಹಕಾರಿ ಸಂಘವು ಶೇರು ಬಂಡವಲಿನ ಮೇಲೆ ಪ್ರಾರಂಭವಾಗುವುದು. ಯಾವ ಸದಸ್ಯನು ಎಷ್ಟು ಶೇರುಗಳನ್ನು ಇಲ್ಲವೆ ಶೇರು ಬಂಡವಾಳದ ಭಾಗವನ್ನು ಪಡೆಯಬಹುದು. ಅದರ ಮೇಲ್ಮಿತಿ ಎಷ್ಟು ಎಂಬುದರ ಬಗ್ಗೆ ಕಲಮು ೨೨ ಹೇಳಿ ದರೂ ಅದರ ವಿವರವನ್ನು ನಿಯಮಗಳು ಗೊತ್ತು ಮಾಡುವುವು ಆ ವಿಷಯದ ಬಗ್ಗೆ ನಿಯಮಗಳನ್ನು ರೂಪಿಸಬೇಕಾಪುದು.

ಸದಸ್ಯನು ಮರಣ ಹೊಂದಿದರೆ ಅವನ ಶೇರು ಇಲ್ಲವೆ ಹಿತಾಸಕ್ತಿಯು ಯಾವ ವ್ಯಕ್ತಿಗೆ ಹಸ್ತಾಂತರಿತವಾಗಬೇಕು. ನಾಮಕರಣ ಹೇಗೆ, ಅದರ ವಿಧಾನವು ಯಾವುದು? ಶೇರಿನ ಇಲ್ಲವೆ ಹಿತಾಸಕ್ತಿಯ ಬೆಲೆ ಹೇಗೆ ನಿರ್ಧರಿಸಲ್ಪಡ ತಕ್ಕದ್ದು. ಎಂಬ ವಿವರಗಳ ಬಗ್ಗೆ ಕಲಮು ೨೪ ರನ್ವಯವಾಗಿ ವಿವರಗಳನ್ನು ನಿಯಮಗಳು ಹೇಳಬೇಕಾಗುವುವು.

ಸಾಮಾನ್ಯ ಸಭೆಯು ಯಾವ ಕಾರ್ಯ ಕಲಾಪಗಳನ್ನು ಮಾಡಬೇಕೆಂಬು ವುದನ್ನು ಕಲಮು ೨೭ ಹೇಳುವುದು. ಆ ಕಲಮಿನ ಉಪಕಲಮು (೧) ರ ವಾಕ್ಯಾವಳಿ (ಬ) ದಲ್ಲಿ ಸಂಘದ ಕಮಿಟಿಯ ಸದಸ್ಯರ ಚುನಾವಣೆಯ ಬಗ್ಗೆ ಇದೆ. ಆ ವಿಷಯ ವಾಗಿ ನಿಯಮಗಳು ಬೇಕಾಗುವುವು. ಕಮಿಟಿಯ ಸದಸ್ಯರ ಅರ್ಹತೆ ಇಲ್ಲವೆ ಅನರ್ಹತೆಯ ವಿಷಯದ ಬಗ್ಗೆ ನಿಯಮಗಳು ಆವಶ್ಯಕವಾಗುವುವು. ಸಂಘದ ಅಧಿಕಾರಿಗಳ ಅರ್ಹತೆಗಳು, ನೌಕರದಾರರ ಅರ್ಹತೆ, ನೌಕರಿಯ ಕರಾರುಗಳು ಇವುಗಳ ಬಗ್ಗೆಯೂ ನಿಯಮಗಳು ಬೇಕು. ಆವಶ್ಯಕತೆ ಉಂಟಾದಾಗ ಸಾಧಾರಣ ಸಭೆಯನ್ನು ಬೇಡಿಕೆಯ ಮೂಲಕ ಸೇರಿಸಬೇಕಾದರೆ ನಿಯಮಗಳು ಬೇಕು.

ಒಂದು ಕಮಿಟಿಯನ್ನು ಅಧಿಕಾರದಿಂದ ತೆಗೆದು ಹಾಕಿ ಮತ್ತೊಂದು ಕಮಿಟಿ ಯನ್ನು ಇಲ್ಲವೆ ಆಡಳಿತಗಾರರನ್ನು ನೇಮಿಸುವ ಅಧಿಕಾರವು ಕಲಮು ೩೦ ( ಪ್ರಕಾರ ಬರುವುದು. ಈ ಹೊಸ ಕಮಿಟಿಯ ಇಲ್ಲವೆ ಆಡಳಿತಗಾರರ ವೇತನ ನಿರ್ಧರಿಸಲು ನಿಯಮಗಳು ಬೇಕು.

ಸರಕಾರವು ಸಹಕಾರಿ ಸಂಘಗಳ ಜತೆಗೆ ಪ್ರತ್ಯಕ್ಷ ಇಲ್ಲವೆ ಅಪ್ರತ್ಯಕ್ಷವಾಗಿ ಪಾಲುಗಾರಿಕೆಯಲ್ಲಿ ತೊಡಗಲು ಕಲಮು ೪೧ ಹಾಗೂ ೪೩ ಅಧಿಕಾರ ಕೊಡುವುವು. ಈ ಪಾಲುಗಾರಿಕೆಯು ಹೇಗೆ, ಅದರಲ್ಲಿಯ ಸಂಬಂಧ ಎಂತಹದು ಎಂಬುದರ ವಿವರವನ್ನು ಹೇಳಲು ನಿಯಮಗಳು ಬೇಕು.

ಲಾಭಾಂಶವು ಮಿತಿಮೀರಬಾರದೆಂಬ ಬಗ್ಗೆ ನಿರ್ಬಂಧಗಳನ್ನು ಕಲಮು ೪೭ ರಲ್ಲಿ ಹೇಳಿದೆ. ಆದರೆ ಲಾಭಾಂಶವನ್ನು ಮಿತಿಯ ಒಳಗೆ ಹೇಗೆ ನಿರ್ಧರಿಸಬೇಕು ಎಂಬುದಕ್ಕೆ ನಿಯಮಗಳು ಬೇಕು.

ಸಂಘಕ್ಕೆ ರಿಜರ್ವಫಂಡು ಇರುವುದು. ಅದರ ಉದ್ದೇಶಗಳು ಯಾವು ಇರಬೇಕು. ಅದರಲ್ಲಿಯ ಹಣವನ್ನು ಹೇಗೆ ತೊಡಗಿಸಬೇಕು. ಸಂಘವು ದುಂಡು ಸುತ್ತಿಲ್ಪಟ್ಟರೆ ರಿಜರ್ವಫಂಡದ ವಿಲೇವಾಟ ಹೇಗೆ ಆಗಬೇಕು. ಮುಂತಾದ ವಿವರಗಳನ್ನು ಹೇಳಲು ನಿಯಮಗಳು ಕಲಮು ೫೭–೬೪ರ ಅನುಗುಣವಾಗಿ ಆಗಬೇಕಾಗುವುದು.

ಸಹಕಾರಿ ಸಂಘವು ಸಾಲಗಳನ್ನು, ಠೇವುಗಳನ್ನು ಸ್ವೀಕರಿಸುವುದು; ಅದರಂತೆ ಸಾಲಗಳನ್ನು ಕೊಡುವುದು. ಈ ಬಗ್ಗೆ ಕಲಮು ೫೯–೬೦ ಕಲವೊಂದು ನಿರ್ಬಂಧ ಹಾಕಿರುವುವು. ಈ ನಿರ್ಬಂಧಗಳಿಗಂಕಿತವಾಗಿ ವ್ಯವಹಾರ ಮಾಡಲು ಕ್ರಮವನ್ನು ನಿರ್ಧರಿಸಲಿಕ್ಕೆ ನಿಯಮಗಳು ಬೇಕು. ಸದಸ್ಯರಲ್ಲದವರ ಸಂಗಡ ವ್ಯವಹಾರಕ್ಕೆ ಕಲಮು ೬೧ ನಿರ್ಬಂಧಗಳನ್ನು ಹೇಳಿರುವುದು. ಆದರೆ ಅಂತಹರ ಸಂಗಡ ವ್ಯವಹಾರ ಮಾಡಬೇಕಾದರೆ ಹೇಗೆ ಮಾಡಬಹುದು ಎಂಬುದನ್ನು ನಿಯಮಗಳು ಹೇಳುವುವು. ಶೇರು ಹಣದ ಆಧಾರದ ಮೇಲೆ ಸಾಲಗಳನ್ನು ಕೊಡಬೇಕಾದರೆ ಯಾವ ಕ್ರಮ ಅನುಸರಿಸಬೇಕು. ಎಂಬುದನ್ನು ನಿಯಮಗಳು ಹೇಳುವುವು.

ಸಂಘಗಳು ಠೇವು ಹಣ ಇಟ್ಟುಕೊಳ್ಳುವುವು. ಠೇವೆಂದ ಮೇಲೆ ಅವುಗಳನ್ನು ಮರಳಿ ಕೊಡಬೇಕಾಗುವುದು. ಬೇಡಿದಾಗ ಇಲ್ಲವೆ ನಿಶ್ಚಿತ ಕಾಲಾವಧಿಯಲ್ಲಿ ಕೊಡಬೇಕಾಗುವುದು. ಆ ಪ್ರಸಂಗ ಬಂದಾಗ ಕೊಡಲಿಕ್ಕೆ ಕೈಯಲ್ಲಿ ಹಣ ಬೇಕಲ್ಲವೆ. ಎಷ್ಟು ಠೇವು ಇದ್ದಾಗ ಎಷ್ಟು ಹಣ ಚಾಲತಿಯಲ್ಲಿರಬೇಕು ಎಂಬ ಬಗ್ಗೆ ನಿಯಮಗಳು ಬೇಕು. ಠೇವುದಾರನು ಬೇಡಲಿಕ್ಕೆ ಬಂದಾಗ ಸಂಘವು ಬರಿಗೈಯಲ್ಲಿರಬಾರದು.

ಸಂಘದ ಲೆಕ್ಕತಪಾಸಣೆಯು ಕಲಮು ೬೩ ರ ಪ್ರಕಾರ ಆಗುವುದು. ಎಲ್ಲ ಸಂಘಗಳು ಒಂದೇ ಮಾದರಿಯವು ಇರುವುದಿಲ್ಲ. ಲೆಕ್ಕತಪಾಸಣೆಯ ಕಾರ್ಯವು ಒಂದೇ ರೀತಿಯಲ್ಲಿ ಆಗುವುದಿಲ್ಲ. ಸಂಘದ ಮಾದರಿ, ಕಾರ್ಯದ ಗಾತ್ರಗಳ ಮೇಲೆ ಲೆಕ್ಕತಪಾಸಣಿಯ ಫೀ ಆಕರಣೆ ಆಗಬೇಕಾಗುವುದು. ಆ ಬಗ್ಗೆ ನಿಯಮಗಳು ಬೇಕು.

ಈ ಕಾಯಿದೆಯನ್ವಯದಾಗಿ ತಂಟೆಗಳ ನಿಕಾಲೆಯಾಗುವುದು ಕಲಮು ೭೧ ರ ಪ್ರಕಾರ. ೧೧೭ ನೆಯ ಕಲಮಿನಲ್ಲಿ ಸಿವಿಲ ಪ್ರೊಸೀಜರ ಕೋಡದ ಪ್ರಕಾರ ದಿವಾಣಿ ನ್ಯಾಯಾಲಯವು ಅನುಸರಿಸುವ ವಿಧಾನವನ್ನೇ ಅನುಸರಿಸಬಹುದೆಂದು

ಹೇಳಲಾಗಿವೆ. ಆದರೆ ಅಲ್ಲಿ ಹೇಳಿದುದು ಕೆಲವೊಂದು ಸಂಗತಿಗಳ ಬಗ್ಗೆ; ಉಳಿದ ವಿಷಯಗಳ ಬಗ್ಗೆ ವಿಧಾನದ ಕ್ರಮ-ಪದ್ಧತಿ- ನಿರ್ಣಯಿಸಲು ನಿಯಮಗಳು ಬೇಕು.

ಸಂಘವು ದುಂಡುಸುತ್ತಲ್ಪಡುವ ಹುಕುಮು ಮಾಡಲ್ಪಟ್ಟಾಗ ಸಂಘದ ಸೊತ್ತುಗಳು ಲಿಕ್ವಿಡೇಟರನ ಅಧಿಕಾರಕ್ಕೆ ಬರುವುವು ಎಂದು ಕಲಮು ೭೩ ಹೇಳುತ್ತದೆ. ಯಾವ ಕರಾರುಗಳ ಅಂಕಿತವಾಗಿ ಅವು ಬರುವುವು. ಮತ್ತು ದುಂಡುಸುತ್ತುವಿಕೆಯ ಕಾರ್ಯದ ವಿಧಾನವು ಹೇಗೆ ಇರಬೇಕು ಎಂಬ ಬಗ್ಗೆ ನಿಯಮಗಳು ಬೇಕು.

ಸಹಕಾರಿ ಸಂಘಕ್ಕೆ ಸಲ್ಲಬೇಕಾಗಿದ್ದ ಇಲ್ಲವೆ ಕೊಡಬೇಕಾಗಿದ್ದ ಹಣದ ವಸೂಲಿಯ ಅಧಿಕಾರವು ಕಲಮು ೧೦೦ ರಲ್ಲಿ ಹೇಳಲ್ಪಟ್ಟಿದೆ ಆದರೆ ವಸೂಲಿಯ ವಿಧಾನವು ನಿಯಮಗಳಿಂದ ಗೊತ್ತುಮಾಡಲ್ಪಡಬೇಕಾಗುವುದು.

ತಂಟೆಯ ನಿರ್ಣಯ ಆಗದೆ ಇರುವಕಿಂತ ಮೊದಲೇ ಕೆಲವು ಸಂದರ್ಭಗಳಲ್ಲಿ ಜಪ್ತಿ ಮಾಡಲಿಕ್ಕೆ ಕಲಮು ೧೦೩ ಅಧಿಕಾರ ಕೊಡುತ್ತದೆ. ಆದರೆ ಯಾವ ರೀತಿಯಿಂದ ಜಪ್ತಿಮಾಡಬೇಕೆಂಬ ವಿಧಾನವು ನಿಯಮಗಳ ಮೂಲಕ ನಿರ್ಣಯಿತವಾಗಬೇಕಾಗುವುದು.

ಲ್ಯಾಂಡಮಾರ್ಗೇಜ ಬ್ಯಾಂಕಿಗೆ ಒತ್ತಿ ಹಾಕಲ್ಪಟ್ಟ ಆಸ್ತಿಯ ಜಪ್ತಿ, ಮಾರಾಟವು ಕಲಮು ೮೮ ರ ಪ್ರಕಾರ; ಅದರ ವಿಧಾನಕ್ಕೆ ನಿಯಮಗಳು ಬೇಕು.

ಸಂಘವು ಲೆಕ್ಕಪತ್ರ ಪುಸ್ತಕಗಳನ್ನು ಹೇಗೆ ಇಡಬೇಕು. ಆ ಬಗ್ಗೆ ರಜಿಸ್ಟ್ರಾರನ ಅಧಿಕಾರ ಏನು ಎಂಬ ಬಗ್ಗೆ ನಿಯಮಗಳು ಬೇಕು.

ಕಲಮು ೧೨೩ರ ಪ್ರಕಾರ ಸಂಘದ ದಾಖಲೆ ಪತ್ರಗಳ, ಅದರಲ್ಲಿ ನಮೂದಾದ ಸಂಗತಿಗಳ ನಕಲು ಕೊಡಬಹುದಾಗಿದೆ. ಹೇಗೆ ಕೊಡಬೇಕು? ಆ ಬಗ್ಗೆ ಫೀ ಆಕರಣೆ ಎಷ್ಟು ಎಂಬುದನ್ನು ನಿಯಮಗಳು ಹೇಳಬೇಕಾಗುವುದು.

ಇದಲ್ಲದೆ ಕಾಯಿದೆಯಲ್ಲಿ ಗೊತ್ತುಮಾಡಿದ, ಎಂದು ಬಂದ ವಿಷಯಗಳು ನಿಯಮಗಳಲ್ಲಿ ಗೊತ್ತು ಮಾಡಿದ ಎಂದು ಅರ್ಥಕೊಡುತ್ತದೆಂದು ಕಲಮು ೨ (ಹ) ದಲ್ಲಿ ಹೇಳಿದೆ ಆದ್ದರಿಂದ, ಈ ಕಾಯಿದೆಯ ಯಾವ ಕಲಮುಗಳಲ್ಲಿ ಹಾಗೆ 'ಗೊತ್ತು ಮಾಡಿದ' ಎಂಬ ಪ್ರಯೋಗವಾಗಿದೆ ಆ ಬಗ್ಗೆ ನಿಯಮಗಳು ಬೇಕು.

ಕಾಯಿದೆಯ ಕಲಮುಗಳು ಅಧಿಕಾರವನ್ನು ಕೊಡುವ ಮುಖ್ಯ ಕಾರ್ಯ ಮಾಡುವುವು. ವಿವರಗಳನ್ನು ವಿಧಾನ ಕ್ರಮಗಳನ್ನು ಹೇಳುವುದು ನಿಯಮಗಳ ಕೆಲಸ. ಕಾಯಿದೆ ಹಾಗೂ ನಿಯಮಗಳು ಕೂಡಿಯೇ ನೋಡಬೇಕಾಗುವುದು. ಒಂದು ಅಧಿಕಾರ-ಇನ್ನೊಂದು ಕಾರ್ಯಾಚರಣೆಯ ವಿಧಾನ. ಆದ್ದರಿಂದಲೇ ನಿಯಮಗಳಿಗೆ ಕಾಯಿದೆಯಷ್ಟೇ ಬಲ ಇರುವುದು.

## ೧೩೦ ನಿಯಮಗಳು ಹಾಗೂ ಹುಕುಮುಗಳು ಶಾಸನ ಸಭೆಯೆದುರು ಮಂಡಿಸಲ್ಪಡತಕ್ಕದ್ದು

ಕಲಮು ೩೭, ೫೮ ಹಾಗೂ ೧೩೨ ರನ್ವಯವಾಗಿ ಹೊರಡಿಸಲಾದ ಪ್ರತಿಯೊಂದು ಪ್ರಕಟನೆಯು; ಕಲಮು ೧೨೦ ಹಾಗೂ ೧೨೧ ರನ್ವಯವಾಗಿ ಮಾಡಿದ

ಪ್ರತಿಯೊಂದು ಹುಕುಮು ಮತ್ತು ಕಲಮು ೧೪೫ ರನ್ವಯವಾಗಿ ಮಾಡಿದ ಪ್ರತಿಯೊಂದು ನಿಯಮವು ಅದು ಹೊರಡಿಸಲಾದ ಇಲ್ಲವೆ ಮಾಡಲಾದ ನಂತರ ಶಕ್ಯವಾದಷ್ಟು ಬೇಗ, ರಾಜ್ಯದ ಶಾಸನಸಭೆಯ ಹಾಗೂ ಶಾಸನಪರಿಷತ್ತಿನ ಮುಂದೆ ಅದು ಅಧಿವೇಶನದಲ್ಲಿದ್ದಾಗ, ಮೂವತ್ತು ದಿವಸಗಳ ವರೆಗೆ ಒಟ್ಟಿನಲ್ಲಿ, ಒಂದೇ ಅಧಿವೇಶನದಲ್ಲಿ ಇಲ್ಲವೆ ಎರಡು ಇಲ್ಲವೆ ಹೆಚ್ಚು ಅಧಿವೇಶನದಲ್ಲಿ ಮಂಡಿಸಲ್ಪಡತಕ್ಕದ್ದು ಮತ್ತು ಆ ಕಾಲಾವಧಿ ಮುಗಿಯುವುದರೊಳಗೆ, ಶಾಸನಸಭೆಯು ಇಲ್ಲವೆ ಪರಿಷತ್ತು ಪ್ರಕಟನೆಯಲ್ಲಿ, ಹುಕುಮಿನಲ್ಲಿ ಇಲ್ಲವೆ ನಿಯಮದಲ್ಲಿ ಯಾವುದೇ ಮಾರ್ಪಾಡು ಮಾಡಿದರೆ ಇಲ್ಲವೆ ಆ ಪ್ರಕಟನೆಯು, ಹುಕುಮು ಇಲ್ಲವೆ ನಿಯಮವು ಪರಿಣಾಮಕಾರಿಯಾಗತಕ್ಕದ್ದಲ್ಲವೆಂದು ನಿರ್ದೇಶಿಸಿದರೆ ಮತ್ತು ಆ ಮಾರ್ಪಾಡು ಇಲ್ಲದೆ ನಿರ್ದೇಶನವು ಶಾಸನಸಭೆಯು ಮಾಡಿದಾಗ ಪರಿಷತ್ತು ಒಪ್ಪಿದರೆ, ಇಲ್ಲವೆ ಪರಿಷತ್ತು ಮಾಡಿದಾಗ ಶಾಸನಸಭೆಯು ಒಪ್ಪಿದರೆ, ಆ ಪ್ರಕಟನೆಯು, ಹುಕುಮು ಇಲ್ಲವೆ ನಿಯಮವು ಆ ನಂತರ ಸಂದರ್ಭಾನುಸಾರವಾಗಿ, ಮಾರ್ಪಾಟು ಆದ ರೂಪದಲ್ಲಿ ಮಾತ್ರ ಪರಿಣಾಮಕಾರಿಯಾಗತಕ್ಕದ್ದು ಇಲ್ಲವೆ ಪರಿಣಾಮಕಾರಿಯಾಗತಕ್ಕದ್ದಲ್ಲ.

**ವಿವೇಚನೆ**

ಯಾವ ಪ್ರಕಟನೆಗಳು, ಹುಕುಮುಗಳು ಹಾಗೂ ನಿಯಮಗಳು ಶಾಸನ ಸಭೆಯೆದುರು ಮಂಡಿಸಲ್ಪಡಬೇಕು, ಎಂಬ ಬಗ್ಗೆ ಈ ಕಲಮು ಇದೆ.

ಕಲಮು ೩೭, ೫೪ ಹಾಗೂ ೧೩೨ ರನ್ವಯವಾಗಿ ಹೊರಡಿಸಿದ ಪ್ರಕಟನೆಗಳು ಶಾಸನ ಸಭೆಯೆದುರು ಮಂಡಿಸಲ್ಪಡಬೇಕು. ಕಲಮು ೩೭, ಕೆಲವು ಕರ ತೆರಿಗೆ ಹಾಗೂ ಫೀಗಳ ಬಗ್ಗೆ ವಿನಾಯತಿ ಕೊಡುವ ಬಗ್ಗೆ ಇದೆ. ಅದರನ್ವಯವಾಗಿರುವ ಪ್ರಕಟನೆಗಳು ಶಾಸನ ಸಭೆಯೆದುರು ಬರಬೇಕು.

ಕಲಮು ೫೪ ರಲ್ಲಿ ಸರಕಾರದಿಂದ ಸಹಾಯ ಮಾಡಲ್ಪಟ್ಟ ಸಂಘದ ಮೇಲೆ ನಿಯಂತ್ರಣ ಇಡುವುದರ ಸಲುವಾಗಿ ಹೇಳಲಾಗಿದೆ. ಸಹಾಯವು ಎರಡು ಲಕ್ಷ ರೂಪಾಯಿಗಳಿಗಿಂತ ಕಡಿಮೆ ಇಲ್ಲದಷ್ಟು ಹಣದಿಂದ ಮಾಡಲ್ಪಟ್ಟಿರುವುದರಿಂದ ಆ ಪ್ರಕಟನೆಯು ಶಾಸನ ಸಭೆಯೆದುರು ಬರತಕ್ಕದ್ದು.

ಕಲಮು ೧೩೨ ಆತಂಕ ನಿವಾರಣೆಗಾಗಿ ಅಧಿಕಾರ ಕೊಡುತ್ತದೆ. ಈ ಕಲಮಿನನ್ವಯವಾಗಿ ಹೊರಡಿಸಲಾದ ಪ್ರಕಟನೆಯು ಶಾಸನ ಸಭೆಯೆದುರು ಬರಬೇಕು.

ಈ ಕಲಮುಗಳನ್ವಯವಾಗಿ ಹೊರಡಿಸಲಾದ ಪ್ರತಿಯೊಂದು ಪ್ರಕಟನೆಯು ಶಾಸನಸಭೆಗಳ ಎದುರು ಬರತಕ್ಕದ್ದು.

ಕಲಮು ೧೨೦ ಹಾಗೂ ೧೨೧ ರನ್ವಯವಾಗಿ ಮಾಡಿದ ಹುಕುಮುಗಳು ಶಾಸನ ಸಭೆಗಳ ಎದುರು ಬರಬೇಕು. ಕಲಮು ೧೨೦ ರಲ್ಲಿ ನೋಂದಣಿಯ ಕರಾರಿನಿಂದ ಸಂಘಗಳಿಗೆ ವಿನಾಯತಿ ಕೊಡುವುದರ ಬಗ್ಗೆ ಇದೆ ಕಲಮು ೧೨೧ ರಲ್ಲಿ ಕೆಲವು ಸಂಘಗಳಿಗೆ ವಿನಾಯತಿ ಕೊಡುವುದರ ಸಲುವಾಗಿ ಇದೆ. ಈ ಎರಡೂ

ಕಲಮುಗಳನ್ವಯವಾಗಿ ಮಾಡಿದ ಪ್ರತಿಯೊಂದು ಹುಕುಮು ಶಾಸನ ಸಭೆಗಳ ಎದುರು ಮಂಡಿಸಲ್ಪಡತಕ್ಕದ್ದು.

ಕಲಮು ೧೪೯ ರನ್ವಯ ಮಾಡಿದ ಪ್ರತಿಯೊಂದು ನಿಯಮವು ಶಾಸನ ಸಭೆಗಳೆದುರು ಮಂಡಿಸಲ್ಪಡತಕ್ಕದ್ದು.

ಮೇಲೆ ಹೇಳಿದ ಪ್ರಕಟನೆ, ಹುಕುಮು ಹಾಗೂ ನಿಯಮವು ರಾಜ್ಯದ ಶಾಸನ ಸಭೆಯ ಹಾಗೂ ಶಾಸನ ಪರಿಷತ್ತಿನ ಎದುರು ಮಂಡಿಸಲ್ಪಡತಕ್ಕದ್ದು. ಆಯಾ ಸಭೆಯೆದುರು ಅವು ಒಟ್ಟಿನಲ್ಲಿ ಮುವ್ವತ್ತು ದಿವಸಗಳ ಕಾಲಾವಧಿಯವರೆಗೆ ಇರಬೇಕು. ಈ ಮುವ್ವತ್ತು ದಿವಸಗಳು ಸಭೆಗಳು ಅಧಿವೇಶನದಲ್ಲಿದ್ದಾಗಿನ ಮುವ್ವತ್ತು ದಿವಸಗಳು. ಒಂದೇ ಅಧಿವೇಶನದಲ್ಲಿ ಮುವ್ವತ್ತು ದಿವಸಗಳು ಆಗದಿದ್ದರೆ ಎರಡು ಇಲ್ಲವೆ ಹೆಚ್ಚು ಅಧಿವೇಶನಗಳಲ್ಲಿ ಸೇರಿ ಒಟ್ಟು ಮುವ್ವತ್ತು ದಿವಸಗಳ ವರೆಗೆ ಇಡಲ್ಪಡಬೇಕು. ಒಂದು ಸಭೆಯಲ್ಲಿ ಈ ಪ್ರಕಟನೆ, ಹುಕುಮು ಹಾಗೂ ನಿಯಮದಲ್ಲಿ ಏನಾದರೂ ಮಾರ್ಪಾಟು ಮಾಡಲಾದರೆ, ಅವನ್ನು ಮತ್ತೊಂದಕ್ಕೆ ಕಳಿಸಬೇಕು. ಎರಡೂ ಸಭೆಗಳು ಒಪ್ಪಿದರೆ ಮಾತ್ರ ಆ ಪ್ರಕಟನೆಯು, ಹುಕುಮು ಹಾಗೂ ನಿಯಮವು ಶಾಸನ ಸಭೆಗಳು ಒಪ್ಪಿದ ಸ್ವರೂಪದಲ್ಲಿ ಪರಿಣಾಮಕಾರಿಯಾಗತಕ್ಕದ್ದು. ಇಲ್ಲವೆ ಯಾವು ಪರಿಣಾಮಕಾರಿಯಾಗತಕ್ಕದ್ದಲ್ಲವೆಂದು ಶಾಸನ ಸಭೆಗಳು ಹೇಳುವುವೊ ಅವು ಪರಿಣಾಮಕಾರಿಯಾಗತಕ್ಕದ್ದಲ್ಲ.

**೧೩೧. ರದ್ಧತಿ ಹಾಗೂ ಸಂರಕ್ಷಣೆ.**

ಮುಂಬಯಿ ಪ್ರದೇಶದಲ್ಲಿ ಜಾರಿಯಲ್ಲಿರುವ ಮುಂಬಯಿ ಕೋಆಪರೇಟಿವ ಸೊಸಾಯಿಟೀಜ ಆ್ಯಕ್ಟ ೧೯೨೫ (ಮುಂಬಯಿ ಕಾಯಿದೆ ೭-೧೯೨೫), ಮದ್ರಾಸ ಪ್ರದೇಶದಲ್ಲಿ ಜಾರಿಯಲ್ಲಿರುವ ಮದ್ರಾಸ ಕೋಆಪರೇಟಿವ ಸೊಸಾಯಿಟೀಜ ಆ್ಯಕ್ಟ ೧೯೩೨ (ಮದ್ರಾಸ ಕಾಯಿದೆ -೬-೧೯೩೨) ಹಾಗೂ ಮದ್ರಾಸ ಲ್ಯಾಂಡಮಾರ್ಗೇಜ ಬ್ಯಾಂಕನ್ನಿ ಆ್ಯಕ್ಟ ೧೯೩೪ (ಮದ್ರಾಸ ಕಾಯಿದೆ-೧೦-೧೯೩೪), ಕೊಡಗು ಜಿಲ್ಲೆಯಲ್ಲಿ ಜಾರಿಯಲ್ಲಿರುವ ಕೂರ್ಗ ಕೋಆಪರೇಟಿವ ಸೊಸಾಯಿಟೀಜ ಆ್ಯಕ್ಟ ೧೯೩೬(ಕೂರ್ಗ ಕಾಯಿದೆ ನಂ ೨-೧೯೩೬) ಮೈಸೂರ ಪ್ರದೇಶದಲ್ಲಿ ಜಾರಿಯಲ್ಲಿರುವ ಮೈಸೂರ ಕೋಆಪರೇಟಿವ ಸೊಸಾಯಿಟೀಜ ಆ್ಯಕ್ಟ ೧೯೪೮ (ಮೈಸೂರ ಕಾಯಿದೆ ನಂ ೫೭—೧೯೪೮), ಹೈದರಾಬಾದ ಪ್ರದೇಶದಲ್ಲಿ ಜಾರಿಯಲ್ಲಿರುವ ಹೈದರಾಬಾದ ಕೋಆಪರೇಟಿವ ಸೊಸಾಯಟೀಜ ಆ್ಯಕ್ಟ ೧೯೫೨ (ಹೈದರಾಬಾದ ಕಾಯಿದೆ ೧೬-೧೯೫೨) ಹಾಗೂ ಹೈದರಾಬಾದ ಕೋಆಪರೇಟಿವ ಲ್ಯಾಂಡಮಾರ್ಗೇಜ ಬ್ಯಾಂಕ್ಸ ಆ್ಯಕ್ಟ ಫಸಲಿ ೩೪೯ (ಹೈದರಾಬಾದ ಕಾಯಿದೆ ನಂ ೩-೧೩೪೯ಫಸಲಿ) ಇವು ಈ ಮೂಲಕ ರದ್ದುಮಾಡಲ್ಪಟ್ಟಿವೆ;

ಆದರೆ ಈ ಕಾಯಿದೆಯು ಪ್ರಾರಂಭವಾಗುವ ತಾರೀಖಿಗೆ ಅಸ್ತಿತ್ವದಲ್ಲಿರುವ ಮೇಲೆ ಹೇಳಿದ ರದ್ಧತಿಯಾದ ಯಾವುದೇ ಕಾಯಿದೆಯನ್ವಯವಾಗಿ ನೋಂದಾಯಿ

ಸಿದ ಇಲ್ಲವೆ ನೋಂದಾಯಿಸಲಾಗಿದೆಯೆಂದು ಗಣಿಸಲಾದ ಯಾವುದೇ ಸಹಕಾರಿ ಸಂಘವು ಈ ಕಾಯಿದೆಯನ್ವಯವಾಗಿ ನೋಂದಾಯಿಸಲ್ಪಟ್ಟಿದೆಯೆಂದು ಗಣಿಸಲ್ಪಡತಕ್ಕದ್ದು; ಮತ್ತು ಇಂತಹ ಸಂಘದ ಪೋಟನಿಯಮಗಳು ಈ ಕಾಯಿದೆಯ ಇಲ್ಲವೆ ಇವರನ್ವಯ ಮಾಡಲಾದ ನಿಯಮಗಳ ಶರತುಗಳಿಗೆ ವಿಸಂಗತವಾಗದೆ ಇರುವಷ್ಟು ಮಟ್ಟಿಗೆ ಈ ಕಾಯಿದೆಯ ಹಾಗೂ ಅದರನ್ವಯವಾಗಿ ಮಾಡಲಾದ ನಿಯಮಗಳ ಶರತುಗಳ ಅನುಸಾರವಾಗಿ ಹೆಚ್ಚುಕಡಿಮೆ ಇಲ್ಲವೆ ರದ್ದುಮಾಡಲ್ಪಡುವ ತನಕ ಜಾರಿಯಲ್ಲಿ ಉಳಿಯತಕ್ಕದ್ದು.

ಆದರೆ, ಮೇಲ್ಕಾಣಿಸಿದ ಅಪವಾದದಂಕಿತವಾಗಿ, ಮೈಸೂರ ಜನರಲಕ್ಲಾಜಿಸ ಆ್ಯಕ್ಟ ೧೮೯೯ (ಮೈಸೂರ ಕಾಯಿದೆ ನಂ ೩—೧೮೯೯) ರ ಕಲಮು ೬ ಮೇಲ್ಕಾಣಿಸಿದ ಕಾಯಿದೆಗಳ ರದ್ದತಿಯ ಸಂಬಂಧವಾಗಿ ಅನ್ವಯಿಸತಕ್ಕದ್ದು. ಹಾಗೂ ಆ ಕಾಯಿದೆಯ ಕಲಮು ೮ ಹಾಗೂ ೨೪ ಇವು ಮೇಲೆ ಹೇಳಿದ ಕಾಯಿದೆಗಳುರದ್ದಾಗಿ ಮೈಸೂರು ಕಾಯಿದೆಗಳೆಂದು ಪುನಃ ಪಾಸಾದಹಾಗೆ ಎಂದು ಅನ್ವಯಿಸತಕ್ಕದ್ದು.

**ವಿವೇಚನೆ**

ಮೈಸೂರ ಸಹಕಾರಿ ಸಂಘಗಳ ಕಾಯಿದೆ ೧೯೫೯ ಇದು ಪುನರ್ಘಟಿತ ಮೈಸೂರ ರಾಜ್ಯಕ್ಕೆ ಅನ್ವಯಿಸುವ ಕಾಯಿದೆ. ೧೯೫೬ ರ ನವಂಬರ ೧ ನೆಯ ತಾರೀಖಿನಕಿಂತ ಮೊದಲು ಬೇರೆ ಬೇರೆ ಭಾಗಗಳಾಗಿದ್ದ ಪ್ರದೇಶಗಳು ಒಂದುಗೂಡಿ ಮೈಸೂರು ರಾಜ್ಯವಾಗಿದೆ. ಆಗ ಬೇರೆ ಬೇರೆ ಭಾಗಗಳಲ್ಲಿ ಬೇರೆ ಬೇರೆ ಕಾಯಿದೆಗಳು ಜಾರಿಯಲ್ಲಿದ್ದವು. ಆ ಸಹಕಾರಿ ಸಂಘಗಳ ಸಂಬಂಧವಾಗಿರುವ ಕಾಯಿದೆಗಳು ಈ ಹೊಸ ಕಾಯಿದೆಯು ಮೂಲಕ ರದ್ದಾಗುವುವು.

ಈ ಹೊಸ ಕಾಯಿದೆಯು ಪ್ರಾರಂಭವಾದ ತಾರೀಖಿಗೆ ಹಳೆಯ ಕಾಯಿದೆಯ ಪ್ರಕಾರ ನೋಂದಾಯಿಸಲ್ಪಟ್ಟು ಅಸ್ತಿತ್ವದಲ್ಲಿರುವ ಸಂಘಗಳು ಈ ಹೊಸ ಕಾಯಿದೆಯ ಪ್ರಕಾರ ನೋಂದಾಯಿಸಲ್ಪಟ್ಟವೆಂದು ಗಣಿಸಲ್ಪಡಲಾಗುವುದು. ಅಂದರೆ ಆ ಸಂಘಗಳ ಅಸ್ತಿತ್ವಕ್ಕೆ ಯಾವ ವ್ಯತ್ಯಯವೂ ಬರುವುದಿಲ್ಲ. ಅದರಂತೆ ಆ ಹಳೆಯ ಕಾಯಿದೆಗಳ ಪ್ರಕಾರ ನೋಂದಾಯಿಸಲಾದ ಸಂಘಗಳ ಪೋಟ ನಿಯಮಗಳು ಕೂಡ ಮುಂದುವರೆಯುವುವು. ಆದರೆ, ಈ ಹೊಸ ಕಾಯಿದೆಗೆ ಇಲ್ಲವೆ ಇದರ ನಿಯಮಗಳಿಗೆ ಪೋಟ ನಿಯಮಗಳು ವಿಸಂಗವಾಗುವಷ್ಟು ಬಿಟ್ಟು ಉಳಿದವುಗಳು ಜಾರಿಯಲ್ಲಿ ಉಳಿಯುವುವು. ಹೊಸ ಕಾಯಿದೆಯ ಪ್ರಕಾರ ಆ ಪೋಟ ನಿಯಮಗಳು ಹೆಚ್ಚು ಕಡಿಮೆ ಮಾಡುವ ತನಕ ಜಾರಿಯಲ್ಲಿ ಉಳಿಯುವುವು.

ಒಂದು ಕಾಯಿದೆ ರದ್ದಾಗಿ ಮತ್ತೊಂದು ಆ ವಿಷಯದ ಬಗ್ಗೆ ಪಾಸಾದಾಗ ಆದ ಸ್ಥಿತ್ಯಂತರಗಳ ಬಗ್ಗೆ ಏನು ಮಾಡಬೇಕೆಂಬುದನ್ನು ಜನರಲ ಕ್ಲಾಜಿಸ ಕಾಯಿದೆಯಲ್ಲಿ ಹೇಳಿರುತ್ತದೆ. ಆ ಕಾಯಿದೆಯ ಕಲಮು ೬ ನೋಡಬೇಕು. ಅದರಂತೆ ಹಳೆಯ ಕಾಯಿದೆಗಳು ರದ್ದಾಗಿ ಅವೇ ಹೊಸ ಕಾಯಿದೆಯಾಗಿ ಮೈಸೂರ

ಕಾಯಿದೆಗಳಾದಂತೆ ನೋಡಿಕೊಳ್ಳುವ ಹಾಗೆ ಜನರಲ್ ಕ್ಲಾಜಿಸ್ ಆ್ಯಕ್ಟದ ಕಲಮು ೮ ಹಾಗೂ ೨೪ ಹೇಳುವುವು. ಅವುಗಳನ್ನು ನೋಡಬೇಕು.

## ೧೩೨. ಆತಂಕ ನಿವಾರಣೆಗಾಗಿ ಅಧಿಕಾರ

(೧) ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ತತ್‌ಕ್ಷಣ ಮುಂಚೆ ಜಾರಿಯಲ್ಲಿರುವ ಕಾಯಿದೆಗಳ ಶರತುಗಳಿಂದ ಇದರ ಶರತುಗಳಿಗೆ ಅಧಿಕಾರ ಬರುವ ಸಂಧಿಕಾಲದಲ್ಲಿ ಈ ಕಾಯಿದೆಯ ಶರತುಗಳನ್ನು ಪರಿಣಾಮಕಾರಿಯಾಗಿ ಮಾಡಲು ಯಾವುದೇ ಆತಂಕವುಂಟಾದರೆ, ಆ ಆತಂಕ ನಿವಾರಣೆಗಾಗಿ ಅವಶ್ಯಕವೆಂದು ಇಲ್ಲವೆ ಪ್ರಸಂಗೋಚಿತವೆಂದು ಕಂಡುಬಂದ ರೀತಿಯಲ್ಲಿ ರಾಜ್ಯ ಸರಕಾರವು ಅಧಿಕೃತ ಗ್ಯಾಜೆಟದಲ್ಲಿಯ ಪ್ರಕಟನೆಯಿಂದ ಅನುಕೂಲತೆಗಳನ್ನು ಮಾಡಬಹುದು.

(೨) (ಈ ಕಾಯಿದೆಯು ಪ್ರಾರಂಭವಾಗುವುದಕ್ಕೆ ಮುಂಚಿತವಾಗಿ ಜಾರಿಯಲ್ಲಿರುವ ಕಾಯಿದೆಗಳ ಶರತುಗಳಿಂದ ಅಧಿಕಾರ ಬದಲಾಗುವ ಸಂಧಿಕಾಲದ ಸಂಬಂಧವಾಗಿ ಇರುವದನ್ನು ಬಿಟ್ಟು) ಈ ಕಾಯಿದೆಯ ಶರತುಗಳನ್ನು ಪರಿಣಾಮಕಾರಿಯಾಗಿ ಮಾಡುವುದಕ್ಕಾಗಿ ಯಾವುದೇ ಆತಂಕ ಉಂಟಾದರೆ, ಆ ಆತಂಕ ನಿವಾರಣೆಗಾಗಿ ಅವಶ್ಯಕವೆಂದು ಇಲ್ಲವೆ ಪ್ರಸಂಗೋಚಿತವೆಂದು ಕಂಡುಬಂದ ರೀತಿಯಲ್ಲಿ ಈ ಕಾಯಿದೆಯ ಉದ್ದೇಶಗಳಿಗೆ ವಿಸಂಗತ ವಾಗದಂತೆ, ರಾಜ್ಯ ಸರಕಾರವು ಪ್ರಕಟನೆಯಿಂದ ಅಂತಹ ಅನುಕೂಲತೆಯನ್ನು ಮಾಡಬಹುದು.

### ವಿವೇಚನೆ

ಹಳೆಯ ಕಾಯಿದೆಗಳು ಮಾಯವಾಗಿ ಹೊಸ ಕಾಯಿದೆಯು ಜಾರಿಯಲ್ಲಿ ಬರುವಕಾಲಕ್ಕೆ ಈ ಸಂಧಿಕಾಲದಲ್ಲಿ ಆತಂಕಗಳು ಉಂಟಾಗುವ ಸಂಭವ ಇರುವುದು. ಆ ಆತಂಕ ನಿವಾರಣೆಗಾಗಿ ಅವಶ್ಯಕ ವೆನ್ನಿಸುವ ಇಲ್ಲವೆ ಪ್ರಸಂಗೋಚಿತವೆನ್ನಿಸುವ ಅನುಕೂಲವಾದ ಶರತುಗಳನ್ನು ಪ್ರಕಟನೆಯ ಮೂಲಕ ರೂಪಿಸಲು ರಾಜ್ಯ ಸರಕಾರಕ್ಕೆ ಈ ಕಲಮು ಅಧಿಕಾರ ಕೊಡುತ್ತದೆ. ಅದರ ಪ್ರಕಾರ ರಾಜ್ಯ ಸರಕಾರವು ಪ್ರಕಟನೆ ಹೊರಡಿಸಿ, ಅಧಿಕೃತ ಗ್ಯಾಜೆಟದಲ್ಲಿ ಪ್ರಸಿದ್ಧಿಸಿ ಆತಂಕ ನಿವಾರಣೆ ಮಾಡಬಹುದು. ಆ ಹೊಸ ಸಂಧಿಕಾಲದ ಶರತುಗಳು ಈ ಕಾಯಿದೆಯ ಉದ್ದೇಶಗಳಿಗೆ ವಿಸಂಗತವಾಗದಂತೆ ಇರಬೇಕು ಎಂದು ಹೇಳಲಾದುದನ್ನು ಗಮನಿಸಬೇಕು.

— ಮುಗಿದುದು —